# ಬೆಂಗಳೂರು ಗ್ರಾಮಾಂತರ ಜಿಲ್ಲೆಯ

# "ಐತಿಹ್ಯಗಳು ಒಂದು ಸಾಂಸ್ಕೃತಿಕ ಅಧ್ಯಯನ"

ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ
ಸಲ್ಲಿಸಲಾದ ಮಹಾಪ್ರಬಂಧ


**ಸಂಶೋಧಕರು**
ಹರೀಶ.ಯು

**ಮಾರ್ಗದರ್ಶಕರು**
ಡಾ.ಮುನಿಯಪ್ಪ
ಪ್ರಾಧ್ಯಾಪಕರು, ಕನ್ನಡ ಅಧ್ಯಯನ ಕೇಂದ್ರ
ಬೆಂಗಳೂರು ವಿಶ್ವವಿದ್ಯಾಲಯ.





## ಕನ್ನಡ ಅಧ್ಯಯನ ಕೇಂದ್ರ

## ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು–೫೬೦೦೫೬

## ೨೦೧೯

# ಮಾರ್ಗದರ್ಶಕರ ಪ್ರಮಾಣ ಪತ್ರ

**ಬೆಂಗಳೂರು ಗ್ರಾಮಾಂತರ ಜಿಲ್ಲೆಯ "ಐತಿಹ್ಯಗಳು ಒಂದು ಸಾಂಸ್ಕೃತಿಕ ಅಧ್ಯಯನ"** ಎಂಬ ವಿಷಯವನ್ನು ಕುರಿತು ಸಂಶೋಧನ ಮಹಾಪ್ರಬಂಧವನ್ನು **ಬೆಂಗಳೂರು ವಿಶ್ವವಿದ್ಯಾಲಯದ ಪಿಎಚ್.ಡಿ. ಪದವಿಗಾಗಿ** **ಹರೀಶ.ಯು** ಅವರು ನನ್ನ ಮಾರ್ಗದರ್ಶನದಲ್ಲಿ ಸ್ವತಂತ್ರ ಅಧ್ಯಯನದ ಮೂಲಕ ಸಿದ್ಧಪಡಿಸಿದ್ದಾರೆ.

ಈ ಮಹಾಪ್ರಬಂಧವನ್ನು ಮೊದಲು ಯಾವುದೇ ವಿಶ್ವವಿದ್ಯಾಲಯದ ಪದವಿ ಪ್ರಕಟಣೆಗಾಗಿ ಸಲ್ಲಿಸಿರುವುದಿಲ್ಲವೆಂದು ನಾನು ಈ ಮೂಲಕ ದೃಢೀಕರಿಸುತ್ತೇನೆ.

**ದಿನಾಂಕ:** **ಮಾರ್ಗದರ್ಶಕರು**

ಸ್ಥಳ: ಬೆಂಗಳೂರು

# ಸಂಶೋಧಕರ ಪ್ರಮಾಣ ಪತ್ರ

**ಬೆಂಗಳೂರು ಗ್ರಾಮಾಂತರ ಜಿಲ್ಲೆಯ "ಐತಿಹ್ಯಗಳು ಒಂದು ಸಾಂಸ್ಕೃತಿಕ ಅಧ್ಯಯನ"** ಎಂಬ ಸಂಶೋಧನ ಮಹಾಪ್ರಬಂಧವನ್ನು **ಡಾ.ಮುನಿಯಪ್ಪ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ **ಬೆಂಗಳೂರು ವಿಶ್ವವಿದ್ಯಾಲಯಕ್ಕೆ, ಪಿಎಚ್.ಡಿ. ಪದವಿಗಾಗಿ** ಸಲ್ಲಿಸುತ್ತಿದ್ದೇನೆ. ಈ ಮಹಾಪ್ರಬಂಧ ನನ್ನ ಸ್ವಂತ ಪರಿಶ್ರಮದ ಫಲವಾಗಿದ್ದು ಈ ಮೊದಲು ಇದನ್ನು ಯಾವುದೇ ಪದವಿ ಪ್ರಕಟಣೆಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ: **ಸಂಶೋಧನ ವಿದ್ಯಾರ್ಥಿ**

ಸ್ಥಳ: ಬೆಂಗಳೂರು

**ಹರೀಶ.ಯು**

# ಕೃತಜ್ಞತೆಗಳು

**ಬೆಂಗಳೂರು ಗ್ರಾಮಾಂತರ ಜಿಲ್ಲೆಯ "ಐತಿಹ್ಯಗಳು ಒಂದು ಸಾಂಸ್ಕೃತಿಕ ಅಧ್ಯಯನ"** ಎಂಬ ವಿಷಯವನ್ನು ಸಂಶೋಧನೆ ಮಾಡಲು ನನಗೆ ಮೂಲ ಪ್ರೇರಣೆಯಾಗಿ ಬರಲು ಕಾರಣ, ನನ್ನ ಚಿಕ್ಕಂದಿನ ದಿನಗಳಲ್ಲಿ ನನ್ನ ಅಜ್ಜಿಯ ಜೊತೆ ಕುರಿ ಕಾಯಲು ಹೋದಾಗ, ನನ್ನ ಮನಸ್ಸಿಗೆ ಮನರಂಜನೆಯನ್ನು ನೀಡಲು ಅವರು ದಿನಕ್ಕೆ ಎರಡು ದಂತ ಕಥೆಗಳನ್ನು ಪ್ರಕೃತಿಯ ವಿಸ್ಮಯತೆಗಳನ್ನು ಕಥೆಗಳನ್ನು ಹೇಳಿ, ನನ್ನನ್ನು ಅದರ ಬಗ್ಗೆ ಕುತೂಹಲ ಮೂಡಿಸಿದ್ದರಿಂದ ನನಗೆ ಜಾನಪದೀಯ ಅಧ್ಯಯನ ಮಾಡಲು ಮೂಲ ಪ್ರೇರಣೆಯಾದ ಅಜ್ಜಿಯಾದ **ಸ್ವರ್ಗೀಯ ಮುನಿವೆಂಕಟಮ್ಮನವರಿಗೆ**, ನನ್ನ ಮೊದಲ ಹೃದಯ ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ನನ್ನ ಸಂಶೋಧನಾ ಆಸಕ್ತಿಗೆ ನೀರೆರೆದು ಬೌದ್ಧಿಕ ಚಿಂತನೆಗೆ ಸಾರ ತುಂಬಿ, ಜ್ಞಾನದ ಬೆಳಕನ್ನು ಮೂಡಿಸಿ ನನ್ನಲ್ಲಿನ ಬುದ್ಧಿಯನ್ನು ಚುರುಕುಗೊಳಿಸಿ ಹಾರೈಸಿ ನನಗೆ ಸ್ಪೂರ್ತಿ ನೀಡಿದ, ನನ್ನ ಮಹಾಪ್ರಬಂಧದ ಸಂಶೋಧನ ಮಾರ್ಗದರ್ಶಕ ಗುರುಗಳಾದ **ಡಾ.ಮುನಿಯಪ್ಪ,** ಪ್ರಾಧ್ಯಾಪಕರು, ಕನ್ನಡ ಅಧ್ಯಯನ ಕೇಂದ್ರ, ಬೆಂಗಳೂರು ವಿಶ್ವವಿದ್ಯಾಲಯ, ಅವರಿಗೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ನನ್ನ ಸಂಶೋಧನಾ ಪ್ರಗತಿಯನ್ನು ಸದಾ ಪರಿಶೀಲಿಸಿ ಉಪಯುಕ್ತ ಸಲಹೆಗಳನ್ನು ನೀಡುತ್ತಿದ್ದ ಗುರುಗಳಾದ **ಡಾ.ಬಿ.ಗಂಗಾಧರ್** ನಿರ್ದೇಶಕರು ಕನ್ನಡ ಅಧ್ಯಯನ ಕೇಂದ್ರ, **ಡಾ.ಎಂ.ಸುಮಿತ್ರ, ಡಾ.ಹೊನ್ನುಸಿದ್ದಾರ್ಥ. ಡಾ.ಚಿತ್ತಯ್ಯ ಪೂಜಾರ್** ರವರಿಗೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ನನ್ನ ಸಂಶೋಧನೆಯ ಬಗ್ಗೆ ಸದಾ ಕಾಳಜಿಯನ್ನು ತೋರುತ್ತಿದ್ದ, **ತಂದೆ ಉತ್ತನಳ್ಳಪ್ಪ ಮತ್ತು ತಾಯಿ ಲಕ್ಷ್ಮಮ್ಮರವರಿಗೆ** ಮತ್ತು ತಾಯಿಗಿಂತ ಹೆಚ್ಚಾಗಿ ಪ್ರೀತಿ ಅಕ್ಕರೆಯನ್ನ ತೋರಿ ನನ್ನ ಸಂಶೋಧನೆ ಪೂರ್ಣವಾಗಲು ಕಾರಣರಾದ **ನನ್ನ ಪ್ರೀತಿಯ ಅಕ್ಕ ಮಹಾಲಕ್ಷ್ಮಿರವರಿಗೆ** ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ನನ್ನ ಸಂಶೋಧನೆ ಸಂಬಂದಿಸಿದಂತೆ, ಹಲವು ಉಪಯುಕ್ತ ಮಾಹಿತಿಗಳನ್ನು ಕೊಡುತ್ತಿದ್ದ ನನ್ನ ಪ್ರೀತಿಯ ಗೆಳೆಯರಾದ **ಅರ್ಜುನ್, ಬೈರಯ್ಯ, ಶಿವನಾಯ್ಕ, ಸಾಧಿಕ್ ಪಾಷ, ಮುನೇಶ್.ಕೆ.ಎ, ಎಸ್.ಮೋಹನ್, ಮುತ್ತುರಾಜ್, ಸುಗುಣ, ಮೋಹನ್ ನಾಯ್ಕ್ ಸಿ ಅರ್, ಡಾ.ಕೆ.ಎನ್.ಕೃಷ್ಣಪ್ಪ, ಡಾ.ಜಿ.ಎಲ್.ವಿಜಯೇಂದ್ರ, ರಮೇಶ್.ಸಿ.ಎಂ, ನಿಜಾಂಖಾನ್, ಜನಾರ್ಧನ್,**

**ವಿಜಯಕುಮಾರ್, ಯುವರಾಜು, ಕೆ.ಮನೋಹರ್,** ಅಚ್ಚುಕಟ್ಟಾಗಿ ನೋಟ್ಸ್‌ನ್ನು ಟೈಪ್ ಮಾಡಿಕೊಟ್ಟಂತಹ ಕೀರ್ತಿ ರವರಿಗೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ನನ್ನ ಪ್ರೀತಿಯ ಕುಟುಂಬ ವರ್ಗದವರಾದ **ಶ್ರೀ ರಾಮಪ್ಪ, ಮೋಟಪ್ಪ, ದೇವಪ್ಪ, ಅಣ್ಣನಾದ ಸತೀಶ್ ಅತ್ತಿಗೆ ಮೀನಾ, ಅಕ್ಕಂದಿರಾದ ಶಾರದ, ಮುನಿಯಮ್ಮ, ವಿಶಾಲಕ್ಷಿ, ನನ್ನ ಪ್ರೀತಿಯ ಅಣ್ಣ ತಮ್ಮಂದಿರಾದ ಮುರಳಿಧರ, ಶೋಭ, ಮಂಜುನಾಥ, ಕೀರ್ತನ, ಸಂತೋಷ, ವೇಣು, ಮಿಥುನ್, ಲೋಚನ್, ಲಾಸಿಯ, ಲೋಕಭಿರಾಮ್, ಮಕ್ಕಳಾದಂತಹ ಶ್ರೀನಿಧಿ, ಅಕ್ಷರ, ನಿಹಾಲ್ ಶ್ರೀ, ಪುಟ್ಟು, ಭಾರ್ಗವ್ ಶ್ರೀ, ವಿಶೇಷವಾಗಿ ನನ್ನ ಜೀವನದ ಗೆಳತಿ ಶೋಭರವರಿಗೆ** ಕೃತಜ್ಞತೆಗಳನ್ನು ಸಲ್ಲಿಸುತ್ತಿದ್ದೇನೆ.

**ಹರೀಶ್.ಯು**

## ಪರಿವಿಡಿ

# ಅಧ್ಯಾಯ–೧

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ, ಇದುವರೆಗೂ ನಡೆದಿರುವ ಅಧ್ಯಯನ, ಪ್ರಸ್ತುತ ಅಧ್ಯಯನ

"ಆದಿಕಾಲದಿಂದ ಮಾನವನನ್ನು ಮೂಕ ವಿಸ್ಮಿತನನ್ನಾಗಿ ಮಾಡುತ್ತಾ ಬಂದ ಚಿತ್ರಮಯ ಜಗತ್ಸೃಷ್ಟಿ ಅವನ ಪಾಲಿಗೆ ಬಿಡಿಸಲಾರದ ಒಗಟು. ಆದಿಮಾನವನಿಗಂತೂ, ಭೂಮ್ಯಾಕಾಶಗಳಲ್ಲಿ ತೋರಿಬಂದ ವೈಚಿತ್ರ್ಯಗಳು ಸುಖಶಾಂತಿಯನ್ನೋ, ದುಗುಡದುಮ್ಮಾನಗಳನ್ನೋ ತಂದೊಡ್ಡುವುದು ಸಹಜವಾಗಿತ್ತು. ಆದರೆ, ಅವೆಲ್ಲಕ್ಕೂ ಕಾರಣಗಳನ್ನು ಹೇಳುವ ಸ್ಥಿತಿಯಲ್ಲಿರಲಿಲ್ಲ. ಇದರ ಬಗ್ಗೆ ಅವನ ಪ್ರಜ್ಞೆ ತೀರಾ ಕೆಳಮಟ್ಟದಲ್ಲಿದ್ದುದೇ ಇದಕ್ಕೆ ಮೂಲ ಕಾರಣ. ಆಕಾಶದಲ್ಲಿ ಸೂರ್ಯ–ಚಂದ್ರರು ಬೆಳಗಿದಾಗ, ನಕ್ಷತ್ರಗಳು ಮೂಡಿ ಮಿನುಗಿದಾಗ ಅವನ ಆನಂದಕ್ಕೆ ಪಾರವೇ ಇರಲಿಲ್ಲ. "ಬೆಟ್ಟಗುಡ್ಡಗಳನ್ನು ಕಂಡಾಗ, ಗಿಡ ಮರ ಬಳ್ಳಿಗಳು ಚಿಗಿತು ಹೂ ಬಿಟ್ಟು, ಕಾಯಾಗಿ ಫಲಭಾರದಿಂದ ಬಳುಕುವುದನ್ನು ಕಂಡಾಗ ಅವನ ಮನ ಹಿಗ್ಗುತ್ತಿತ್ತು. ಶಾಂತಿ, ಸಮಾಧಾನ ಅವನ ಮನ ತುಂಬಿ ಹೊರಸೂಸುತ್ತಿತ್ತು. ಅದೇ ಮನಸ್ಸು ಪ್ರಕೃತಿಯ ಪ್ರಕೋಪ–ವಿಕೋಪಗಳನ್ನು ಎದುರಿಸಿದಾಗ ಅಂಜಿ ನಡುಗುತ್ತಿತ್ತು. ಆಕಾಶದಲ್ಲಿ ಮೋಡ ಕವಿದು ಗುಡುಗು, ಸಿಡಿಲು, ಮಿಂಚು ಆರ್ಭಟಿಸಿದಾಗ, ಅವನ ಮನದಲ್ಲಿ ಭಯ, ಭೀತಿ ಮೂಡಿ ಅಂಜಿಕೆ ಎಲ್ಲೆಡೆಯಿಂದ ಆವರಿಸುತ್ತಿತ್ತು. ಚಂದ್ರಗ್ರಹಣ, ಸೂರ್ಯಗ್ರಹಣ, ಭೂಕಂಪ ಮೊದಲಾದ ಪ್ರಕೃತಿ ವಿಕೋಪಗಳು ಸಂಭವಿಸಿದಾಗ ಅವನ ಮನಸ್ಸು ಡೋಲಾಯಮಾನವಾಯಿತು."[೧] ಆದರೂ, ಅವುಗಳಲ್ಲಿ ಒಂದು ಕ್ರಮಬದ್ಧತೆ ಇರುವುದನ್ನು ಅರಿತಾಗ ಅವನು ವಿಚಾರಶೀಲನಾಗದೇ ಇರಲಿಲ್ಲ.

ಹೀಗೆ ಅವನ ತಲೆಯಲ್ಲಿ ಹಲವಾರು ವಿಚಾರಗಳು ಮೂಡತೊಡಗಿದವು. "ಇಷ್ಟೊಂದು ಕ್ರಮಬದ್ಧವಾಗಿ ಈ ಎಲ್ಲಾ ವ್ಯವಹಾರಗಳು ಹೇಗೆ ನಡೆಯುತ್ತವೆ? ಈ ಕ್ರಮಬದ್ಧತೆಗೆ ಕಾರಣರು ಯಾರು? ಹಾಗೆ ರೂಪಿಸಿದಾತ ಹೇಗಿದ್ದಾನೆ? ಎಲ್ಲಿದ್ದಾನೆ? ಅವನು ಈ ಪ್ರಶ್ನೆಗಳಿಗೆ ಉತ್ತರ ಹುಡುಕುತ್ತ ಬಂದುದಕ್ಕೆ ಜಗತ್ತು ನಡೆಯುವ ಹಿಂದೆ ಯಾವುದೋ ಒಂದು ಶಕ್ತಿಯಿದೆಯೆಂಬುದು ಆತನಿಗೆ ಹೊಳೆದದ್ದೇ ಒಂದು ಆಶ್ಚರ್ಯದ ಸಂಗತಿ. ಪ್ರಾಚೀನ ಕಾಲದಿಂದ ಇಂದಿನ ಕಾಲದವರೆಗಿನ ಮಾನವ ಸಂಸ್ಕೃತಿಯ ಇತಿಹಾಸದಲ್ಲಿ ದೇವ–ದೇವತೆಗಳ ಕಲ್ಪನೆ ರೋಚಕವಾದುದು. ಭಾಷೆ ಇನ್ನೂ ರೂಪುಗೊಳ್ಳದ ಕೇವಲ ಕೂಗು, ಸನ್ನೆಗಳಿಂದಲೇ

ಭಾವನೆಗಳನ್ನು ಅಭಿವ್ಯಕ್ತಗೊಳಿಸುವಂಥ ಕಾಲದಲ್ಲಿ ಸ್ವರ್ಗ–ನರಕ, ಪಾಪ–ಪುಣ್ಯ ಮುಂತಾದ ಯಾವುದರ ಬಗ್ಗೆಯೂ ಪರಿಕಲ್ಪನೆ ಇಲ್ಲದ ಮುಗ್ಧ ಮನಸ್ಸಿನ ಆದಿಮಾನವನಿಗೆ ಪ್ರಕೃತಿಯೇ ಸರ್ವಸ್ವವಾಗಿತ್ತು."[೨] ಸೂರ್ಯೋದಯ, ಸೂರ್ಯಾಸ್ತ, ಚಂದ್ರ, ನಕ್ಷತ್ರ, ಮೋಡ, ಮುಗಿಲು, ಗುಡುಗು, ಸಿಡಿಲು ಮುಂತಾದ ನಿಸರ್ಗದ ರಹಸ್ಯಗಳಿಗೆ ನಿಬ್ಬೆರಗಾದ. ಅವನ ಕಣ್ಣಿಗೆ ಕಾಣದ, ಬುದ್ದಿಗೆ ನಿಲುಕದ ಅದೆಷ್ಟೋ ಅದ್ಬುತಗಳು ಭಯಮೂಲವಾದ ಅವನ ತರ್ಕ ವಿತರ್ಕಗಳಿಗೆ ಹೊಳಪು ತೋರಿದವು.

ಅಜ್ಞಾತವಾದುದರ ಬಗೆಗಿನ ಜಿಜ್ಞಾಸೆಯಲ್ಲಿಯೇ ದೇವರ ಕಲ್ಪನೆ ಅಥವಾ ಅದಮ್ಯಶಕ್ತಿಯ ಅರಿವು ಮೂಡಿಸಿತು. ತನ್ನ ಬದುಕಿನ ಸುಖ–ದುಃಖಕ್ಕೆ ಕಾರಣವಾಗುವ ಸೃಷ್ಟಿಯ ಪ್ರತಿಯೊಂದು ವಸ್ತುವಿನ ಬಗೆಗೂ ಆತನಲ್ಲಿ ಭಯ, ಶ್ರದ್ಧೆ, ಭಕ್ತಿ ಬೆಳೆದು ನಿಂತವು. ಆಗ ಸೃಷ್ಟಿಯ ಗೋಚರಾಗೋಚರ ವಸ್ತುಗಳೆಲ್ಲವೂ ಅವನಿಗೆ ಉಪಾಸನಾ ಯೋಗ್ಯ ದೇವತೆಗಳೆನಿಸಿದವು. ಹೀಗಾಗಿ ದೇವ–ದೇವತೆಗಳ ಸಂಖ್ಯೆ ಬೆಳೆಯುತ್ತಾ ಹಿಂದೂ 'ಸಂಸ್ಕೃತಿ'ಯಲ್ಲಿ ಸುಮಾರು ಮೂವತ್ತಮೂರು ಕೋಟಿಗೂ ಹೆಚ್ಚು ದೇವ–ದೇವತೆಗಳು ಸೃಷ್ಟಿಯಾದವು. ಈ ದೇವತೆಯ ಅವ್ಯಕ್ತ ಶಕ್ತಿಯ ಸ್ವರೂಪವನ್ನು ಅರಿಯಲು ಮಾನವ ಬಹುಕಾಲದಿಂದ ಪ್ರಯತ್ನಿಸುತ್ತಲೇ ಬಂದಿದ್ದಾನೆ. ಇದರಿಂದ ಭಯ–ಭೀತಿಯನ್ನು ಹುಟ್ಟಿಸುವುದೇ ಭೂತ, ಶಾಂತಿ ಸಮಾಧಾನ ತಂದುಕೊಡುವುದೇ ದೇವತೆ ಎಂಬ ಕಲ್ಪನೆ ಅವನಲ್ಲಿ ಮೂಡತೊಡಗಿತು. "ಕಾಲಕ್ರಮೇಣ ಪ್ರಕೃತಿ ಪುರುಷರ ಅವಿನಾಭಾವದ ಸಂಬಂಧವನ್ನು ಈತ ಅರಿತುಕೊಂಡಾಗ, ಪುರುಷನಿಗಿಂತ ಪ್ರಕೃತಿಯೇ ಉಗ್ರವಾದುದೆಂದು ಬಗೆದು ಪ್ರಕೃತಿ ಪೂಜೆಗೆ ತೊಡಗಿದ. ತನಗೆ ಬರುವ ಅನಿಷ್ಟಗಳಿಂದ ದೂರವಾಗಿರಲು ಪ್ರಕೃತಿಯನ್ನು ಆರಾಧಿಸಿದ. ಈತ ಪ್ರಕೃತಿಯನ್ನೇ ಆದಿಶಕ್ತಿ ಎಂದು ಬಗೆದು 'ಶಕ್ತಿ' ಪೂಜೆಯಲ್ಲಿ ನಿರತನಾದ. ಹೀಗೆ ಗ್ರಾಮದೇವತೆಯ ಉದಯವಾಯಿತು, ಶಕ್ತಿ ಎಲ್ಲಾ ಗ್ರಾಮದೇವತೆಗಳ ಮೂಲಸ್ವರೂಪವೆಂದು ತಿಳಿದ ಈತ ಅವಳನ್ನು ಒಲಿಸಿಕೊಳ್ಳುವ ಪ್ರಯತ್ನವನ್ನು ನಡೆಸಿದ."[೩] ಈ ಪ್ರಕ್ರಿಯೆಯಲ್ಲಿ ಅವನು ತಾನು ಸೇವಿಸುವಂತೆ ದೇವಿಗೆ ಮಾಂಸಾಹಾರ ಹಾಗೂ ಸಸ್ಯಾಹಾರಗಳನ್ನು ನೈವೇಧ್ಯವನ್ನಾಗಿಸಿ ಆರಾಧಿಸಿದ. ಅವುಗಳಿಗೆ ಗುಡಿಕಟ್ಟಿ ಭಯ ಭಕ್ತಿಯಿಂದ ಆರಾಧಿಸತೊಡಗಿತು, ಆದಿಕಾಲದಿಂದ ದೇವರ ಉಗಮವಾಗುತ್ತಾ ಬಂದು ಇಂದು ಎಣಿಸಲಾಗದಷ್ಟು ದೇವರುಗಳ ಉದ್ಭವವಾಗಿರುವುದು ಕಂಡಬರುತ್ತದೆ.

"ಈ ದೇವರುಗಳ ಅಸ್ತಿತ್ವ ಇರುವುದು ಸಮಾಜದ ಸ್ವಾಸ್ಥ್ಯವನ್ನು ಉಳಿಸಲಿಕ್ಕೆಂದು ಬಗೆದ ಈತ ದೇವರ ಹೆಸರಿನಲ್ಲಿ ಅನೇಕ ಕಟ್ಟುಪಾಡುಗಳನ್ನು ಹಾಗೂ 'ಹಬ್ಬ' ಆಚರಣೆಗಳನ್ನು

ತಂದು ಅವನ್ನು ತಪ್ಪದೆ ನಡೆಸಿಕೊಂಡು ಬಂದ, ಸಮಾಜ ದೇವತೆಗಳ ಕಲ್ಪನೆಯಿಂದ ತಗ್ಗಿ-ಬಗ್ಗಿ ನಯವಿನಯದಿಂದ ಇತರರಿಗೆ ತೊಂದರೆ ಕೊಡದ ಹಾಗೆ ನೈತಿಕತೆಯನ್ನು ಮರೆಯದ ಹಾಗೆ ಸಾಗುವುದೆಂದು ಬಗೆದು ಕಾಲಾನುಕಾಲದಿಂದ ಇದನ್ನು ನಂಬಿ ನಡೆದುಕೊಳ್ಳತೊಡಗಿದ, ಪೂಜಿಸಿದ ಮತ್ತು ಅದರ ಬಗ್ಗೆ 'ಧರ್ಮಗ್ರಂಥ'ಗಳನ್ನು ರಚಿಸಿದ. ಹೀಗೆ ಅನೇಕ ದೇವತೆಗಳ."[೪] ಅಸ್ತಿತ್ವವಾಯಿತು.

ಮನುಷ್ಯ ಅನಾದಿಕಾಲದಿಂದಲೂ ಚಿಂತನಾಶೀಲ ಪ್ರವೃತ್ತಿಯನ್ನು ಹೊಂದಿದ್ದಾನೆ. ಮನುಷ್ಯ ಜೀವನದ ವಿಕಾಸಗಾಥೆಯೇ ಇದಕ್ಕೆ ನಿದರ್ಶನ. ಜೀವನದ ಬೇರೆ ಬೇರೆ ಅವಸ್ಥಾಂತರಗಳು ಮನುಷ್ಯನ ಚಿಂತನಾಶೀಲತೆಯ ಪ್ರತಿಫಲಗಳು. "ಹಿಂದಿನ ಮನುಷ್ಯನ ಸೃಜನಶೀಲ ಅಭಿವ್ಯಕ್ತಿಗಳಾದ ಜನಪದ ಗಾದೆ ಒಗಟು, ಕಥೆ ಮೊದಲಾದ ಎಲ್ಲಾ ಪ್ರಕಾರಗಳು ಮನುಷ್ಯನ ಚಿಂತನಾ ಶೀಲತೆಯನ್ನು ವಿವೇಕವನ್ನು ಹಾಗೂ ವಿಚಾರವಂತಿಕೆಯನ್ನು ಪ್ರತಿಬಿಂಬಿಸುತ್ತವೆ."[೫] ಕೇವಲ ಅಕ್ಷರ ಬರುವುದಿಲ್ಲ ಎಂಬ ಕಾರಣಕ್ಕಾಗಿ ಜನಪದ ಜ್ಞಾನದ ಮಹತ್ವವನ್ನು ಕಡೆಗಣಿಸಲು ಬರುವುದಿಲ್ಲ.

ಬದುಕಿನ ಪ್ರತಿಯೊಂದು ಆಗು ಹೋಗುಗಳ ಬಗ್ಗೆಯೂ ಯೋಚಿಸುತ್ತಿದ್ದ ಜನಪದ ಮನಸ್ಸು ತನ್ನ ಸಂದರ್ಭದ ಪುರಾಣ ಇತಿಹಾಸ ಮೊದಲಾದವುಗಳ ಬಗ್ಗೆಯೂ ಎಚ್ಚರದಿಂದ ಇತ್ತು. "ಪುರಾಣಗಳು ಎಂದೋ ಘಟಿಸಿರಬಹುದಾದ ಸಂಗತಿಗಳ ರಮ್ಯ ಪಠ್ಯಗಳಾಗಿರುವುದು ಎಲ್ಲರಿಗೂ ತಿಳಿದ ಸಂಗತಿ. ಇತಿಹಾಸ ಎನ್ನುವುದು ಘಟಿಸಿ ಹೋಗಿರಬಹುದಾದ ಸಂಗತಿಗಳನ್ನು ಸೂಚಿಸಲು ನಾವು ಬಳಸುವ ಪಾರಿಬಾಷಿಕ ಪದ."[೬] ಈ ಎರಡೂ ಬಗೆಯ ಸಂಗತಿಗಳ ಬಗ್ಗೆಯೂ ಎಚ್ಚರವಾಗಿದ್ದ ಜನಪದ ಮನಸ್ಸು ತನ್ನ ವಿವೇಕದ ಮೂಲಕ ಇವುಗಳನ್ನು ದರ್ಶಿಸಿತು. ಜನರಲ್ಲಿ ಕುತೂಹಲವನ್ನು ಕೆರಳಿಸುವಂತೆ, ಜನಾಕರ್ಷಕವಾಗುವಂತೆ ಇವುಗಳನ್ನು ರೂಪಿಸಿತು. ಜನಪದ ಸಂದರ್ಭದಲ್ಲಿ ಇವುಗಳಿಗೆ ಅಳವಡಿಸಲ್ಪಟ್ಟ ಈ ಎರಡು ಲಕ್ಷಣಗಳು ಜನ ಸಮುದಾಯದಲ್ಲಿ ನಿರಂತರವಾಗಿ ಮುಂದುವರಿಯಲು ಸಹಾಯವಾದವೆಂದು ಭಾವಿಸಬಹುದು.

ಪುರಾಣಗಳನ್ನು ಸ್ಥಳೀಯವಾಗಿಸುವ ಪ್ರಕ್ರಿಯೆಯು ಬಹಳ ಮುಖ್ಯವೆನ್ನುವಂತೆ ಜನಪದ ಸಂದರ್ಭದಲ್ಲಿ ಕಂಡು ಬರುತ್ತದೆ. ಆದ್ದರಿಂದಲೇ "ಪುರಾಣ ಸಂಗತಿಗಳನ್ನು ಒಳಗೊಂಡ ಐತಿಹ್ಯಗಳಲ್ಲಿ ಪುರಾಣಗಳನ್ನು ಸ್ಥಳೀಯಗೊಳಿಸುವ ಮನುಷ್ಯನ ತುಡಿತವು ಪ್ರಧಾನವಾಗಿ ಕಂಡುಬರುತ್ತದೆ. ಇದರಿಂದಾಗಿ ಇವುಗಳ ಮಹತ್ವವನ್ನು ಕಡೆಗಣಿಸಲು ಆಗುವುದಿಲ್ಲ. ಪುರಾಣ ವಸ್ತುಗಳನ್ನೊಳಗೊಂಡ ಐತಿಹ್ಯಗಳನ್ನು ಪರಿಶೀಲಿಸಿದಾಗ ಆಯಾ

ಸ್ಥಳಗಳ ಜನಸಮುದಾಯಗಳ ಸಂಸ್ಕೃತಿಯ ಒತ್ತಡ ವೈಶಿಷ್ಟ್ಯತೆಗಳು ಇಲ್ಲಿ ಮುಖ್ಯವಾಗಿ ಕಾರ್ಯಪ್ರವೃತ್ತವಾಗಿರುವುದು ತಿಳಿಯಲು ಸಾಧ್ಯವಾಗುತ್ತದೆ."೬

ಜನಸಾಮಾನ್ಯ ಪಾತ್ರಗಳನ್ನು ವೈಭವಿಕರಿಸಿ ಚಿತ್ರಿಸಿರುವುದನ್ನು ಐತಿಹ್ಯಗಳಲ್ಲಿ ಕಾಣಬಹುದು. ಇವು ಆಯಾ ಕಾಲಮಾನದ ಮೌಲ್ಯಗಳನ್ನು ಪ್ರತಿಬಿಂಬಿಸುತ್ತವೆ. ಈ ಹಿನ್ನೆಲೆಯಲ್ಲಿಯೂ ಪ್ರತಿಯೊಂದು ಸಂದರ್ಭದ ಐತಿಹ್ಯವು ಆಯಾ ಸಂಸ್ಕೃತಿಯನ್ನು ತಿಳಿಸುವಲ್ಲಿ ಮುಖ್ಯವಾದ ಪೂರಕ ಮತ್ತು ಆಕರ ಸಾಮಗ್ರಿಯಾಗಿ ಸಹಾಯಕ್ಕೆ ಬರುತ್ತದೆ.

"ಬೆಂಗಳೂರು ಗ್ರಾಮಾಂತರ ಜಿಲ್ಲೆ ಐತಿಹ್ಯಗಳು ಒಂದು ಸಾಂಸ್ಕೃತಿಕ ಅಧ್ಯಯನ" ಎಂಬ ವಿಷಯವನ್ನು ನಾನು ಕ್ಷೇತ್ರಕಾರ್ಯದ ಹಿನ್ನೆಲೆಯಲ್ಲಿ ಅಧ್ಯಯನ ಮಾಡುತ್ತಿದ್ದು ಈ ಜಿಲ್ಲೆಯ ಐತಿಹ್ಯಗಳು ವ್ಯಕ್ತಿಗತ ನೆಲೆಗಿಂತ ಸಾಂಸ್ಕೃತಿಕ ಮತ್ತು ಧಾರ್ಮಿಕ ಹಿನ್ನೆಲೆಯಲ್ಲಿ ಹೆಚ್ಚು ಪ್ರಾಮುಖ್ಯತೆಯನ್ನು ಪಡೆದು ಕೊಳ್ಳುತ್ತಿದೆ ಅದಕ್ಕೆ ಸಾಕ್ಷಿಯೆಂದರೆ ನಾನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವ ಶಿವಗಂಗೆ, ಘಾಟಿ, ವಾಗಟ, ಧರ್ಮೇಶ್ವರ ದೇವಾಲಾಯ ಮುಂತಾದ ಕ್ಷೇತ್ರಗಳೇ ಸಾಕ್ಷಿ.

ಆದರೆ ಜನಪದರು ಮಾತ್ರ ಅಲ್ಲಿ ನಿಜವಾಗಿಯೂ ಒಂದು ಘಟನೆ ನಡೆದಿದೆ ಎಂದೇ ಭಾವಿಸಿಕೊಂಡಿರುತ್ತಾರೆ ಮತ್ತು ಅದಕ್ಕೆ ಕುರುಹಾಗಿ ಪ್ರಕೃತಿಯಲ್ಲಿನ ವಿವಿಧ ರೀತಿಯ ವಸ್ತುಗಳು ಸಾಕ್ಷಿಯನ್ನಾಗಿ ತೋರಿಸುತ್ತಾರೆ. ಉದಾಹರಣೆಗೆ ಅಂತಹ ಐತಿಹ್ಯಗಳು ನನ್ನ ಕ್ಷೇತ್ರ ಕಾರ್ಯದ ವ್ಯಾಪ್ತಿಯಲ್ಲಿ ಬರುವ ರಾಗಿಗುಡ್ಡದ ಐತಿಹ್ಯ, ಗಜಗುಂಡ್ಲ, ಜಂಬುಮಣ್ಣಿನ ಗುಡ್ಡಗಳು, ಇವೆಲ್ಲವನ್ನು ಇಲ್ಲಿನ ಜನಸಾಮಾನ್ಯರು ಸಾಕ್ಷಿಯಾಗಿ ತೋರಿಸುತ್ತಾರೆ. ಕೆಲವು ಐತಿಹ್ಯಗಳು ಪ್ರಾಮುಖ್ಯತೆಯನ್ನು ಪಡೆದುಕೊಂಡಿರುವ ಸ್ಥಳಗಳಲ್ಲಿ ಜನರು ಆರಾಧಿಸುವ ದೈವಗಳಾದ. ಶಿವ, ಪಾರ್ವತಿ, ಸುಬ್ರಮಣ್ಯಸ್ವಾಮಿ, ವೆಂಕಟೇಶ್ವರ ಮುಂತಾದ ಪುರಾಣವ್ಯಕ್ತಿಗಳನ್ನು ಕೆಲವು ಸ್ಥಳಗಳಲ್ಲಿ ನೋಡಿದರೆ ಮತ್ತೆ ಕೆಲವು ಸ್ಥಳಗಳಲ್ಲಿ ವ್ಯಕ್ತಿ ನೆಲೆಯ ಐತಿಹ್ಯಗಳು" ಆದ ಶಾಂತಲೆ, ವೀರಕೆಂಪಮ್ಮ, ದಯ್ಯಲು ಬಚ್ಚೇಗೌಡ. ತಮ್ಮೇಗೌಡನ ಐತಿಹ್ಯ, ಗುಂಡ ಬ್ರಹ್ಮಯ್ಯ, ಸಾಸಲು ಚೆನ್ನಮ್ಮ ಮುಂತಾದವುಗಳನ್ನು ಕಾಣಬಹುದು, ಪುರಾಣಕ್ಕೆ ಸಂಬಂದಿಸಿದ ಐತಿಹ್ಯಗಳು ಇರುವ ಕಡೆ ಜಾತ್ರೆಗಳು, ಆಚರಣೆಗಳು, ಸಂಪ್ರಾದಯಗಳನ್ನು ನೋಡಬಹುದು. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಇಲ್ಲಿನ ಐತಿಹ್ಯಗಳನ್ನು ಕುರಿತು ಸಾಂಸ್ಕೃತಿಕವಾಗಿ ಇದುವರೆಗೂ ಯಾವುದೇ ಅಧ್ಯಯನ ನಡೆದಿರುವುದಿಲ್ಲ, ಮತ್ತು ಕೆಲವು ಸಂಶೋಧನ ಕೃತಿಗಳಲ್ಲಿ ಐತಿಹ್ಯಗಳ ಬಗ್ಗೆ ಪೂರ್ಣ ಪ್ರಮಾಣದಲ್ಲಿ ಐತಿಹ್ಯಗಳ ಬಗ್ಗೆ ತಿಳಿಸಿಲ್ಲ.

ಆದ್ದರಿಂದ ನಾನು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಐತಿಹ್ಯಗಳನ್ನು ಕುರಿತು ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಅಧ್ಯಯನ ಮಾಡುವುದು ನನ್ನ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಶ್ರೀ ಹೊಸಕೋಟೆ, ದೇವನಹಳ್ಳಿ, ನೆಲಮಂಗಲ, ಮತ್ತು ದೊಡ್ಡಬಳ್ಳಾಪುರ ತಾಲ್ಲೂಕುಗಳ ಪ್ರಾತಿನಿಧಿಕ ಸ್ಥಳಗಳನ್ನು ಕೇಂದ್ರವಾಗಿಟ್ಟುಕೊಂಡು ಅಧ್ಯಯನ ಮಾಡುವುದು ನನ್ನ ಅಧ್ಯಯನದ ಉದ್ದೇಶವಾಗಿದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಅನೇಕ ಹಳ್ಳಿಗಳು ಪೂರ್ಣ ಪ್ರಮಾಣದಲ್ಲಿ ಹಳ್ಳಿಗಳಾಗಿಯೂ ಉಳಿದಿಲ್ಲ, ನಗರವಾಗಿಯೂ ಪರಿವರ್ತನೆಗೊಂಡಿಲ್ಲ, ಅರೆ ನಗರ, ಅರೆ ಗ್ರಾಮೀಣ, ಭಾಗಗಳಾಗಿ ಉಳಿದ ದೂರದ ಹಳ್ಳಿಗಳು ಅಚ್ಚ ಗ್ರಾಮೀಣ ಸೊಗಡನ್ನು ಉಳಿಸಿಕೊಂಡಿದೆ.

ಅದರಲ್ಲಿ ಐತಿಹ್ಯಗಳ ಪಾತ್ರ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ತುಂಬಾ ಪ್ರಮುಖ ಪಾತ್ರವನ್ನು ಸಾಂಸ್ಕೃತಿಕವಾಗಿ ನೋಡಬಹುದು.

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಕ್ಷೇತ್ರ ಕಾರ್ಯಗಳು ನಡೆದಿದ್ದು ನಾನು ಸೂಕ್ಷ್ಮವಾಗಿ ಅಧ್ಯಯನ ಮಾಡುವುದರೊಂದಿಗೆ ಇಲ್ಲಿ ಕಂಡು ಬರುವ ಐತಿಹ್ಯಗಳ ದಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಐತಿಹಾಸಿಕ ವ್ಯಕ್ತಿಗಳು ಪೌರಾಣಿಕ ಸ್ಥಳಗಳಲ್ಲಿ ಪುರಾಣ ವ್ಯಕ್ತಿಗಳಿಗೆ ಸಂಬಂಧ'ಪಟ್ಟ ಜನಪದ ಆಚರಣೆಗಳ ನಂಬಿಕೆಗಳು ಸಾಂಪ್ರದಾಯಗಳು ಜಾತ್ರೆಗಳ ಹಿನ್ನೆಲೆಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯನ್ನು ಅಧ್ಯಯನ ಮಾಡುವುದು ಸಂಶೋದನೆಯ ಮುಖ್ಯ ಉದ್ದೇಶವಾಗಿರುತ್ತದೆ.

## ವ್ಯಾಪ್ತಿ

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ನಾಲ್ಕು ತಾಲ್ಲೂಕುಗಳಾದ, ಹೊಸಕೋಟೆ, ನೆಲಮಂಗಲ, ದೇವನಹಳ್ಳಿ, ದೊಡ್ಡಬಳ್ಳಾಪುರದಲ್ಲಿ ಸಿಗುವಂತಹ ಕೆಲವು ಪ್ರಮುಖವಾದ ಐತಿಹ್ಯಗಳನ್ನು ಸಾಂಸ್ಕೃತಿಕ ಹಿನ್ನೆಲೆಯನ್ನು ನನ್ನ ವ್ಯಾಪ್ತಿಯಲ್ಲಿ ಬಳಸಿಕೊಂಡದ್ದೇನೆ.

## ಇದುವರೆಗೂ ನಡೆದಿರುವ ಪೂರ್ವ ಅಧ್ಯಯನ

ಐತಿಹ್ಯಗಳ ಬಗ್ಗೆ ಡಾ.ಎಸ್.ಎಸ್.ಭದ್ರಾಪುರ ಅವರು ತಮ್ಮ ಪಿಎಚ್.ಡಿ ಅಧ್ಯಯನಕ್ಕಾಗಿ "ಉತ್ತರ ಕರ್ನಾಟಕದ ಜನಪದ ಐತಿಹ್ಯಗಳು" ಎಂಬ ವಿಷಯದ ಬಗ್ಗೆ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡದಲ್ಲಿ ೧೯೬೨ರಲ್ಲಿ ಸಂಶೋಧನೆ ಮಾಡಿದ್ದಾರೆ.

ಡಾ.ತಾಳ್ತಜೆ ವಸಂತಕುಮಾರ್ ಅವರು ದಕ್ಷಿಣ ಕನ್ನಡ ಜಿಲ್ಲೆಯ ಐತಿಹ್ಯಗಳ ಬಗ್ಗೆ ಸಂಶೋಧನೆ ಮಾಡಿದ್ದಾರೆ. ವೃಷಭಕುಮಾರ್ ಅವರು ಮೈಸೂರು ಜಿಲ್ಲೆಯ ಐತಿಹ್ಯಗಳ ಒಂದು ಅಧ್ಯಯನ, ಮೈಸೂರು ವಿಶ್ವವಿದ್ಯಾಲಯ ಮೈಸೂರು ೨೦೦೭, 'ಬಳ್ಳಾರಿ ಜಿಲ್ಲೆಯ ಐತಿಹ್ಯಗಳು' ಕರಿಬಸಪ್ಪ ರವರು ಕನ್ನಡ ವಿಶ್ವವಿದ್ಯಾಲಯದಲ್ಲಿ ೨೦೦೪, ಕೋಲಾರ ಜಿಲ್ಲೆಯ ಐತಿಹ್ಯಗಳು ಒಂದು ಅಧ್ಯಯನ, ಲಕ್ಷ್ಮಿದೇವಿ ಎಲ್ ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೬, ಡಾ.ಸಿ.ಎಂ.ರಾಜಣ್ಣ ಅವರು "ಕೋಲಾರ ಜಿಲ್ಲೆಯ ಜಾನಪದೀಯ ಐತಿಹ್ಯಗಳ ಬಗ್ಗೆ ಅಧ್ಯಯನ ಮಾಡಿದ್ದು ಇನ್ನೂ ಕೆಲವು ಜಿಲ್ಲೆಯ ಐತಿಹ್ಯಗಳ ಬಗ್ಗೆ ಪೂರ್ವ ಅಧ್ಯಯನಗಳು ನಡೆದಿದ್ದು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಐತಿಹ್ಯಗಳ ಬಗ್ಗೆ ಅಧ್ಯಯನ ನಡೆದಿರುವುದಿಲ್ಲ

## ಪ್ರಸ್ತುತ ಅಧ್ಯಯನ

ನಾನು ಕ್ಷೇತ್ರಕಾರ್ಯದ ಹಿನ್ನೆಲೆಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಐತಿಹ್ಯಗಳ ಬಗ್ಗೆ ಸಾಂಸ್ಕೃತಿಕವಾಗಿ ಅಧ್ಯಯನ ಮಾಡುತ್ತಿದ್ದು ಪ್ರಮುಖವಾಗಿ ಐತಿಹ್ಯಗಳಿಗೆ ಸಂಬಂಧಪಟ್ಟಂತಹ ಆಚರಣೆಗಳು, ನಂಬಿಕೆಗಳು, ಸಂಪ್ರದಾಯ, ಜಾತ್ರೆಗಳನ್ನು ಕೇಂದ್ರವಾಗಿಟ್ಟುಕೊಂಡು ಮತ್ತು ಪೌರಣಿಕ ಐತಿಹ್ಯಗಳು ಸ್ಥಳ ನಾಮದ ಐತಿಹ್ಯಗಳು ವ್ಯಕ್ತಿ ಹಿನ್ನೆಲೆಯ ಐತಿಹ್ಯಗಳೆಂದು ವರ್ಗಿಕರಿಸಿಕೊಂಡು ಅಧ್ಯಯನ ಮಾಡುತ್ತಿದ್ದೇನೆ.

ಅಧ್ಯಾಯ–೧ ರಲ್ಲಿ ಅಧ್ಯಯನದ ಉದ್ದೇಶ ಮತು ವ್ಯಾಪ್ತಿಯ ಬಗ್ಗೆ ಮತ್ತು ಪೂರ್ವ ಅಧ್ಯಯನಗಳ ಸಮೀಕ್ಷೆಯನ್ನು ನಡೆಸಿದ್ದು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಐತಿಹ್ಯಗಳು ಸಾಂಸ್ಕೃತಿಕವಾಗಿ ಮತ್ತು ಧಾರ್ಮಿಕವಾಗಿ ಪೌರಾಣಿಕವಾಗಿ ಬಹಳ ಪ್ರಾಮುಖ್ಯತೆ ಪಡೆದಿರುವುದರಿಂದ ಜಾನಪದೀಯ ನೆಲೆಯಲ್ಲಿ ಅಧ್ಯಯನ ಮಾಡುವುದು ಪ್ರಮುಖ ಉದ್ದೇಶವಾಗಿದ್ದು, ಹೊಸಕೋಟೆ, ದೇವನಹಳ್ಳಿ, ದೊಡ್ಡಬಳ್ಳಾಪುರ, ನೆಲಮಂಗಲ ಕ್ಷೇತ್ರದಲ್ಲಿ ಬರುವ ಪ್ರಮುಖವಾದ ಐತಿಹ್ಯಗಳನ್ನು ಅಧ್ಯಯನದ ವ್ಯಾಪ್ತಿಯಾಗಿದೆ, ಐತಿಹ್ಯಗಳ ಬಗ್ಗೆ ಇದುವರೆಗೂ ನಡೆದಿರುವ ಪೂರ್ವ ಅಧ್ಯಯನಗಳ ಬಗ್ಗೆ ತಿಳಿಸಲಾಗಿದೆ.

ಅಧ್ಯಾಯ–೨ ರಲ್ಲಿ ಭೌಗೋಳಿಕ ಲಕ್ಷಣಗಳ ಬಗ್ಗೆ ವಿವರಿಸಿದ್ದು ಬೆಂಗಳೂರು ಗ್ರಾಮಾಂತರ ಜಿಲ್ಲೆಯು ವಿಶಿಷ್ಟವಾಗಿ ಭೌಗೋಳಿಕತೆಯನ್ನು ಹೊಂದಿರುವಂತಹ ಜಿಲ್ಲೆ, ಇದು ಬೆಂಗಳೂರಿನ ಸುತ್ತ ಇರುವಂತಹ ಜಿಲ್ಲೆಯಾಗಿದೆ, ಇಲ್ಲಿನ ತಾಲ್ಲೂಕುಗಳಲ್ಲಿ ಗ್ರಾಮೀಣ ಮತ್ತು ನಗರದ ವಾತಾವರಣವಿದ್ದು ಇಲ್ಲಿನ ಭೌಗೋಳಿಕತೆಯು ಅಷ್ಟೆ, ಭಿನ್ನವಾಗಿದ್ದು ಇಲ್ಲಿನ ನದಿ ಮೂಲಗಳ ಬಗ್ಗೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿನ ಕೃಷಿ ವ್ಯಾಪಾರ, ಕೈಗಾರಿಕೆಗಳು,

ಜನಸಂಖ್ಯೆ ಸಾಂಸ್ಕೃತಿಕ ವಿವರಗಳು ಮತ್ತು ಸಾಹಿತ್ಯಗಾರರ ವಿವರಗಳನ್ನು ಮತ್ತು ಐತಿಹಾಸಿಕ ವಿವರಗಳನ್ನು ವಿಶ್ಲೇಷಿಸಿದ್ದಾನೆ.

ಅಧ್ಯಾಯ–೩ ರಲ್ಲಿ ಐತಿಹ್ಯಗಳ ಸ್ವರೂಪ ಮತ್ತು ಲಕ್ಷಣಗಳ ಬಗ್ಗೆ ವಿವರಿಸಿದ್ದು ಐತಿಹ್ಯಗಳ ಹುಟ್ಟು ಮತ್ತು ಐತಿಹ್ಯಗಳ ವಿವಿಧ ಹಂತಗಳಾದ ಸ್ಥಳ, ಘಟನೆ, ಚರಿತ್ರೆ, ವ್ಯಕ್ತಿ, ಪೌರಾಣಿಕ ಘಟನೆಗಳನ್ನು ಜನಪದರು ಮೌಖಿಕವಾಗಿ ಕೆಲವು ಘಟನೆಗಳನ್ನು ತೆಗೆದುಕೊಂಡು ತಮ್ಮದೇ ಆದ ರೀತಿಯಲ್ಲಿ ವಸ್ತುವನ್ನು ಬಳಸಿಕೊಂಡು ಐತಿಹ್ಯಗಳನ್ನು ರಚನೆ ಮಾಡುತ್ತಾರೆ, ಒಂದೊಂದು ಪ್ರದೇಶದಲ್ಲಿ ಒಂದೊಂದು ರೀತಿಯ ಐತಿಹ್ಯಗಳು ಹುಟ್ಟಿಕೊಳ್ಳುತ್ತವೆ, ಐತಿಹ್ಯಗಳ ಲಕ್ಷಣಗಳ ಬಗ್ಗೆ ಪಾಶ್ಚಾತ್ಯ ವಿದ್ಯಾಂಸರಾದ ಗ್ರೀಮ್ ಸಹೋದರರು ಮತ್ತು ಡಾರ್ಸನ್‌ರ ವರ್ಗಿಕರಣ, ಅರ್.ಎಸ್.ಬಾಗ್ಸ್‌ನ ಮತ್ತು ತಾಳ್ತಜೆ ವಸಂತಕುಮಾರ್ ಅವರ ವರ್ಗೀಕರಣದ ಬಗ್ಗೆ ಚರ್ಚಿಸಲಾಗಿದೆ.

ಅಧ್ಯಾಯ–೪ ರಲ್ಲಿ ಪೌರಾಣಿಕ ಐತಿಹ್ಯಗಳ ಬಗ್ಗೆ ವಿವರಿಸಲಾಗಿದ್ದು ಪುರಾಣ ಐತಿಹ್ಯಗಳಲ್ಲಿ ಶಿಷ್ಟ, ಪುರಾಣ ಐತಿಹ್ಯಗಳನ್ನು ಮತ್ತು ಜನಪದ ಪುರಾಣ ಐತಿಹ್ಯಗಳ ಬಗ್ಗೆ ಸಾಮಾಜಿಕ ಮತ್ತು ಧಾರ್ಮಿಕ ಉದ್ದೇಶಕ್ಕಾಗಿ ನಿರೂಪಿತವಾಗಿರುವಂತಹ ಐತಿಹ್ಯಗಳ ಬಗ್ಗೆ ವಿವರಿಸಿದ್ದು, ಇದರಲ್ಲಿ ಪ್ರಮುಖವಾಗಿ ಘಾಟಿ, ವಾಗಟದ ವರದರಾಜಸ್ವಾಮಿ ಐತಿಹ್ಯ, ಕೊಂಡ್ರಹಳ್ಳಿ ಧರ್ಮೇಶ್ವರ ಐತಿಹ್ಯ, ದ್ರೌಪದಮ್ಮನ ಐತಿಹ್ಯ, ಪೋತರಾಜನ ಐತಿಹ್ಯ, ಮಾರಮ್ಮನ ಐತಿಹ್ಯ, ಸಾವಿರ ಕಣ್ಣಮ್ಮನ ಐತಿಹ್ಯ, ಶಮಿಗಿರಿಯ ಲಕ್ಷ್ಮಿವೆಂಕಟೇಶ್ವರಸ್ವಾಮಿಯ ಐತಿಹ್ಯ, ಚಿಕ್ಕ ಮಧುರೆಯ ಶನಿಮಹಾತ್ಮ ಐತಿಹ್ಯ ಹುಲುಕುಡಿ ಬೆಟ್ಟದ ಐತಿಹ್ಯಗಳ ಬಗ್ಗೆ ಪೌರಾಣಿಕ ಹಿನ್ನೆಲೆಯನ್ನು ವಿವರಿಸಲಾಗಿದ್ದು ಇವುಗಳಿಗೆ ಸಂಬಂದಿಸಿದಂತೆ ನಂಬಿಕೆಗಳು, ಆಚರಣೆಗಳು, ಸಂಪ್ರದಾಯಗಳು, ಜಾತ್ರೆಗಳ ವಿವರಣೆಯನ್ನು ನೀಡಿದ್ದೇನೆ.

ಅಧ್ಯಾಯ–೫ ರಲ್ಲಿ ಸ್ಥಳ ಪ್ರಧಾನ ಐತಿಹ್ಯಗಳ ಬಗ್ಗೆ ವಿವರಿಸಲಾಗಿದೆ. ಸ್ಥಳ ಪ್ರಧಾನ ಐತಿಹ್ಯಗಳಲ್ಲಿ ಪ್ರಧಾವಾಗಿ ವ್ಯಕ್ತಿಗಳಿಗಿಂತ ಸ್ಥಳಕ್ಕೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಲಾಗುತ್ತದೆ. ಸ್ಥಳದ ವಿಶಿಷ್ಟತೆ ಅಥವಾ ಅಸಾಮಾನ್ಯತ್ವವೇ ಐತಿಹ್ಯಗಳಿಗೆ ತಳಹದಿಯಾಗಿ ಕೆಲಸ ಮಾಡುತ್ತದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಸ್ಥಳ ಪ್ರಧಾನ ಐತಿಹ್ಯಗಳಾದ ಆವತಿ, ದೇವನಹಳ್ಳಿ, ಶಿವಗಂಗೆ, ಕೋಯಿರಾ ಸೂಳೆಬಂಡೆ, ರಾಗಿಗುಡ್ಡ,ಕಾವಲು ಗುಡ್ಡ, ಶ್ರೀರಾಮನಹಳ್ಳಿ ಉಪವಾಸಪುರದ ಬಗ್ಗೆ ಮತ್ತು ಇಲ್ಲಿ ಬಲಿ ಐತಿಹ್ಯಗಳಾದ ಚಿಕ್ಕನಹಳ್ಳಿಯ ಕಲ್ಯಾಣಿಯ ಬಗ್ಗೆ ವಿಶ್ಲೇಷಿಸಲಾಗಿದೆ.

ಅಧ್ಯಾಯ–೬ ರಲ್ಲಿ ವ್ಯಕ್ತಿ ಪ್ರಧಾನ ಐತಿಹ್ಯಗಳ ಬಗ್ಗೆ ವಿವರಿಸಲಾಗಿದ್ದು, ವ್ಯಕ್ತಿ ಪ್ರಧಾನ ಐತಿಹ್ಯಗಳಲ್ಲಿ ಅಸಾಮಾನ್ಯವಾದ ಅಥವಾ ವಿಶಿಷ್ಟವಾದ ವ್ಯಕ್ತಿ ಯೊಬ್ಬನ ಸಾಧನೆಯ ನಿರೂಪಣೆಯಿರುತ್ತದೆ. ಸೂಗಟೂರು ಪಾಳ್ಯಗಾರನಾದ ತಮ್ಮೇಗೌಡ, ಸಾಸಲು ಚಿನ್ನಮ್ಮ, ಅಡ್ಡ ಗಿಡ್ಡಪ್ಪ, ಸಾವಿರ ಕಣ್ಣಮ್ಮ, ಯಲಿಯೂರು ವೀರಣ್ಣ ಸ್ವಾಮಿ, ಗುಂಡ ಮತ್ತು ಬ್ರಾಹ್ಮಣ, ವೀರ ಕೆಂಪಮ್ಮ, ದಯಾಲು ಬಚ್ಚೇಗೌಡ.

ಅಧ್ಯಾಯ–೭ ರಲ್ಲಿ ಐತಿಹ್ಯಗಳು ಮತ್ತು ಆಧುನಿಕ ಸಂದರ್ಭವನ್ನು ವಿವರಿಸಲಾಗಿದೆ, ಪ್ರಸ್ತುತ ಅಕ್ಷರಸ್ತ ಸಮುದಾಯ ಜಾನಪದ ನೆಲೆಯಲ್ಲಿ ಬರುವಂತಹ ಐತಿಹ್ಯಗಳ ಬಗ್ಗೆ ಅವರು ತಳೆದಿರುವಂತಹ ನಿಲುವಗಳ ಬಗ್ಗೆ ಚರ್ಚಿಸಲಾಗಿದೆ.

ಅಧ್ಯಾಯ–೮ ರಲ್ಲಿ ಸಮಾರೋಪದ ಬಗ್ಗೆ ನನ್ನ ಸಂಶೋಧನೆಯ ಒಟ್ಟಾರೆ ನಿಲುವುಗಳ ಬಗ್ಗೆ ಚರ್ಚಿಸಲಾಗಿದೆ.

**ಅಡಿ ಟಿಪ್ಪಣಿಗಳು**

೧. Harry M Jhonson Sociology a systematic introduction Page No 82.

೨. Pushpendra kumar, The principal of shakthi page no 1

೩. ಸಿದ್ದಲಿಂಗಯ್ಯ ಗ್ರಾಮದೇವತೆಗಳು ಪುಟ.ಸಂ.೧೧೫

೪. Devid kinslay Hindu Godess Page No 1

೫. ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ ಮೈಸೂರು ವಿ.ವಿ. ಮೈಸೂರು ಪುಟ ಸಂಖ್ಯೆ ೭೬೩ / ೭೬೪

೬. ಸಾಧನೆ ಸಂಪುಟ ೧೪ ಸಂಚಿಕೆ ೩ ಬೆಂಗಳೂರು ವಿ.ವಿ. ಜುಲೈ / ಸೆಪ್ಟಂಬರ್ ೧೯೮೫

೭. ಜನಪದ ಕೈಪಿಡಿ. ಸಂಪಾದಕರು ಎಚ್.ಕೆ.ಲಕ್ಕಪ್ಪಗೌಡ, ಕನ್ನಡ ಪುಸ್ತಕ ಪ್ರಾಧಿಕಾರ, ೧೯೯೭ ಪುಟ ಸಂಖ್ಯೆ ೩೮.

# ಅಧ್ಯಾಯ-೨

## ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಭೌಗೋಳಿಕ ಸ್ವರೂಪ

ಬೆಂಗಳೂರಿನ ಮೂಲದ ಬಗ್ಗೆ ಅನೇಕ ಮಾಹಿತಿಗಳು ಲಭ್ಯವಿದೆ. 9ನೇ ಶತಮಾನದ ಗಂಗರ ದಾಖಲೆಗಳಲ್ಲಿ "ಬೆಂಗಳೂರನ್ನು 'ಬೇಗೂರು' ಎಂದು ಕರೆಯಲಾಗುತ್ತಿತ್ತು. ಇದು ಕ್ರಮೇಣ 'ಬೆಂಗಳೂರು' ಎಂದು ಕರೆಯಲಾಯಿತು. ಇದಕ್ಕೆ ಸಂಬಂಧಿಸಿದಂತೆ ಜನಪದರಲ್ಲಿ ಒಂದು ಜನಪ್ರಿಯ ಕಥೆ ಕಂಡುಬರುತ್ತದೆ. ಇದರ ಪ್ರಕಾರ ಬೆಂಗಳೂರನ್ನು 'ಬೆಂದ ಕಾಳೂರು' ಎಂದು ಕರೆಯಲಾಗಿದೆ."[೧] ಹೊಯ್ಸಳ ಬಲ್ಲಾಳನು ಒಂದು ದಿನ ಪ್ರಯಾಣ ಮಾಡುತ್ತಾ ರಸ್ತೆ ಮಧ್ಯದಲ್ಲಿ ಹಸಿವಾದಾಗ ಅಲ್ಲಿಯೇ ಇದ್ದ ಒಬ್ಬ ವಯಸ್ಸಾದ ಮುದುಕಿ ಆತನಿಗೆ 'ಬೆಂದ ಕಾಳು'ಗಳನ್ನು ನೀಡಿದಳು. ಆಗ ಆತ ಈ ಸ್ಥಳಕ್ಕೆ 'ಬೆಂದಕಾಳ ಊರು' ಎಂದು ಹೆಸರಿಸಿದನು. ಆದರೆ ಈ ಕಥೆಯನ್ನು ನಂಬಲಾಗದು. ಕಾರಣ ಹೊಯ್ಸಳರ ಕಾಲಕ್ಕೆ ಮುನ್ನವೇ ಈ ಊರಿಗೆ ಬೆಂಗಳೂರು ಎಂಬ ಹೆಸರು ಇತ್ತೆಂದು ಹಲವು ಮೂಲಗಳಿಂದ ತಿಳಿದುಬಂದಿದೆ. ಇಲ್ಲಿ 'ಬೆಂಗ' ಅಥವಾ ಕನ್ನಡದಲ್ಲಿ 'ರಕ್ತ ಹೊನ್ನೆ' ಎಂದು ಕರೆಯಲ್ಪಡುವ ಮರಗಳು ಇದ್ದು ಅವುಗಳ ಉತ್ಪತ್ತಿ ಹೆಚ್ಚಿಗೆ ಇದ್ದುದರಿಂದ ಈ ಸ್ಥಳಕ್ಕೆ ಬೆಂಗಳೂರು ಎಂಬ ಹೆಸರಾಯಿತು ಎನ್ನಲಾಗಿದೆ.

### ಚಾರಿತ್ರಿಕ ಹಿನ್ನೆಲೆ

ಕ್ರಿ.ಶ.೧೪೫ರಲ್ಲಿ ಸುಗಟೂರಿನ ಪ್ರಭು ತಮ್ಮೇಗೌಡ ಕಟ್ಟಿಸಿದನೆಂದು ಅಭಿಪ್ರಾಯವಿದೆ. ಅವನು ಕ್ರಿ.ಶ.೧೬೩೨ರವರೆಗೆ ಆಳಿದ. ಮುಂದೆ ಬಿಜಾಪುರ ವಶವಾದ ಹೊಸಕೋಟೆಯನ್ನು ಶಹಾಜಿಗೆ ಜಹಗೀರಾಗಿ ಕೊಡಲಾಯಿತು. ಕ್ರಿ.ಶ.೧೬೬೩ ರಲ್ಲಿ ಮೊಗಲರ ವಶವಾದ ಇದು, ಶಿರಾ ಪ್ರಾಂತ್ಯಕ್ಕೆ ಸೇರಿತು. ಕ್ರಿ.ಶ.೧೭೫೬ ರಲ್ಲಿ ಮೈಸೂರಿಗೆ ಸೇರಿ ಮತ್ತೆ ಮರಾಠರ ವಶವಾಯಿತು. ಅಂತಿಮವಾಗಿ ಕ್ರಿ.ಶ.೧೭೬೧ ರಲ್ಲಿ ಹೈದರ್‌ಆಲಿ ಹೊಸಕೋಟೆಯನ್ನು ಮೈಸೂರಿಗೆ ಸೇರಿಸಿದನು. ೧೭-೧೮ನೆಯ ಶತಮಾನಗಳ ಅವಧಿಯಲ್ಲಿ ಕೋಲಾರ, ಬೆಂಗಳೂರು, ತುಮಕೂರು ಜಿಲ್ಲೆಗಳಲ್ಲಿ ಆವತಿ ಪಾಳೆಯಗಾರರು ಪಾಳೆಪಟ್ಟುಗಳನ್ನು ಸ್ಥಾಪಿಸಿ ಆಳಿದರು. ಇವರ ನಾಯಕ ರಣಬೈರೇಗೌಡ ಇವನು ತನ್ನ ಏಕಮಾತ್ರ ಪುತ್ರಿದೊಡ್ಡಮ್ಮನನ್ನು ದುಷ್ಟ ಪಾಳೆಯಗಾರನೊಬ್ಬನಿಂದ ರಕ್ಷಿಸುವ ಸಲುವಾಗಿ ತನ್ನ ಊರನ್ನು ತ್ಯಜಿಸಿ ದೇವನಹಳ್ಳಿಯ ಉತ್ತರದಲ್ಲಿ ಇರುವ ಆಹತಿ (ಈಗಿನ ಆವತಿ)ಯಲ್ಲಿ ನೆಲೆಸಿದನು.

ರಣಭೈರೇಗೌಡನ ಜೊತೆಯಲ್ಲಿ ಮಲ್ಲಭೈರೇಗೌಡ, ಸಣ್ಣಭೈರೇಗೌಡ, ವೀರೆಗೌಡ ಎಂಬ ಅವನ ತಮ್ಮಂದಿರೂ ಜಯಗೌಡ, ಸಣ್ಣಭೈರೇಗೌಡ, ಮಲ್ಲಭೈರೆಗೌಡ ಎಂಬ ಮಕ್ಕಳೂ ಇದ್ದರು.

ಸ್ವಲ್ಪ ಕಾಲದಲ್ಲಿಯೇ ಇವರೆಲ್ಲಾ ಬೇರೆ ಬೇರೆಯಾಗಿ ಬೇರೆ ಬೇರೆ ಭಾಗಗಳಿಗೆ ಹೋಗಲು ತೀರ್ಮಾನಿಸಿಕೊಂಡರು, ರಣಭೈರೇಗೌಡ ಆವತಿಯಲ್ಲಿಯೇ ನೆಲೆಸಿದ, ಅವನ ಮಕ್ಕಳು ದೇವನಹಳ್ಳಿ, ದೊಡ್ಡಬಳ್ಳಾಪುರ, ಚಿಕ್ಕಬಳ್ಳಾಪುರ ಈ ಸ್ಥಳಗಳಲ್ಲಿ ಪಾಳೆಯ ಪಟ್ಟುಗಳನ್ನು ಸ್ಥಾಪಿಸಿದರು. "ಸಣ್ಣಭೈರೆಗೌಡ ಹೊಳವನಹಳ್ಳಿಯಲ್ಲಿ ನೆಲಸಿದ. ಈ ವಂಶದ 'ತಮ್ಮೇಗೌಡ' ಜಂಗಮಕೋಟೆಯ ಹತ್ತಿರದಲ್ಲಿರುವ ಸುಗಟೂರಿಗೆ ಹೋಗಿ ಕೋಲಾರ ಮತ್ತು ಪುಂಗನೂರಿನ ಪಾಳೆಯಗಾರನಾಗಿ 'ಹೊಸಕೋಟೆಯನ್ನು' ಸ್ಥಾಪಿಸಿದನು. ಏಳನೆಯವನಾದ ಜನಗೌಡ ಯಲಹಂಕದಲ್ಲಿ ನೆಲೆಸಿದನು. ಇವನ ವಂಶಸ್ಥರೇ ಬೆಂಗಳೂರು ಮತ್ತು ಮಾಗಡಿ ಪಾಳೆಯಪಟ್ಟುಗಳನ್ನು ಸ್ಥಾಪಿಸಿದರು"[೨]. ಅಲ್ಲದೆ ಆವತಿ ಕುಲದ ಇತರ ಶಾಖೆಗಳವರು ಗುಡಿಬಂಡೆ, ಮದ್ದಗಿರಿ, ಮಿಡಿಗೇಶಿ, ಹೆಬ್ಬೂರು, ಕುಣಿಗಲ್ಲು, ಗುಬ್ಬಿ, ಆನೇಕಲ್ಲು, ನಂದಿ, ಹೊಸಕೋಟೆ, ಮುಳಬಾಗಿಲು, ಸರ್ಜಾಪುರದ ಮುಂತಾದ ಸ್ಥಳಗಳಲ್ಲಿ ನೆಲೆನಿಂತರು.

ಹೀಗೆ ಅನೇಕ ಶತಮಾನಗಳ ಹಿಂದಿನಿಂದ ಒಂದೆಡೆ ನೆಲೆಸಿ ಪಾಳೆಯಪಟ್ಟುಗಳನ್ನು ಸ್ಥಾಪಿಸಿದ ಈ ಪಾಳೆಯಗಾರರು ಬಹುಮಟ್ಟಿಗೆ ಸ್ಥಳೀಯ ಜನರೇ ಆಗಿ ತಮ್ಮ ಪರದೇಶದ ನಾಯಕರಾಗುತ್ತಿದ್ದರು. ನಾಯಕ ಇಲ್ಲವೇ ಗೌಡ ಈ ರೀತಿಯ ಅಧಿಕಾರ ನಾಮಗಳನ್ನು ಉಪಯೋಗಿಸುತ್ತಿದ್ದ ಇವರು, ನಾಡಿನ ಮೇಲೆ ಸಂಪೂರ್ಣ ಹತೋಟಿ ಹೊಂದಿರುತ್ತಿದ್ದರು. ಅದರ ಅಭಿವೃದ್ಧಿಗೂ ಶ್ರಮಿಸುತ್ತಿದ್ದರು. ಅಪರೂಪವಾಗಿ ಸ್ವತಂತ್ರರಾಗುವ ಸಂಭವ ಒದಗಿದಾಗ ಇವರು 'ರಾಜ' ಎಂದು ಕರೆದುಕೊಂಡುದೂ ಉಂಟು. ತಾಳಿಕೋಟೆಯ ದುರಂತದ ತರುವಾಯ ಈ ಸಾಮಂತ ಪಾಳೆಯಗಾರರಿಗೆ ಸ್ವತಂತ್ರರಾಗಲು ಅಲ್ಲಲ್ಲಿ ಅವಕಾಶ ಸಿಕ್ಕಿದರೂ ಹೆಚ್ಚಿನ ಪಾಳೆಯಪಟ್ಟುಗಳು ಅನಂತರದ ವಿಜಯನಗರ ಅರಸರಿಗೆ ನಾಮಮಾತ್ರವಾಗಿಯಾದರೂ ಅಧೀನತ್ವವನ್ನು ಒಪ್ಪಿಕೊಳ್ಳುತ್ತಿದ್ದವು. ಅದರೆ, ೧೭ನೆಯ ಶತಮಾನದ ಮಧ್ಯಭಾಗದಲ್ಲಿ ಅರವೀಡು ವಂಶದ ಪತನವಾದ ಮೇಲೆ ಹೆಚ್ಚು ಕಡಿಮೆ ಎಲ್ಲ ಪಾಳೆಯಗಾರರೂ ಸ್ವತಂತ್ರರಾದರು.

"ಕರ್ನಾಟಕದ' ಭಾಗದಲ್ಲಿ ಈ ರೀತಿ ತಲೆ ಎತ್ತಿದ ಸುಮಾರು ೭೦ಕ್ಕೂ ಹೆಚ್ಚು ಪಾಳೆಯ ಪಟ್ಟುಗಳು ಇದ್ದವು. ಆದರೆ, ಕಾಲಕಾಲಕ್ಕೆ ಈ ಪಾಳೆಯಪಟ್ಟುಗಳ ಪರಸ್ಪರ ಕಚ್ಚಾಟ, ಅಧಿಕಾರ ವಿಸ್ತರಣಾಕಾಂಕ್ಷೆ ಮೊದಲಾದ ಕಾರಣಗಳಿಂದ ಈ ಸಂಖ್ಯೆ ಏರುವುದೂ, ಕುಗ್ಗುವುದೂ, ಸಾಮಾನ್ಯವಾತ್ತು. ಇವುಗಳಲ್ಲಿ ಮೂಲತಃ ಪಾಳೆಯ ಪಟ್ಟುಗಳಾಗಿದ್ದ ಕೆಳದಿ ಮತ್ತು ಮೈಸೂರು

ರಾಜತ್ವದೆಡೆಗೆ ಜಿಗಿದವು."[೩] ಈ ಕಾರಣದಿಂದ ೧೮ನೆಯ ಶತಮಾನದ ಆದಿಭಾಗದ ಹೊತ್ತಿಗೆ ಅನೇಕ ಪಾಳೆಯಪಟ್ಟುಗಳು ಶಿಥಿಲವಾದವು. ಮುಂದೆ ಹೈದರ್ ಮತ್ತು ಟಿಪ್ಪುಸುಲ್ತಾನ್ ಮೈಸೂರು ರಾಜ್ಯದ ಪ್ರಭುತ್ವವನ್ನು ಸಾಧಿಸಿ ಸುಮಾರು ಎಲ್ಲಾ ಪಾಳೆಯಪಟ್ಟುಗಳನ್ನೂ ಕೊನೆಗಾಣಿಸಿದರು. ಟಿಪ್ಪು ಮತ್ತು ಬ್ರಿಟಿಷರ ಯುದ್ಧದ ಕಾಲದಲ್ಲಿ ಮತ್ತು ಆನಂತರದಲ್ಲಿ ಕೆಲವು ಪಾಳೆಯಗಾರರು ಮತ್ತೆ ತಲೆ ಎತ್ತಲು ಪ್ರಯತ್ನಿಸಿದರೂ ಅದು ಸಫಲವಾಗಲಿಲ್ಲ.

ಹೊಸಕೋಟೆ ತಾಲೂಕಿನ ನಂದಗುಡಿ ಮತ್ತು ಚನ್ನಪಟ್ಟಣ ತಾಲ್ಲೂಕಿನ "ಮಾಕುಂದ' ಈ ಸ್ಥಳಗಳ ಬಗ್ಗೆ ದೊರಕುವ ಮಾಹಿತಿ ಪ್ರಕಾರ ಈ ಪ್ರದೇಶ ನಂದರು ಮತ್ತು ಮೌರ್ಯರ ಆಳ್ವಿಕೆಗೆ ಒಳಪಟ್ಟಿದ್ದಿರಬಹುದೆಂಬುದಕ್ಕೆ ಸೂಚನೆಗಳು ದೊರಕುತ್ತವೆ."[೪] ಆದರೆ ಜಿಲ್ಲೆಯ ಇತಿಹಾಸ ಸ್ಪಷ್ಟವಾಗಿ ಪಾರಂಭವಾಗುವುದು ತಲಕಾಡಿನ ಗಂಗರ ಕಾಲದಿಂದ. ೭-೮ನೆಯ ಶತಮಾನಗಳಲ್ಲಿ ಅದೇ ತಾಲ್ಲೂಕಿನ ಮಾಕುಂದ ಭೂವಿಕ್ರಮ ಮತ್ತು ಒಂದನೆಯ ಶಿವಮಾರ ಇವರ ಉಪರಾಜಧಾನಿಯಾಗಿತ್ತು. ೮ನೆಯ ಶತಮಾನದಲ್ಲಿ ಶ್ರೀಪುರುಷ ನೆಲಮಂಗಲ ತಾಲ್ಲೂಕಿನ ಮಣ್ಣೆಯನ್ನು ಕೆಲಕಾಲ ತನ್ನ ರಾಜಧಾನಿಯಾಗಿ ಮಾಡಿಕೊಂಡಿದ್ದ. ಆದರೆ ಆ ಶತಮಾನದ ಅಂತ್ಯದಲ್ಲಿ ಈ ಜಿಲ್ಲೆಯ ಅನೇಕ ಭಾಗಗಳು ರಾಷ್ಟ್ರಕೂಟರ ವಶವಾಗಿ ಆಗ ಇಲ್ಲಿನ ಪ್ರಾಂತ್ಯಾಧಿಕಾರಿಯಾದ ಕಂಬ ಸಹ ಮಣ್ಣೆಯಲ್ಲಿ ನೆಲಸಿದಂತೆ ತೋರುತ್ತದೆ. "೯-೧೦ ನೆಯ ಶತಮಾನಗಳಲ್ಲಿ ಜಿಲ್ಲೆಯ ಹೊಸಕೋಟೆ ದೇವನಹಳ್ಳಿ ತಾಲ್ಲೂಕಿನ ಭಾಗಗಳು ನೊಳಂಬ ಪಲ್ಲವರ ವಶದಲ್ಲಿತ್ತಾದರೂ ಆನಂತರ ಗಂಗರಾಜ್ಯಕ್ಕೆ ಸೇರಿದವು. ಸುಮಾರು ಕ್ರಿ.ಶ.೧೦೦೪ ರ ಹೊತ್ತಿಗೆ ರಾಜರಾಜ ಚೋಳರ ವಶವಾಯಿತು. ಆಗ ಜಿಲ್ಲೆಯ ದಕ್ಷಿಣ ಭಾಗಕ್ಕೆ ಚೋಳಮಂಡಲವೆಂಬ ಹೆಸರಿತ್ತು. ೧೨ನೆಯ ಶತಮಾನದ ಆದಿಭಾಗದಲ್ಲಿ ಜಿಲ್ಲೆಯ ಪಶ್ಚಿಮ ಭಾಗ ಹೊಯ್ಸಳರ ಅಧೀನಕ್ಕೆ ಬಂದರೂ ಪೂರ್ವ ಮತ್ತು ದಕ್ಷಿಣ ಭಾಗದಲ್ಲಿ ಚೋಳರ ಆಳ್ವಿಕೆ ಸುಮಾರು ಕ್ರಿ.ಶ.೧೨೦೦ ರವರೆಗಾದರೂ ಮುಂದುವರಿದಂತೆ ತೋರುತ್ತದೆ."[೫]

೧೩ನೆಯ ಶತಮಾನದ ಅಂತ್ಯದ ಹೊತ್ತಿಗೆ ಈ ಜಿಲ್ಲೆ ೩ನೆಯ ಬಲ್ಲಾಳನ ಅಧಿಪತ್ಯಕ್ಕೆ ಒಳಪಟ್ಟು ಆನಂತರ ವಿಜಯನಗರ ಸಾಮ್ರಾಜ್ಯದ ಸ್ಥಾಪನೆಯೊಡನೆ ಅದರಲ್ಲಿ ವಿಲೀನವಾಯಿತು. ೧೫ನೆಯ ಶತಮಾನದ ಆರಂಭದ ಹೊತ್ತಿಗೆ ವಿಜಯನಗರದ ಸಾಮಂತರಾಗಿ ಅವತಿಯ ಪಾಳೆಯಗಾರರು ಮತ್ತು ಅವರ ಅನೇಕ ಶಾಖೆಗಳು ಜಿಲ್ಲೆಯ ನಾನಾ ಭಾಗಗಳಲ್ಲಿ ಪ್ರಭುತ್ವ ನಡೆಸುತ್ತಿದ್ದುವು. ಆವತಿ, ದೇವನಹಳ್ಳಿ, ಯಲಹಂಕ, ದೊಡ್ಡಬಳ್ಳಾಪುರ, ಬೆಂಗಳೂರು, ಮಾಗಡಿ, ಸರ್ಜಾಪುರ ಮೊದಲಾದವು. ಅಂಥ

ಪಾಳೆಪಟ್ಟುಗಳಲ್ಲಿ ಕೆಲವು ತಾಳೀಕೋಟೆಯ ಯುದ್ಧಾನಂತರವೂ ಪಾಳೆಯಪಟ್ಟುಗಳಾಗಿ ಮುಂದುವರಿದವು.

ಆದರೆ "ಚನ್ನಪಟ್ಟಣ ಮತ್ತು ಸುತ್ತಲಪ್ರದೇಶ ಮಾತ್ರ ಪೆನುಗೊಂಡೆಯಲ್ಲಿ ನೆಲೆಗೊಂಡಿದ್ದ ವಿಜಯನಗರ ಪ್ರಭುವಿನ ಸಂಬಂಧಿಯೊಬ್ಬನಾದ ಜಗದೇವರಾಯನ ವಶಕ್ಕೆ ಬಂದು ಅವನ ವಂಶದವರು ಸುಮಾರು ಕ್ರಿ.ಶ.೧೬೩೦ ರವರೆಗೂ ಆಳಿದರು."[೬] ಆನಂತರ ಮೈಸೂರಿನ ಚಾಮರಾಜ ಅರಸ ಅದನ್ನು ವಶಪಡಿಸಿಕೊಂಡ .ಕ್ರಿ.ಶ. ೧೬೩೮ ರಲ್ಲಿ ಬಿಜಾಪುರದ ಸರದಾರ ರಣದುಲ್ಲಾಖಾನ್ ಬೆಂಗಳೂರು ಸೇರಿದಂತೆ ಜಿಲ್ಲೆಯ ಉತ್ತರ ಭಾಗವನ್ನೆಲ್ಲಾ ವಶಪಡಿಸಿಕೊಂಡ. ಮಾಗಡಿ ಭಾಗದಲ್ಲಿ ಕೆಂಪೇಗೌಡನ ವಂಶಸ್ಥರ ಆಳ್ವಿಕೆಯೂ, ಚನ್ನಪಟ್ಟಣ, ಕನಕಪುರ ಭಾಗಗಳಲ್ಲಿ ಮೈಸೂರು ಒಡೆಯರ ಆಳ್ವಿಕೆಯೂ ಮುಂದುವರಿಯಿತು.

ಬಿಜಾಪುರದ ಆಳ್ವಿಕೆಗೆ ಸೇರಿದ ಜಿಲ್ಲೆಯ ಭಾಗಗಳು ಶಿವಾಜಿಯ ತಂದೆ ಶಹಾಜಿಗೆ ಜಹಗೀರಾಗಿ ದೊರೆಯಿತು. ಈ ಪ್ರದೇಶದಲ್ಲಿ ಮರಾಠಿ ಸರದಾರರು ಬಂದು ನೆಲಸಲಾರಂಭಿಸಿದರು. ಕ್ರಿ.ಶ.೧೬೫೪ ರಲ್ಲಿ ಮೈಸೂರಿನ ಕಂಠೀರವ ನರಸರಾಜ ಮಾಗಡಿಯನ್ನು ವಶಪಡಿಸಿಕೊಂಡನ್ನಲ್ಲದೆ, ಬೆಂಗಳೂರನ್ನು ಶಹಾಜಿಯ ವಂಶದ ವೆಂಕಾಜಿಯಿಂದ ಖರೀದಿ ಮಾಡಿ ಈ ಜಿಲ್ಲೆಯ ಬಹುಪ್ರದೇಶದ ಮೇಲೆ ತನ್ನ ಅಧಿಕಾರವನ್ನು ವಿಸ್ತರಿಸಿದನು.

ಈ ಮಧ್ಯದಲ್ಲಿ ೧೭ನೆಯ ಶತಮಾನದ ಕೊನೆಯ ಹೊತ್ತಿಗೆ ಹೊಸಕೋಟೆ, ದೊಡ್ಡಬಳ್ಳಾಪುರ ಪ್ರದೇಶಗಳು ಮೊಗಲರ ವಶವಾಗಿತ್ತು. ಕ್ರಿ.ಶ.೧೭೪೯ ರ ಹೊತ್ತಿಗೆ ದೇವನಹಳ್ಳಿ ಪಾಳೆಪಟ್ಟು ಮೈಸೂರು ರಾಜ್ಯಕ್ಕೆ ಸೇರಿತಲ್ಲದೆ, ಕ್ರಿ.ಶ.೧೭೬೧ ರಲ್ಲಿ ಹೊಸಕೋಟೆ ಮತ್ತು ದೊಡ್ಡಬಳ್ಳಾಪುರಗಳನ್ನು ಮೈಸೂರು ರಾಜ್ಯಕ್ಕೆ ಪಡೆದುಕೊಳ್ಳಲಾಯಿತು. ಮುಂದೆ ಈ ಜಿಲ್ಲೆಯ ಪ್ರದೇಶ ಹೈದರ್ ಮತ್ತು ಟಿಪ್ಪುಸುಲ್ತಾನರ ವಶದಲ್ಲಿತ್ತು. ಕ್ರಿ.ಶ.೧೭೯೧ ರಲ್ಲಿ ಬ್ರಿಟಿಷರು ಜಿಲ್ಲೆಯ ಬಹುಭಾಗವನ್ನು ಆಕ್ರಮಿಸಿದರು. ಇದರನಂತರ ಪುನಃ ಮೈಸೂರು ಅರಸರ ವಶಕ್ಕೆ ಬಂದು ಅಂದಿನಿಂದ ಮೈಸೂರು ರಾಜ್ಯದ ಭಾಗವಾಗಿ ಮುಂದುವರಿಯಿತು. ಇತಿಹಾಸ ಕಾಲಕ್ಕೆ ಸಂಬಂಧಿಸಿದ ಅನೇಕ ವಾಸ್ತುಶಿಲ್ಪ ಕೃತಿಗಳು ಜಿಲ್ಲೆಯಲ್ಲಿ ಉಳಿದು ಬಂದಿವೆ.

ಗಂಗರ ಕಾಲದ ಕೆಲವು ದೇವಾಲಯಗಳು ನೆಲಮಂಗಲ ತಾಲ್ಲೂಕಿನ ಮಣ್ಣೆ ಮತ್ತು ದಕ್ಷಿಣ ಬೆಂಗಳೂರು ತಾಲ್ಲೂಕಿನ ಬೇಗೂರು, ದೇವನಹಳ್ಳಿ ತಾಲ್ಲೂಕಿನ ಗಂಗಾವರ ಮೊದಲಾದ ಸ್ಥಳಗಳಿವೆ. ಬೆಂಗಳೂರಿನ ಹಲಸೂರು, ಸೋಮೇಶ್ವರ ದೇವಾಲಯ, ಹೊಸಕೋಟೆ 'ಕೊಂಡರಹಳ್ಳಿ'ಯ ಧರ್ಮೇಶ್ವರ, ಚನ್ನಪಟ್ಟಣ ತಾಲ್ಲೂಕಿನ ಮಳೂರಿನ ಅಪ್ರಮೇಯ ಮತ್ತು ಕೃಷ್ಣ ದೇವಾಲಯಗಳೂ ಮೂಲತಃ ಚೋಳರ ಕಾಲದವುಗಳಾಗಿವೆ.

"ಕರ್ನಾಟಕದ ಪರಂಪರೆಯಲ್ಲಿ  ಯಲಹಂಕದ ಪ್ರಭುಗಳು ಜೊತೆಗೆ ಸುಗಟೂರು ನಾಡಿನ ಪ್ರಭುಗಳನ್ನೂ ಕಾಣಬಹುದು. ಈ ಮನೆತನದ ಪ್ರತಿಯೊಬ್ಬನೂ ತನ್ನನ್ನು ತಮ್ಮೇಗೌಡ(ಕ್ರಿ.ಶ.೧೫೫೫) ಎಂದು ಕರೆದುಕೊಂಡಿದ್ದಾನೆ. ಪೆನುಕೊಂಡೆಯ ರಾಜರಿಂದ 'ಚಿಕ್ಕರಾಯ' ಎಂಬ ಬಿರುದನ್ನು ಪೆನುಕೊಂಡೆಯ ಆಕ್ರಮಣವನ್ನು ಎದುರಿಸಿದ ತಮ್ಮೇಗೌಡನು ಪಡೆದುಕೊಂಡನು."[೭] 'ಇವನ ಮಗ ೨ನೇ ತಮ್ಮ ಭೂಪಾಲನು ಭೀಮನ ದುರ್ಗವನ್ನು ಆಕ್ರಮಿಸಿ ಪೆನುಕೊಂಡೆಯ ರಾಜರಿಂದ ಕ್ರಿ.ಶ. ೧೬೩೨ರಲ್ಲಿ ಚಿನ್ನದ ಬಸವ ಮತ್ತು ವೀರಭದ್ರರಿರುವ ಪಾತಾಕೆಯನ್ನು ಪಡೆದನು. "ಅವನ ಮಗ ಮುಮ್ಮಡಿ ತಮ್ಮ ಭೂಪಾಲನು ಮಹಾಪಂಡಿತನಾಗಿದ್ದು, 'ರಾಜೇಂದ್ರ ಚೋಳಚರಿತ', 'ಕುಮಾರಾರ್ಜುನೀಯ' ಮತ್ತು 'ಸುಂದರೇಶ ಚರಿತ' ಎಂಬ ಗ್ರಂಥಗಳನ್ನು ತೆಲುಗಿನಲ್ಲೂ 'ಶಂಕರ ಸಂಹಿತೆ'ಯನ್ನು ಕನ್ನಡದಲ್ಲೂ ರಚಿಸಿದನು. ಸಂಸ್ಕೃತದಲ್ಲಿ 'ಕರ್ಮದಿ ವ್ಯಾಖ್ಯಾನ ರಸಿಕ ಮನೋರಂಜನೆ' ಎಂಬುದನ್ನು, ಅಲ್ಲದೆ 'ಶಿವದರ್ಪಣ'ವನ್ನು ವಿದ್ವಾಂಸರಾದ ಬ್ರಾಹ್ಮಣರಿಂದ ಸಂಕಲನ ಮಾಡಿಸಿದನು."[೮]

ವಾಣಿಜ್ಯ ವ್ಯಾಪಾರಗಳನ್ನು ಅಭಿವೃದ್ಧಿಪಡಿಸಿ ಮಹಮ್ಮದೀಯರ ಕಿರುಕುಳಕ್ಕೆ ಒಳಗಾಗಿ ಆಶ್ರಯ ಬೇಡಿ ಬಂದ ನೂರಾರು ಹಿಂದೂ ನಿರಾಶ್ರಿತರಿಗೆ ಆಶ್ರಯ ನೀಡಿದನು. ಹೊಸಕೋಟೆಯಲ್ಲಿ ಅವಿಮುಕ್ತೇಶ್ವರ ದೇವಾಲಯವನ್ನು ಕಟ್ಟಿಸಿದನು. ಮೊದಲು ಹೊಸಕೋಟೆಯನ್ನು ಶಾಹಜಿ, ಅನಂತರ ಕ್ರಿ.ಶ.೧೬೬೩ ರಲ್ಲಿ ಖಾಸಿಮ್‌ಖಾನನೂ ಆಕ್ರಮಿಸಿದ್ದರು. ಕ್ರಿ.ಶ.೧೭೬೧ ರಲ್ಲಿ ಹೈದರನು ಹೊಸಕೋಟೆಯನ್ನು ಮೈಸೂರಿಗೆ ಸೇರಿಸಿದನು. ಕರ್ನಾಟಕದ ರಾಜಕೀಯ ಇತಿಹಾಸವು ಕ್ರಿ.ಶ ೧೭ನೆಯ ಮತ್ತು ೧೮ನೆಯ ಶತಕಗಳ ಮಧ್ಯದಲ್ಲಿ ಒಂದು ಕಡೆ ಮರಾಠರೊಂದಿಗೂ ಇನ್ನೊಂದು ಕಡೆ ಬ್ರಿಟಿಷರೊಂದಿಗೂ ಬಹಳ ಸಂಬಂಧ ಹೊಂದಿರುತಹುದು. ಚಿಕ್ಕದೇವರಾಜ ಒಡೆಯರು ಹೈದರನ ಮತ್ತು ಟಿಪ್ಪು ವಿಷಯವನ್ನು ಗಮನಿಸುವಾಗ ಈಗಾಗಲೇ ಅನುಷಂಗಿಕವಾಗಿ ಮರಾಠರ ಮುತ್ತಿಗೆಗಳ ಮತ್ತು ದಾಳಿಗಳ ಉಲ್ಲೇಖ ಮಾಡಲಾಗಿದೆ. ಮೊದಲ ಹಂತದಲ್ಲಿ ಪ್ರಾದೇಶಿಕ ಏಕತೆಯ ಪರಕೀಯ ಮರಾಠ ಪ್ರಭುತ್ವದ ಛಾಯೆಯಲ್ಲಿ ಸಂಭವಿಸಿತು. ಈ ಪರಕೀಯ ಆಗಂತುಕರ ವಿರುದ್ದ ಯಾವ ಪ್ರತಿರೋದವು ವ್ಯಕ್ತವಾಗಲಿಲ್ಲ.

'ನಗರ ರಾಜ್ಯಗಳು' ಎನಿಸಿಕೊಂಡ ಬೆಂಗಳೂರು, ಹೊಸಕೋಟೆ, ಕೋಲಾರ, ದೊಡ್ಡಬಳ್ಳಾಪುರ ಮತ್ತು ಸಿರಾ ಇವೇ ಮೊದಲಾದವುಗಳು ಇನ್ನುಳಿದವುಗಳ ಹಾಗೆ ಸ್ಥಾನಿಕ ಸ್ವಾತಂತ್ರ್ಯದ ಕಾಲದಲ್ಲಿ ಅಸ್ತಿತ್ವದಲ್ಲಿ ಬಂದಿದ್ದವು. ಇದಾದ ಅಲ್ಪಾವಧಿಯಲ್ಲಿಯೇ ಹೈದರನು

ರಾಜ್ಯದ ಸಮಸ್ತ ಅಧಿಕಾರವನ್ನು ಸ್ವಾಧೀನಪಡಿಸಿಕೊಂಡು ಮರಾಠರ ವಿರುದ್ಧ ದಂಡೆತ್ತಿ ಹೋಗಲು ಪ್ರಾರಂಭಿಸಿದನು. ಕ್ರಿ.ಶ.೧೭೬೧ ಮತ್ತು ಕ್ರಿ.ಶ.೧೭೬೩ ರ ಮಧ್ಯಕಾಲದಲ್ಲಿ ಅವನು ಕರ್ನಾಟಕವನ್ನು ಜಯಸಿದನು. ಆಗ ಕರ್ನಾಟಕವು ಮರಾಠರ ಸೌಮ್ಯತ್ವಕ್ಕೆ ಒಳಪಟ್ಟೋ ಇಲ್ಲವೆ ಅವರನ್ನೇ ಅವಲಂಬಿಸಿಯೋ ಇತ್ತು. ಹೈದರನು ಗೆದ್ದುಕೊಂಡ ಈ ಹೊಸ ಪ್ರದೇಶವು. ಅವನ ಮೊದಲಿನ ರಾಜ್ಯಕ್ಕಿಂತ ದೊಡ್ಡದು, ಸಿರಾ, ದೊಡ್ಡಬಳ್ಳಾಪುರ, ಚಿಕ್ಕಬಳ್ಳಾಪುರ, ಹೊಸಕೋಟೆ, ಘಾಟಿಯ ಕೆಲಭಾಗ ಬಂಕಾಪುರ ಮತ್ತು ಉತ್ತರಕರ್ನಾಟಕದ ಧಾರವಾಡ, ಹುಬ್ಬಳ್ಳಿ, ಸೊಂಡ ಇವೇ ಮೊದಲಾದವುಗಳನ್ನು ಒಳಗೊಂಡಂತೆ, ಉತ್ತರ ಕರ್ನಾಟಕ ಎಲ್ಲ ಭಾಗಗಳೂ ಹೈದರನ ಹೊಸ ಸೀಮೆಯ ವ್ಯಾಪ್ತಿಯಲ್ಲಿ ಬಂದವು. ಚಿತ್ರದುರ್ಗ, ರಾಯದುರ್ಗ, ಹರಪನಹಳ್ಳಿ ಇವುಗಳ ಪಾಳೆಯಗಾರರು ಹೈದರನಿಗೆ ಗೌರವ ನೀಡಲು ಸಮ್ಮತಿಸಿದರು. ಇದರಿಂದ ಮರಾಠರು ಅನಿವಾರ್ಯವಾಗಿ ಮತ್ತೊಂದು ದಾಳಿಯನ್ನು ನಡೆಸಲೇ ಬೇಕಾಯಿತು.

ಕ್ರಿ.ಶ.೧೭೬೪ ರಲ್ಲಿ ನಡೆದ ದಾಳಿಗೆ ಪೇಶ್ವೆ ಮಾಧವರಾವ್ ದಂಡನಾಯಕನಾದನು. ಪೇಶ್ವೆಯ ಸೈನ್ಯವು ಉತ್ತರ ಕರ್ನಾಟಕವನ್ನು ಮುತ್ತಿ, ಕೊಳ್ಳೆ ಹೊಡೆದ ನಂತರ ಹೈದರನು ರಟ್ಟೇಹಳ್ಳಿಯಲ್ಲಿ, ಆನಂತರ ಆನವಟ್ಟಿಯಲ್ಲಿ ಅವರನ್ನು ಎದುರಿಸಿದನು. ಕ್ರಿ.ಶ.೧೭೬೫ರ ಮಾರ್ಚ್ ತಿಂಗಳಲ್ಲಿ ಒಪ್ಪಂದಕ್ಕೆ ಬರಲಾಯಿತು. ಈ ಒಪ್ಪಂದದ ಪ್ರಕಾರ ಹೈದರನು ಮರಾಠರಿಗೆ ಉತ್ತರ ಕರ್ನಾಟಕವನ್ನು ಮರಳಿ ಕೊಡುವುದಾಗಿ ಮತ್ತು ಕೊಡದೆ ಉಳಿದಿದ್ದ 'ಖಂಡಣಿ' ಹಣವನ್ನೂ ಒಪ್ಪಿಸುವುದಾಗಿ ಸಮ್ಮತಿಸಿದನು. ಎರಡು ವರ್ಷಗಳಾದ ಮೇಲೆ ಪೇಶ್ವೆಯು ಸಿರಾ, ದೊಡ್ಡಬಳ್ಳಾಪುರ, ಹೊಸಕೋಟೆಯ ಪ್ರದೇಶಗಳನ್ನು ಪುನಃ ವಶಪಡಿಸಿಕೊಂಡನು. ಕ್ರಿ.ಶ.೧೭೬೯-೧೭೯೯ ರಲ್ಲಿ ಕರ್ನಾಟಕದ ರಾಜ್ಯವು ಹೈದರಾಲಿ ಮತ್ತು ಟಿಪ್ಪುಸುಲ್ತಾನ್ ಅವರ ಆಳ್ವಿಕೆಯಲ್ಲಿದ್ದಿತು. ಕೇಂದ್ರ ನಿರ್ದೇಶಿತವಾದ ದಕ್ಷ ಆಡಳಿತ ಯಂತ್ರದ ನಿರ್ಮಾಣ ಹಾಗೂ ಒಳ್ಳೆಯ ಪೋಲಿಸು ವ್ಯವಸ್ಥೆ ಇವೆಲ್ಲವೂ ಒಳ್ಳೆಯ ಆರ್ಥಿಕ ವ್ಯವಸ್ಥೆಗೆ ಅನುಕೂಲವಾಗಿದ್ದ ವಾತಾವರಣ ಕಲ್ಪಸಿದವು. ವ್ಯವಸಾಯಗಾರ, ಕೈಗಾರಿಕೆಯವ ಅರ ವ್ಯವಸ್ಥೆಗೆ ಅನುಕೂಲವಾಗಿದ್ದ ವಾತಾವರಣ ಕಲ್ಪಿಸಿದವು. ವ್ಯವಸಾಯಗಾರ, ಕೈಗಾರಿಕೆಯವ ಮತ್ತು ವ್ಯಾಪಾರಿ ಇವರೆಲ್ಲರೂ ಹೈದರಾಲಿಯ ಆಳ್ವಿಕೆಯಲ್ಲಿ ಅಭ್ಯುದಯ ಸ್ಥಿತಿಯಲ್ಲಿದ್ದರು. ಕೃಷಿ ವಿಸ್ತರಿಸಿತು.

ಹೊಸ ಕೈಗಾರಿಕೆಗಳು ಸ್ಥಾಪಿಸಲ್ಪಟ್ಟವು ಮತ್ತು ರಾಜ್ಯಕ್ಕೆ ಸಂಪತ್ತು ಹರಿದು ಬರುತ್ತಿತ್ತು. ಹೆಚ್ಚು ಆರ್ಥಿಕ ಚಟುವಟಿಕೆ ಹೊಂದಿದ್ದ ವ್ಯಾಪಾರ ಕೇಂದ್ರಗಳು ಅನೇಕವಿದ್ದವು. ಬೆಂಗಳೂರು,

ಬಿದನೂರು, ಮಂಗಳೂರು, ಹೊನ್ನಾವರ, ಚನ್ನಪಟ್ಟಣ, ಹೊಸಕೋಟೆ, ಸಿರಾ, ಕೋಲಾರ, ಪಿರಿಯಾಪಟ್ಟಣ, ದಾವಣಗೆರೆ, ಬಳ್ಳಾರಿ ಮತ್ತು ಆದವಾನಿ ಇವು ಇಂತಹ ಮುಖ್ಯವಾದ ಹಿರಿಯ ವ್ಯಾಪಾರ ಕೇಂದ್ರಗಳಾಗಿದ್ದವು. ಕೈಗಾರಿಕೆಗೆ ಅವಶ್ಯಕವಾದ ಸಾರಿಗೆ ಮತ್ತು ಸಂಪರ್ಕಗಳ ಪ್ರಗತಿಯು ನಿಧಾನವಾಗಿ ಆಗೊಮ್ಮೆ ಈಗೊಮ್ಮೆ ಸಂಭವಿಸಿತು. ಕ್ರಿ.ಶ.೧೮೬೪ ರಲ್ಲಿ ಸ್ಥಾಪಿಸಲಾದ ಬೆಂಗಳೂರು ಮದರಾಸು ರೈಲ್ವೆ ಸಂಪರ್ಕ ಮತ್ತು ರಾಯಚೂರು ಗುಲ್ಬರ್ಗ ಜಿಲ್ಲೆಗಳ ಮೂಲಕ ಹಾದು ಹೋಗುವ ಮದರಾಸು–ಬೊಂಬಾಯಿ ರೈಲ್ವೆಗಳ ಜೊತೆಗೆ ಹತ್ತೊಂಬತ್ತನೆಯ ಶತಮಾನದ ಕೊನೆಯ ಎರಡು ದಶಕಗಳಲ್ಲಿ ಅನೇಕ ರೈಲ್ವೆ ಮಾರ್ಗಗಳನ್ನು ತೆರೆಯಲಾಯಿತು.

ದಕ್ಷಿಣ ಭಾರತವನ್ನು ಆಳಿದ ಪ್ರಮುಖರಲ್ಲಿ ಕದಂಬರು, ಗಂಗರು ರಾಷ್ಟ್ರಕೂಟರು, ಚಾಲುಕ್ಯರು, ಹೊಯ್ಸಳರು, ಮತ್ತು ವಿಜಯನಗರದ ಅರಸರು ಹೀಗೆ ಅನೇಕ ರಾಜವಂಶದವರನ್ನು ಹೆಸರಿಸಬಹುದಾಗಿದೆ. ಈ ಹಿಂದೆ ಚರಿತ್ರಕಾರರು ಶ್ರೀಪುರುಷನನ್ನು ಕ್ರಿ.ಶ.೩೦೦ರಲ್ಲಿ ಆಳಿದ ಗಂಗರ ಮೊದಲ ದೊರೆ ಎಂದು ಗುರುತಿಸಿದ್ದಾರೆ. ಕ್ರಿ.ಶ.೧೩೫೦ರ ಕೈವಾರನಾಡಿನ ನಂಜಿಗುಳ, ಈಗಿನ ನಂದಗುಡಿ ಹೊಸಕೋಟೆ ತಾಲ್ಲೂಕಿನಲ್ಲಿದೆ. ಇನ್ನೂ ಅನೇಕ ಆಧಾರಗಳು ಈ ತಾಲ್ಲೂಕಿನ ಸುತ್ತಮುತ್ತಲ ಗ್ರಾಮಗಳಲ್ಲಿ ದೊರೆತಿದ್ದು, ಈ ಪ್ರದೇಶ ಬಹುಕಾಲ ಗಂಗರ ಆಳ್ವಿಕೆಗೆ ಒಳಪಟ್ಟಿತ್ತು ಎಂಬುದನ್ನು ಎತ್ತಿ ತೋರಿಸುತ್ತದೆ. ಕ್ರಿ.ಶ.೧೩೭೯ ರಲ್ಲಿ ಆಳಿದ ಮಾರನಾಡು ವಿಭಾಗದಲ್ಲಿ 'ಉಮ್ಮಲು' ಗ್ರಾಮ ಸೇರಿತ್ತು. ಇದು ಈಗಿನ ಹೊಸಕೋಟೆ ತಾಲ್ಲೂಕಿನ 'ಉಲ್ಲೂರು' ಎಂದು ಕರೆಯಲ್ಪಡುತ್ತದೆ. ವಿಜಯನಗರ ಕಾಲಕ್ಕೆ ಕ್ರಿ.ಶ.೧೫೬೪ರಲ್ಲಿ ಸುಗಟೂರು ಸೀಮೆ ಇದ್ದು, ಅದರ ಗ್ರಾಮವಾಗಿ ನಂದಗುಡಿ ಇತ್ತು. ಆಗಲೇ ಸುಗಟೂರಿನ ಪಾಳೆಯಗಾರರು ಹೊಸಕೋಟೆಯ ತಮ್ಮೇಗೌಡನ ಆಳ್ವಿಕೆಗೆ ಒಳಗಾಗಿತ್ತು. ಹೀಗೆ ಬೆಂಗಳೂರು ಗಂಗರ ನೆಲೆಯಾದರೆ, ಮಣ್ಣೇ ಗಂಗರ ರಾಜಧಾನಿಯಾಗಿತ್ತು.

ಇದನ್ನು ಈಗಿನ ನೆಲಮಂಗಲದ ಪ್ರದೇಶ ಎಂದು ಗುರುತಿಸಬಹುದಾಗಿದೆ. ಹೊಸಕೋಟೆ ಸುತ್ತಮುತ್ತಲ ಹಳ್ಳಿಗಳಾದ ಬಿಸನಹಳ್ಳಿ, ಕಟ್ಟಿಗೇನಹಳ್ಳಿ, ಮುಗಬಾಳಗಳಲ್ಲಿ ದೊರೆತಿರುವ ಶಾಸನಗಳಲ್ಲೂ ಈ ಮಾಹಿತಿ ಇದೆ. "ಇದಲ್ಲದೆ ಯಲಹಂಕದ ನಾಡ ಪ್ರಭುಗಳೂ ಹೊಸಕೋಟೆಯನ್ನು ಆಳಿದ ದಾಖಲೆಗಳು ಇವೆ. ಹೊಸಕೋಟೆ ತಾಲ್ಲೂಕು ಕೇಂದ್ರವಾದ ಹೊಸಕೋಟೆಯ ಕೋಟೆಯನ್ನು ಸುಗಟೂರು ಪಾಳೇಗಾರನಾದ ತಮ್ಮೇಗೌಡನು ಕ್ರಿ.ಶ.೧೪೯೮ ರ ವೇಳೆಗೆ ಕಟ್ಟಿದ ಅಂಶವನ್ನು ಖಾಜಿ ಹೊಸಹಳ್ಳಿಯ ತಾಮ್ರ ಶಾಸನ ತಿಳಿಸುತ್ತದೆ."[೯] ಆದರೆ ಇಂದು ಕೋಟೆಯ ಬಹುಭಾಗ ಶಿಥಿಲಾವಸ್ಥೆಯಲ್ಲಿದೆ. ಬೇಗೂರಿನ

ತಾಮ್ರ ಶಾಸನವೊಂದರಲ್ಲಿ ಹೊಸಕೋಟೆ, ಕಂಗೊದಿ ದುರ್ಗ, ವೆಂಕಟಗಿರಿ ಕೋಟೆ ಹಾಗೂ ಕೆಂಕಣಿ ಕೋಟೆಗಳ ಬಗ್ಗೆ ಉಲ್ಲೇಖ ಇದೆ. ಇದರಲ್ಲಿ ಬರುವ ಹೊಸಕೋಟೆ ಹಾಗೂ ವೆಂಕಟಗಿರಿಕೋಟೆಗಳು ಇಂದಿನ ತಾಲ್ಲೂಕು ಕೇಂದ್ರ ಹೊಸಕೋಟೆ ಹಾಗೂ ದೇವನಹಳ್ಳಿ ತಾಲ್ಲೂಕಿನ ವೆಂಕಟಗಿರಿ ಕೋಟೆಗಳಾಗಿವೆ.

ಖಾಜಿ ಹೊಸಹಳ್ಳಿಯಿಂದ ವರದಿಯಾಗಿರುವ ಕ್ರಿ.ಶ.೧೪೯೪ ರ ಶಾಸನದಿಂದ ಹೊಸಕೋಟೆಯನ್ನು ಕಟ್ಟಿಸಿದಂತಹ ತಮ್ಮೇಗೌಡನು ವೀರಶೈವ ಮಠವೊಂದಕ್ಕೆ ದಾನ ಬಿಟ್ಟ ವಿಷಯವನ್ನು ದಾಖಲಿಸಿದೆ. ಹೊಸಪೇಟೆಯಿಂದ ವರದಿಯಾಗಿರುವ ಕ್ರಿ.ಶ.೧೭೭೨ ರ ಇನ್ನೊಂದು ತಾಮ್ರಶಾಸನ ಸುಭೇದಾರ್ ರಘುರಾವ್ ಭಾವಜಿಯು ಹೊಸಕೋಟೆಯ 'ಕಿಲ್ಲೆ'ಯೊಳಗೆ ಗುಡಿಯನ್ನು ಕಟ್ಟಿಸಿದ ಅಂಶವನ್ನು ತಿಳಿಸುತ್ತದೆ. ಮಾಗಡಿಯಿಂದ ವರದಿಯಾಗಿರುವ ನಿರೂಪವೊಂದರಿಂದ ಮಾಗಡಿಯಲ್ಲಿ ಕಿಲ್ಲೆ ಇದ್ದು, ಸಮೀಪದ ಸಾವನದುರ್ಗದಲ್ಲೂ ಕೋಟೆ ಇದ್ದ ವಿಷಯ ಗೊತ್ತಾಗುತ್ತದೆ. ಹೀಗೆ ಜಿಲ್ಲೆಯ ಶಾಸನಗಳು ಈ ಪ್ರದೇಶದ ಕೋಟೆಗಳ ಬಗ್ಗೆ ಮಾಹಿತಿ ನೀಡುತ್ತದೆ.

ಜಿಲ್ಲೆಯಲ್ಲಿರುವ ಗ್ರಾಮಗಳಲ್ಲಿ 'ಕೋಟೆ'ಯೊಂದಿಗೆ ಅಂತ್ಯವಾಗುವ ಹೆಸರುಗಳನ್ನು ಹೊಂದಿರುವ ಗ್ರಾಮಗಳು ಹಿಂದೆ ಅಲ್ಲಿ ಇದ್ದಿರಬಹುದಾದ, ಆದರೆ ಇಂದು ನಮ್ಮ ಗಮನಕ್ಕೆ ಇನ್ನೂ ಬಾರದಿರುವ ಅವಶೇಷಗಳ ಬಗ್ಗೆ ಸುಳಿವು ನೀಡುತ್ತದೆ. ಅಂತಹ ಗ್ರಾಮ ನಾಮಗಳಲ್ಲಿ ಹೊಸಕೋಟೆಯ ನಾಗನಾಯಕನ ಕೋಟೆ, ಹಾಗೂ ಕೋಟೂರುಗಳೂ ಸೇರಿವೆ. ಇವುಗಳಲ್ಲಿ ಹೊಸಕೋಟೆಯನ್ನು ಒಳಗೊಂಡಂತೆ ವೆಂಕಟಗಿರಿಕೋಟೆ (ದೇವನಹಳ್ಳಿ-ತಾ), ಬಿಲ್ಲನಕೋಟೆ ಹಾಗೂ ಮದಲಕೋಟೆ (ನೆಲಮಂಗಲ ತಾ) ಗಳ ಉಲ್ಲೇಖ ಜಿಲ್ಲೆಯ ಶಾಸನಗಳಲ್ಲಿ ಇರುವುದನ್ನು ಈಗಾಗಲೇ ಗಮನಿಸಲಾಗಿದೆ.

ಜಿಲ್ಲೆಯಲ್ಲೇ ಅತ್ಯಂತ ಪ್ರಾಚೀನ ಕೋಟೆಗಳನ್ನು ಹೊಂದಿದ್ದ ಮಣ್ಣೆ ಹಾಗೂ ಮಾಕುಂದಗಳಲ್ಲಿ ಇಂದು ಕೋಟೆಯ ಅವಶೇಷಗಳೂ ಉಳಿದಿಲ್ಲ, ಆದರೆ ಉಳಿದಂತೆ ಜಿಲ್ಲೆಯಲ್ಲಿರುವ ಕಬ್ಬಾಳು, ಕುಂದಾಣ, ಹುಲಿಕಲ್ಲು, ಮಾಗಡಿ, ಸಾವನದುರ್ಗ, ರಾಮಗಿರಿ, ಆವತಿ, ದೇವನಹಳ್ಳಿ, ಚಿಕ್ಕಬಳ್ಳಾಪುರ, ದೊಡ್ಡಬಳ್ಳಾಪುರ ಹೊಸಕೋಟೆ, ಚನ್ನಪಟ್ಟಣ, ಕನಕಪುರ, ನಿಜಗಲ್ಲುಗಳ ಬಗ್ಗೆ ಮಾಹಿತಿ ಲಭಿಸಿದೆ ಮತ್ತು ಹೊಸಕೋಟೆಯ 'ಕೊಂಡರಹಳ್ಳಿ'ಯಲ್ಲಿ 'ಯಕ್ಷಪ್ರಶ್ನೆ' ನಡೆದ ಬಗ್ಗೆ ಕ್ರಿ.ಶ.950ರ ನೊಳಂಬರ ಕಾಲದ ಶಾಸನಾಧಾರ ಲಭಿಸಿದೆ.

ಹೀಗೆ ಯಲಹಂಕ ನಾಡಪ್ರಭುಗಳು, 'ಸುಗಟೂರಿನ' ಪಾಳೆಯಗಾರರು ಪ್ರಭುತ್ವ ಸ್ಥಾಪಿಸಿದ ಮೇಲೆ ಹೊಸಕೋಟೆಯ ಪ್ರಾಂತ್ಯಗಳು ಒಬ್ಬರಿಂದ ಮತ್ತೊಬ್ಬರಿಗೆ ಹಸ್ತಾಂತರ ಹೊಂದಿ ಕೊನೆಗೆ ಮರಾಠರ ಕೈವಶವಾಯಿತು. ಮರಾಠರ ಜಹಗೀರಾಗಿ ಹೊಸಕೋಟೆ, ಬೆಂಗಳೂರು, ಚಿಕ್ಕಬಳ್ಳಾಪುರ, ದೊಡ್ಡಬಳ್ಳಾಪುರ, ಕೋಲಾರ ಹಾಗೂ ಚಿಂತಾಮಣಿಗಳು ಶಹಜಿಯ ಆಳ್ವಿಕೆಗೆ ಒಳಪಟ್ಟವು. ಅಂತಿಮವಾಗಿ ಮೈಸೂರು ಸಂಸ್ಥಾನಕ್ಕೆ ಸೇರ್ಪಡೆ ಮಾಡಲಾಯಿತು. ಶಹಜಿಯ ತರುವಾಯ ವೆಂಕೋಜಿ ಹಾಗೂ ಸಂಬಾಜಿಯವರು ಆಳಿದರು. ಅವರನ್ನು ಟಿಪ್ಪುಸುಲ್ತಾನ ಹೊರಹಾಕಿ ಹೊಸಕೋಟೆ ಪ್ರಾಂತ್ಯವನ್ನು ಮೈಸೂರು ಸಂಸ್ಥಾನಕ್ಕೆ ಸೇರಿಸಿದನು. ಅದಕ್ಕೂ ಮುನ್ನ ಹೈದರಾಲಿ ಮಧುಗಿರಿ ಹಾಗೂ ಹೊಸಕೋಟೆಯನ್ನು ಮರಾಠರಿಂದ ಪಡೆದಿದ್ದನು. ಈ ಹೊತ್ತಿಗೆ ಹೈದರನ ಸ್ಥಾನಮಾನ ಸ್ಥಿತಿಗತಿ ಸಾಕಷ್ಟು ಭದ್ರವಾಗಿತ್ತು ಮತ್ತು ಮರಾಠರ ಸ್ಥಿತಿಗತಿಯು ಕ್ರಿ.ಶ.೧೭೮೦ರ ಸುಮಾರಿಗೆ ತೀರಾ ಕೆಟ್ಟು ಅಪಾಯಕರ ಮಟ್ಟ ಮುಟ್ಟಿತ್ತು. ಹೀಗಾಗಿ ಮರಾಠರು ನಿರುಪಾಯರಾಗಿ ಕರ್ನಾಟಕದ ಪ್ರದೇಶಗಳ ಮೇಲೆ ತಮ್ಮ ಪ್ರಭುತ್ವವನ್ನು ಕಳೆದುಕೊಳ್ಳುವ ಪ್ರಸಂಗ ಬಂದಿತು. ಕ್ರಿ.ಶ.೧೭೯೨ರ ತರುವಾಯ ಮೈಸೂರಿನ ದಂಡು ಕ್ರಿ.ಶ.೧೮೦೩ ಮತ್ತು ಕ್ರಿ.ಶ.೧೮೧೭-೧೮ ಮರಾಠ ಕಾಳಗದಲ್ಲಿ ಇಂಗ್ಲೀಷರ ಪರವಾಗಿ ಕಾದಾಡಿದರೂ ಮೈಸೂರು ಮತ್ತು ಮರಾಠರ ನಡುವಿನ ನೇರ ರಾಜಕೀಯ ಸಂಬಂಧಗಳು ವ್ಯಾವಹಾರಿಕ ದೃಷ್ಟಿಯಿಂದ ಕಡಿದು ಹೋದವು. ಕ್ರಿ.ಶ.೧೮೩೧ರಲ್ಲಿ ಮೈಸೂರನ್ನು ಬ್ರಿಟಷರು ವಶಪಡಿಸಿಕೊಂಡರು.

ಸರ್.ಮಾರ್ಕ್ ಕಬ್ಬನ್‌ರವರು ಮೊದಲು ಜಿಲ್ಲಾಧಿಕಾರಿಯಾಗಿ ಅಧಿಕಾರವನ್ನು ವಹಿಸಿಕೊಂಡರು. ಅಧಿಕಾರದ ಅವಧಿಯಲ್ಲಿ ೧,೫೯೭ ಮೈಲಿಗಳ ಹೊಸ ರಸ್ತೆಗಳನ್ನು ಹಾಗೂ ೩೦೯ ಮೈಲು ಸೇತುವೆಗಳನ್ನು ನಿರ್ಮಿಸಿದರು. ಹೊಸಕೋಟೆಯ ಕೆರೆಯ ಮೇಲು ಸೇತುವೆ ಇವುಗಳಲ್ಲಿ ಒಂದು. ಅವರ ಕಾಲದಲ್ಲಿ ರಸ್ತೆಗಳು, ರೈಲು ಮಾರ್ಗಗಳು ಮುಂತಾದವುಗಳ ಅಭಿವೃದ್ದಿಯಾಯಿತು. ಕ್ರಿ.ಶ.೧೯೧೨ರಲ್ಲಿ ಮೈಸೂರಿನ ದಿವಾನರಾಗಿ ಸರ್.ಎಂ.ವಿಶ್ವೇಶ್ವರಯ್ಯನವರು ನೇಮಕಗೊಂಡರು. ಅವರ ತರುವಾಯ ಸರ್.ಮಿರ್ಜಾ ಇಸ್ಮಾಯಿಲ್ ಕ್ರಿ.ಶ.೧೯೨೭ರಲ್ಲಿ ದಿವಾನರಾಗಿ ನೇಮಕಗೊಂಡರು, ಇವರುಗಳ ನೇತೃತ್ವದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯನ್ನು ಒಳಗೊಂಡಂತೆ ಇಡೀ ಮೈಸೂರು ಸಂಸ್ಥಾನವು ಅಭಿವೃದ್ದಿಯ ಮಾರ್ಗದೆಡೆಗೆ ಸಾಗಿತು. ಸ್ವಾತಂತ್ರ್ಯ ಚಳವಳಿಯ ತುರವಾಯ ಬ್ರಿಟಿಷರು ಭಾರತವನ್ನು ಬಿಟ್ಟು ಹೊರಟು ಹೋದರು. ಆನಂತರ ಕಾಂಗ್ರೆಸ್ ಪಕ್ಷ ಅಸ್ತಿತ್ವಕ್ಕೆ ಬಂದು ಮಂತ್ರಾಲೋಚನೆ ಸಭೆ ನಡೆಸಿ ಟಿ.ಸಿದ್ದಲಿಂಗಯ್ಯನವರನ್ನು ಮೈಸೂರು ಕಾಂಗ್ರೆಸ್ಸಿನ

ಅಧ್ಯಕ್ಷರನ್ನಾಗಿ ಮಾಡಿತು. ಅಲ್ಲಿಯೂ ಬೆಂಗಳೂರು ಗ್ರಾಮಾಂತರ ಜಿಲ್ಲೆಯು ಮಹತ್ತರವಾದ ಪಾತ್ರ ವಹಿಸಿತು. ಇಷ್ಟೇ ಅಲ್ಲದೆ ಕ್ರಿ.ಶ.೧೯೪೨ರಲ್ಲಿ ನಡೆದ 'ಬ್ರಿಟಿಷರೇ ಭಾರತವನ್ನು ಬಿಟ್ಟು ತೊಲಗಿರಿ' ಎಂಬ 'ಕ್ವಿಟ್ ಇಂಡಿಯಾ' ಚಳುವಳಿಯಲ್ಲೂ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಪಾತ್ರವನ್ನು ಕಾಣಬಹುದು. ಬೆಂಗಳೂರು ಗ್ರಾಮಾಂತರ ಜಿಲ್ಲೆಯು ಮಹತ್ತರವಾದ ಚಾರಿತ್ರಿಕ ಹಿನ್ನೆಲೆಯನ್ನು ಒಳಗೊಂಡಿದ್ದು, ಇತಿಹಾಸದ ಪುಟಗಳಲ್ಲಿ ತನ್ನ ಅಸ್ತಿತ್ವ ಉಳಿಸಿಕೊಂಡಿದೆ.

## ಬೆಂಗಳೂರು ಗ್ರಾಮಾಂತರ ಜಿಲ್ಲೆಯು ಭೌಗೋಳಿಕ, ನೈಸರ್ಗಿಕ, ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ

ಬೆಂಗಳೂರು ಗ್ರಾಮಾಂತರ ಜಿಲ್ಲೆ ನಾಲ್ಕು ತಾಲ್ಲೂಕುಗಳನ್ನು, ಮೂವತ್ತೈದು ಹೋಬಳಿಗಳನ್ನು, ಒಂಬತ್ತು ಪಟ್ಟಣಗಳನ್ನು ಹಾಗೂ ನೂರ ಎರಡು ಮಂಡಲ ಪಂಚಾಯ್ತಿಗಳನ್ನೂ ಒಳಗೊಂಡಿದೆ. ನಾನು ಅದ್ಯಯನಕ್ಕೆ ನಾಲ್ಕು ತಾಲ್ಲೂಕೂಗಳನ್ನು ಆರಿಸಿಕೊಂಡಿದೆ, ಈ ಜಿಲ್ಲೆಯನ್ನು ಉತ್ತರಿದಿಂದ ದಕ್ಷಿಣಕ್ಕೆ ಅರ್ಕಾವತಿ, 'ಕಣ್ವ', ಹಾಗೂ 'ದಕ್ಷಿಣ ಪಿನಾಕಿನಿ' ನದಿಗಳು ಸುತ್ತುವರಿದಿವೆ. ನಂದಿಬೆಟ್ಟದ ಸಾಲಿನಲ್ಲಿ ಹುಟ್ಟುವ ದಕ್ಷಿಣ ಮತ್ತು ಉತ್ತರ ಪಿನಾಕಿನಿ ನದಿಗಳು ಶಿವನ ಬಿಲ್ಲಾದ ಪಿನಾಕದಂತೆ ಕಮಾನಾಗಿ ಹರಿಯುವುದರಿಂದ ಇದಕ್ಕೆ 'ಪಿನಾಕಿನಿ' ಎಂಬ ಹೆಸರು ಬಂದಿದೆ ಎಂದು ಪ್ರತೀತಿ ಇದೆ. ಜಿಲ್ಲೆಯ ಪೂರ್ವ ಭಾಗದಲ್ಲಿ ಹರಿಯುವ 'ದಕ್ಷಿಣ ಪಿನಾಕಿನಿ' ನಂದಿದುರ್ಗದೆಡೆಯಿಂದ ಬಂದು ದೇವನಹಳ್ಳಿ ಹೊಸಕೋಟೆ ತಾಲ್ಲೂಕುಗಳ ಮೂಲಕ ದಕ್ಷಿಣಾಭಿಮುಖವಾಗಿ ಹರಿದು ತಮಿಳುನಾಡಿನೆಡೆಗೆ ಸಾಗುತ್ತದೆ. ಶಿಂಷಾ ನದಿ ಜಿಲ್ಲೆಯ ನೈಋತ್ಯದ ಅಂಚಿನಲ್ಲಿ ಸುಮಾರು ೭ಕಿ.ಮೀ. ದೂರ, ಕಾವೇರಿ ನದಿ ದಕ್ಷಿಣದ ಅಂಚಿನಲ್ಲಿ ಸುಮಾರು ೨೦ ಕಿ.ಮೀ. ದೂರ ಗಡಿಯಾಗಿ ಹರಿಯುತ್ತದೆ. ಕಣ್ವ ಶಿಂಷಾದ ಉಪನದಿ, ಇದು ಮಾಗಡಿ ತಾಲ್ಲೂಕಿನಲ್ಲಿ ಹುಟ್ಟಿ ದಕ್ಷಿಣಾಭಿಮುಖವಾಗಿ ಹರಿದು, ಚನ್ನಪಟ್ಟಣ ತಲ್ಲೂಕಿನ ದಕ್ಷಿಣ ಅಂಚಿನಲ್ಲಿ ಶಿಂಷಾ ನದಿಯೊಂದಿಗೆ ಕೂಡಿಕೊಳ್ಳುವುದು.

ಜಿಲ್ಲೆಯ ಪೂರ್ವದಂಚಿನಲ್ಲಿರುವ ಈ ತಾಲ್ಲೂಕಿನ ಗಡಿಯಾಗಿ ಹರಿದು ತಾಲ್ಲೂಕನ್ನು ಪ್ರವೇಶಿಸುತ್ತಲೆ ಹೊಸಕೋಟೆಯ ದೊಡ್ಡಕೆರೆಗೆ ನೀರೊದಗಿಸಿ ಮುಂದೆ ದಕ್ಷಿಣಾಭಿಮುಖವಾಗಿ ಹರಿಯುವ ಪಿನಾಕಿನಿ, ತಾಲ್ಲೂಕಿನಲ್ಲಿ ವ್ಯವಸಾಯ ಯೋಗ್ಯವಾದ ಅನೇಕ ಕೆರೆ ಮತ್ತು ಬಾವಿಗಳಿಗೆ ನೀರೊದಗಿಸುತ್ತದೆ. ಇಲ್ಲಿ ತಂಪಾದ ಹವೆ ಇದ್ದು ತಾಲ್ಲೂಕಿನ ವಾರ್ಷಿಕ ಸರಾಸರಿ ಮಳೆ ೮೪೯.೫೦ ಮಿ.ಮೀ. ಇದೆ. ಅರ್ಕಾವತಿ ಈ ಜಿಲ್ಲೆಯ ಮತ್ತೊಂದು ಮುಖ್ಯ ನದಿ.

ಬೆಂಗಳೂರು ಜಿಲ್ಲೆಯನ್ನು ೧೯೪೮ ರಲ್ಲಿ ಬೆಂಗಳೂರು ನಗರ ಪ್ರದೇಶ ಹಾಗೂ ಬೆಂಗಳೂರು ಗ್ರಾಮಾಂತರ ಪ್ರದೇಶ ಎಂಬುದಾಗಿ ವಿಂಗಡಿಸಲಾಯಿತು. ಈ ಬೆಂಗಳೂರು ಗ್ರಾಮಾಂತರ ಜಿಲ್ಲೆ ದೇವನಹಳ್ಳಿ, ದೊಡ್ಡಬಳ್ಳಾಪುರ, ಹೊಸಕೋಟೆ, ನೆಲಮಂಗಲ ಒಳಗೊಂಡಿದೆ.

ಭಾಷೆಗಳಿಗೆ ಸಂಬಂಧಿಸಿದಂತೆ ಶೇಕಡಾವಾರು ಪ್ರಮಾಣದಲ್ಲಿ ಜನಸಂಖ್ಯೆಯನ್ನು ವಿಗಂಡಿಸಿದಾಗ ಕನ್ನಡವನ್ನು ಮಾತನಾಡುವವರ ಸಂಖ್ಯೆ ಇಡೀ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಹೊಸಕೋಟೆ ತಾಲ್ಲೂಕಿನ ಪ್ರಮಾಣವೇ ಅತ್ಯಂತ ಕಡಿಮೆ ಆಗಿದ್ದು ಒಟ್ಟು ೪೯.೦೩% ರಷ್ಟು ಮಾತ್ರ ಕನ್ನಡ ಮಾತನಾಡುವವರನ್ನು ಇಲ್ಲಿ ಕಾಣಬಹುದಾಗಿದೆ.

ಇತರೆ ಭಾಷೆಗಳಿಗೆ ಸಂಬಂಧಿಸಿದಂತೆ ವಿವರಗಳು ಇಂತಿವೆ; "ಕನ್ನಡ- ೯೯,೮೨೨; ತೆಲುಗು-೪೧,೯೪೬; ಉರ್ದು-೨೨,೧೭೨; ಮರಾಠಿ-೯೯೧; ತುಳು-೪೩ ಹೀಗೆ ೧೯೮೧ರ ಜನಗಣತಿಯ ಪ್ರಕಾರ ಮಾತೃಭಾಷೆಯನ್ನಾಗಿ ಐದು ಮುಖ್ಯ ಭಾಷೆಗಳನ್ನು ತೆಗೆದುಕೊಂಡು ವಿಂಗಡಿಸಲಾಗಿದೆ. ಇದಕ್ಕೆ ಸಂಬಂಧಿಸಿದಂತೆ, ಶೇ.೭೭ಕ್ಕೂ ಹೆಚ್ಚು ತೆಲುಗು, ಶೇ.೫೦ಕ್ಕೂ ಹೆಚ್ಚು ಉರ್ದು ಶೇ.೪೫ರಷ್ಟು ತಮಿಳು ಮಾತನಾಡುವವರನ್ನು ಇಲ್ಲಿ ಕಾಣಬಹುದು ಕೇವಲ ಕನ್ನಡವನ್ನು ಮಾತನಾಡುವವರ ಸಂಖ್ಯೆ ದೊಡ್ಡಬಳ್ಳಾಪುರ ಮತ್ತು ಹೊಸಕೋಟೆಯಲ್ಲಿ ಸಮಪ್ರಮಾಣದಲ್ಲಿ ಕಾಣಬಹುದು."[೧೦] ತೆಲುಗು ಭಾಷೆಯೊಂದಿಗೆ ಕನ್ನಡವನ್ನು ಆಡುವವರ ಸಂಖ್ಯೆ ಹೊಸಕೋಟೆ, ದೊಡ್ಡಬಳ್ಳಾಪುರ ಮತ್ತು ದೇವನಹಳ್ಳಿ ತಾಲ್ಲೂಕುಗಳಲ್ಲಿ ಕಾಣಬಹುದು. ಯಥೇಚ್ಚವಾಗಿ ನೆಲಮಂಗಲದಲ್ಲಿ ಕನ್ನಡ ಮಾತಾಡುವವರನ್ನು ಕಾಣಬಹುದು. ೨೦೧೧ರಲ್ಲಿ ಇಡೀ ಬೆಂಗಳೂರು ಗ್ರಾಮಾಂತರ ಜಿಲ್ಲೆಯು ಇರುವ ಧರ್ಮ ಮತ್ತು ಆ ಧರ್ಮವನ್ನು ಪರಿಪಾಲಿಸುವ ಧರ್ಮಿಯರ ಸಂಖ್ಯೆ ಹೀಗಿದೆ. ೯,೮೭,೨೫೭

| | | |
|---|---|---|
| ೧. | ಹಿಂದುಗಳು | – ೮,೬೫,೦೧೭ |
| ೨. | ಕ್ರಿಶ್ಚಿಯನ್ನರು | – ೧೧,೮೭೭ |
| ೩. | ಮುಸಲ್ಮಾನರು | – ೫೬,೬೮೯ |
| ೪. | ಜೈನರು | – ೧೬೮೦ |
| ೫. | ಸಿಖ್ಖರು | – ೯೦೭ |
| ೬. | ಭೌದ್ಧಧರ್ಮಿಯರು | – ೨೭೦ |
| ೭. | ಇತರೆ ಜನಾಂಗದವರು | – ೫೦,೬೦೪ |

ಇದರಲ್ಲಿ ಬಲಿಜಿಗರು, ಕುರುಬರು, ಕೊರಚ, ಕೊರವ, ಎಸ್.ಸಿ, ಎಸ್.ಟಿ, ಮರಾಠರು, ರೆಡ್ಡಿಗಳು ತಿಗಳರು ಮತ್ತು ವಿಶ್ವಕರ್ಮ ಜನಾಂಗದವರು ಹಾಗೂ ಒಕ್ಕಲಿಗರನ್ನು ಹೆಚ್ಚಾಗಿ ಕಾಣಬಹುದು. ಕೊರಚ ಮತ್ತು ಕೊರವರು ಇಡೀ ಜಿಲ್ಲೆಯಲ್ಲಿ ನೆಲೆಸಿದ್ದು ದೊಡ್ಡಬಳ್ಳಾಪುರ, ಮಾಗಡಿ, ಹೊಸಕೋಟೆ ಹಾಗೂ ದೇವನಹಳ್ಳಿಗಳಲ್ಲಿ ಬಹುತೇಕ ಪ್ರಮಾಣ ಹೆಚ್ಚಾಗಿಯೇ ನೆಲೆಸಿದ್ದಾರೆ. ಕುರುಬರ ಸಂಖ್ಯೆ ಹೊಸಕೋಟೆ ತಾಲ್ಲೂಕಿನಲ್ಲಿ ಹೆಚ್ಚಾಗಿದ್ದು, ಇವರು ತೆಲುಗು ಭಾಷೆಯನ್ನು ಹೆಚ್ಚಾಗಿ ಬಳಸುತ್ತಿದ್ದು ದೇವನಹಳ್ಳಿ, ಹೊಸಕೋಟೆ ಮತ್ತು ದೊಡ್ಡಬಳ್ಳಾಪುರಗಳಲ್ಲಿ ನೆಲೆಸಿದ್ದಾರೆ. ಇವರು ಬೀರೇದೇವರು, ಮೈಲಾರಲಿಂಗ, ಎಲ್ಲಮ್ಮ ಹಾಗೂ ಇತರ ದೇವರುಗಳನ್ನು ತಮ್ಮ ಆರಾಧ್ಯ ದೇವರನ್ನಾಗಿಸಿಕೊಂಡಿದ್ದಾರೆ. ಇವರ ಪ್ರಮುಖ ಜನಪದ ಕಲಾಪ್ರಕಾರವೆಂದರೆ ಗೊರವರ ಕುಣಿತ, ವ್ಯಾಪಾರ ಮಾಡುವವರಾದ ವೈಶ್ಯ ಪಂಗಡ ನಗರ್ತರು ಈ ತಾಲ್ಲೂಕಿನಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ. ಇವರನ್ನು ನಾಮಧಾರಿ ನಗರ್ತರೆಂದು ಗುರುತಿಸಲಾಗಿದೆ.

## ಕೃಷಿ ಮತ್ತು ವಾಣಿಜ್ಯ ಚಟುವಟಿಕೆ

ಕ್ರಿ.ಶ. ೬ನೆಯ ಶತಮಾನದಲ್ಲಿ ಕೃಷಿ ನೆಲೆಸಿದ್ದ ಗಂಗ ಅವನೀತನ ಕಾಲದಲ್ಲಿ ಹೊಸಕೋಟೆ ತಾಲ್ಲೂಕಿನಲ್ಲಿ ಹಸಿರು ತುಂಬಿದ ಹೊಲಗದ್ದೆಗಳಿದ್ದು ಅದನ್ನು ತೋಟಗಳ ಕ್ಷೇತ್ರ ಅಥವಾ ಚಿನ್ನದ ನೆಲೆ ಎಂದು ಕರೆಯಲಾಗುತ್ತಿತ್ತು. ಆಗಿನ ಕಾಲಕ್ಕೆ ಇಲ್ಲಿನ ಪ್ರಮುಖ ಬೆಳೆಯೆಂದರೆ ಕಬ್ಬು, ಆದರೆ ವ್ಯವಸಾಯವನ್ನು ನಂಬಿ ಬದುಕುತ್ತಿರುವವರ ಸಂಖ್ಯೆ ಗಣನೀಯವಾಗಿ ಕಡಿಮೆ ಆಗಿದೆ. ಶೇ.೮.೬೬ ರಷ್ಟು ಈಗ ಅತ್ಯಂತ ಹೆಚ್ಚಿನ ಪ್ರಮಾಣದಲ್ಲಿ ದೊಡ್ಡಬಳ್ಳಾಪುರದಲ್ಲಿ ವ್ಯವಸಾಯದ ಅಂಚಿನಲ್ಲಿ ಇರುವವರನ್ನು ಕಂಡರೆ ಎರಡನೇ ಸ್ಥಾನ ಹೊಸಕೋಟೆಯದು. ಇಲ್ಲಿ ಶೇ.೫.೯೫ ರಷ್ಟು ಮಂದಿ ವ್ಯವಸಾಯದ ಅಂಚಿನಲ್ಲಿ ಇರುವವರನ್ನು ಕಾಣಬಹುದಾಗಿದೆ.

ಇಲ್ಲಿನ ಪ್ರಮುಖ ಬೆಳೆಗಳೆಂದರೆ ರಾಗಿ, ಅವರೆ, ಭತ್ತ, ಮುಸುಕಿನ ಜೋಳ, ತೊಗರಿ, ಹುರುಳಿ, ಕಡಲೆ, ಹೆಸರು, ಕಡಲೆ ಕಾಯಿಬೀಜ, ಹರಳು ಮತ್ತು ಕಬ್ಬು ಮುಂತಾದವುಗಳನ್ನು ಬೆಂಗಳೂರು ಗ್ರಾಮಾಂತರ ಜಿಲ್ಲೆಯಾದಂತ ಬೆಳೆಯಲಾಗುತ್ತದೆ. ಇದರೊಂದಿಗೆ ತೊಗರಿ, ಕಡಲೆಕಾಯಿ, ಹರಳು, ಕಬ್ಬುಗಳೂ ಅಷ್ಟೇ ಪ್ರಮುಖವಾದ ಸ್ಥಾನವನ್ನು ಹೊಂದಿವೆ. ೧೯೮೬-೮೭ ರಲ್ಲಿ ಬೆಂಗಳೂರು ಶೇ.೧೩.೨೧೨ ರಷ್ಟು ಅತಿ ಹೆಚ್ಚು ಉತ್ಪನ್ನಗಳನ್ನು ಬೆಳೆಯಲಾಗಿತ್ತು. ಇಲ್ಲಿನ ನೀರಾವರಿ ಪ್ರದೇಶಗಳಲ್ಲಿ ದ್ವಿದಳ ಧಾನ್ಯಗಳ ಜೊತೆಗೆ ತರಕಾರಿ

ಹಣ್ಣುಗಳನ್ನು ಬೆಳೆಯುವರು. ಉಳಿದೆಡೆ ಆಲುಗಡ್ಡೆ ಮುಂತಾದ ಬೆಳೆಗಳನ್ನು ಬೆಳೆಯುತ್ತಾರೆ. ಈ ಭಾಗದಲ್ಲಿ ಹೆಚ್ಚಾಗಿ ದ್ರಾಕ್ಷಿ ಬೆಳೆಯುತ್ತಾರೆ. ವ್ಯವಸಾಯದ ಜೊತೆಗೆ ಇಲ್ಲಿ ಪಶುಪಾಲನೆಯೂ ಉಂಟು. ರೇಷ್ಮೆನೂಲು, ಬೀಡಿ, ಇಟ್ಟಿಗೆ, ಹೆಂಚು ತಯಾರಿಕೆ ಮತ್ತು ಇತರ ಗ್ರಾಮೋದ್ಯೋಗಗಳಿವೆ. ತಾಲ್ಲೂಕಿನಿಂದ ಹೆಚ್ಚಾಗಿ ಹೊರಹೋಗುವ ಇತರ ಪದಾರ್ಥಗಳೆಂದರೆ ದ್ರಾಕ್ಷಿ, ಆಲುಗಡ್ಡೆ ಮತ್ತು ತರಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಕೈಗಾರಿಕೆಗಳಿಗೆ ಮತ್ತು ವ್ಯವಸಾಯೋಧ್ಯಮಗಳಿಗೆ ಆರ್ಥಿಕ ಸಹಾಯ ನೀಡುವ ವಾಣಿಜ್ಯ ಮತ್ತು ಸಹಕಾರಿ ಬ್ಯಾಂಕುಗಳಿವೆ. ವಿದ್ಯುತ್, ಅಂಚೆ, ತಂತಿ, ದೂರವಾಣಿ ಸೌಲಭ್ಯಗಳೊಂದಿಗೆ ಆಸ್ಪತ್ರೆ, ಆರೋಗ್ಯ ಕೇಂದ್ರ ವಿವಿಧ ದರ್ಜೆಯ ಶಾಲೆ ಮುಂತಾದವುಗಳೂ ಇವೆ.

ಇಡೀ ಜಿಲ್ಲೆಯಲ್ಲಿ ಮಣ್ಣಿನ ಫಲವತ್ತತೆಯನ್ನು ಹೆಚ್ಚಿಸುವಲ್ಲಿ ಮಣ್ಣಿನ ರಕ್ಷಣೆಯನ್ನು ಮಾಡುತ್ತಲಿದ್ದು ಈ ಫಲವತ್ತತೆ ಹೆಚ್ಚಿರುವ ಕಾರಣ ಇಲ್ಲಿ ಬೆಳೆಯನ್ನು ವರ್ಷದ ೨೧೭ ದಿನಗಳೂ ಬೆಳೆಯುತ್ತಾರೆ. ಮೇ ೨ ರಿಂದ ಜೂನ್ ೧೨ರ ವರೆಗೆ ಜೂನ್ ೨೭ ರಿಂದ ಡಿಸೆಂಬರ್ ೧೮ರ ವರೆಗೆ ಹೀಗೆ ವರ್ಷದಲ್ಲಿ ಎರಡು ಬೆಳೆಯನ್ನು ಬೆಳೆಯಲಾಗುತ್ತದೆ.

ತೋಟಗಾರಿಕೆಗೆ ಸಂಬಂಧಿಸಿದ ಸಸ್ಯಗಳಾದ ತೆಂಗು, ಅಡಿಕೆ, ವೀಳ್ಯೆದೆಲೆಯಬಳ್ಳಿ, ಈರುಳ್ಳಿ, ಮೆಣಸಿನಕಾಯಿ ಮುಂತಾದವುಗಳನ್ನು ಇಲ್ಲಿ ಬೆಳೆಯಲಾಗುತ್ತದೆ. ಇದನ್ನು ಹೊರತುಪಡಿಸಿ ಟಮೋಟ, ಆಲುಗಡ್ಡೆ, ಕ್ಯಾರೆಟ್, ಬೆಂಡೆಕಾಯಿ, ಹೂಕೋಸು, ಸೌತೆಕಾಯಿ, ಮುಂತಾದವುಗಳನ್ನು ತರಕಾರಿಗಳನ್ನು ಸೀಬೇಕಾಯಿ, ಮಾವಿನ ಹಣ್ಣು, ದ್ರಾಕ್ಷಿ, ಬಾಳೆಹಣ್ಣು, ಸಪೋಟ ಮುಂತಾದ ಹಣ್ಣುಗಳನ್ನು ಮಲ್ಲಿಗೆ, ಗುಲಾಬಿ, ಸ್ಪಟಿಕ, ಸಂಪಿಗೆ, ದಾಸವಾಳ, ಕ್ರೋಟಾನ್ಸ್, ಬೆಟ್ಟದಾವರೆ, ಕನಕಾಂಬರ ಮುಂತಾದ ಹೂಗಳನ್ನು ಇಲ್ಲಿ ವಾಣಿಜ್ಯ ದೃಷ್ಟಿಕೋನದಿಂದ ಬೆಳೆಯಲಾಗುತ್ತದೆ. ಟಮೋಟ ಇಲ್ಲಿಯ ಪ್ರಮುಖ ವಾಣಿಜ್ಯಬೆಳೆ. ಇಡೀ ಜಿಲ್ಲೆಯಲ್ಲಿ ಇದನ್ನು ಸುಮಾರು ೧.೨೦೦ ಹೆಕ್ಟೇರ್ ಪ್ರದೇಶದ ವ್ಯಾಪ್ತಿಯಲ್ಲಿ ಬೆಳೆಯಲಾಗುತ್ತದೆ. ಪ್ರಮುಖವಾಗಿ ಹೊಸಕೋಟೆ, ನೆಲಮಂಗಲ, ದೇವನಹಳ್ಳಿ ದೊಡ್ಡಬಳ್ಳಾಪುರ ತಾಲ್ಲೂಕುಗಳಲ್ಲಿ ಈ ಬೆಳೆಯನ್ನು ಕಾಣಬಹುದು. ಇಲ್ಲಿನ ಮತ್ತೊಂದು ಪ್ರಮುಖ ಬೆಳೆಯಾದ ಕ್ಯಾರೆಟ್ ಅನ್ನು ಇಡೀ ಜಿಲ್ಲೆಯಾದ್ಯಂತ ಸುಮಾರು ೩೦೦ ಹೆಕ್ಟೇರ್‌ಗಳಲ್ಲಿ ಬೆಳೆಯಲಾಗುತ್ತದೆ. ಈ ಬೆಳೆ ಪ್ರಮುಖವಾಗಿ ಹೊಸಕೋಟೆ ಮತ್ತು ದೇವನಹಳ್ಳಿಯಲ್ಲಿ ಹೆಚ್ಚಾಗಿ ಬೆಳೆಯಲಾಗುತ್ತದೆ. ಕನಕಾಂಬರ ಇಲ್ಲಿನ ಪ್ರಮುಖ ಹಾಗೂ ವಾಣಿಜ್ಯ ಹೂ ಬೆಳೆಗಳಲ್ಲಿ ಒಂದು, ಇದನ್ನು ಇಡೀ ಜಿಲ್ಲೆಯಾದ್ಯಂತ ಸುಮಾರು ೪೦ ಹೆಕ್ಟೇರ್‌ಗಳಷ್ಟು ಬೆಳೆಯಲಾಗುತ್ತದೆ.

ಒಂದು ಹೆಕ್ಟೇರ್ ವ್ಯಾಪ್ತಿಯಲ್ಲಿ ಸುಮಾರು ೫ ಟನ್‌ಗಳಷ್ಟು ಹೂಗಳನ್ನು ಬೆಳೆಯುತ್ತಾರೆ. ದೇವನಹಳ್ಳಿ, ಹೊಸಕೋಟೆ ಮತ್ತು ನೆಲಮಂಗಲಗಳಲ್ಲಿ ಇದರ ಪ್ರಮಾಣ ಹೆಚ್ಚಾಗಿದೆ. ಪ್ರಮುಖ ಗಿಡಗಳಾದ ತೆಂಗು, ಮಾವು, ಸೀಬೆ ಹಾಗೂ ಸಪೋಟಗಳನ್ನು ಬೆಳೆಯಲಾತ್ತದೆ, ೧೯೮೩-೮೪ ರಲ್ಲಿ ಸುಮಾರು ೧.೦ ಹೆಕ್ಟೇರ್ ಪ್ರದೇಶಗಳಲ್ಲಿ ಹೊಸಕೋಟೆಯ ಸಸ್ಯ ಕ್ಷೇತ್ರಗಳಲ್ಲಿ ಅಭಿವೃದ್ಧಿಗೊಳಿಸಲು ತೋಟಗಾರಿಕೆ ಇಲಾಖೆ ಪ್ರಮುಖವಾದ ನಿರ್ಧಾರ ಕೈಗೊಂಡ ಬೆಳೆಸಿದೆ. ಕೇವಲ ವ್ಯವಸಾಯಕ್ಕೆ ಸಂಬಂಧಿಸಿದಂತೆ ಮಾತ್ರವೇ ಹೊಸಕೋಟೆ ತನ್ನ ಅಭಿವೃದ್ದಿಯನ್ನು ಸಾಧಿಸಿಲ್ಲ. ಬರಪರಿಹಾರ ಹಾಗೂ ಪ್ರವಾಹಗಳನ್ನು ತಡಗಟ್ಟುವಲ್ಲಿಯೂ ಬೆಂಗಳೂರಿನ ಇತರೆ ಗ್ರಾಮಿಣ ಪ್ರದೇಶಗಳಂತೆ ಪ್ರಮುಖವಾದ ಸ್ಥಾನವನ್ನು ಪಡೆದಿದೆ.

೧೯೮೪-೮೫ ರಲ್ಲಿ ಹಾಗೂ ೧೯೮೫-೮೬ ರಲ್ಲಿ ಕೈಗೊಂಡ ನೆರೆಯ ಹಾವಳಿಯನ್ನು ತಪ್ಪಿಸುವ ಕಾರ್ಯದಲ್ಲಿ ಪರಿಹಾರಕ್ಕಾಗಿ ತಾಲ್ಲೂಕು ನಿಯೋಜಿಸಿದ್ದ ವ್ಯಕ್ತಿಗಳ ಸಂಖ್ಯೆ ೧,೧೦೦, ವ್ಯಯಿಸಿದ ಹಣ ೮೨ ಲಕ್ಷ, ಇದೇ ವರ್ಷ ಜಾನುವಾರುಗಳನ್ನು ರಕ್ಷಿಸುವ ಸಲುವಾಗಿ ಆಯೋಜಿಸಿದ್ದ ಶಿಬಿರದಲ್ಲಿ ಒಟ್ಟು ३೭೦ ಜಾನುವಾರುಗಳನ್ನು ರಕ್ಷಿಸಿ ಅವುಗಳಿಗೆ ೨೨,೦೦೦ ರೂಗಳನ್ನು ವ್ಯಯ ಮಾಡಲಾಯಿತು. ೧೫ ಮೇವುಗಳ ಕಟ್ಟು ಅಥವಾ ಒಣ ಹುಲ್ಲಿನ ಮೆದೆಗಳನ್ನು ಸ್ಥಾಪಿಸಲಾಯಿತು. ಇವುಗಳಲ್ಲಿ ಸ್ವಲ್ಪ ಪ್ರಮಾಣ ಕೊಂಡುತರಲಾಗಿತ್ತು. ಮತ್ತೆ ಸ್ವಲ್ಪ ಪ್ರಮಾಣ ಕೊಡುಗೆಯಾಗಿ ಪಡೆಯಲಾಗಿತ್ತು. ಹೀಗೆ ವ್ಯವಸಾಯ ಹಾಗೂ ಪಶುಪಾಲನೆಗೆ ಸಂಬಂಧಿಸಿದಂತೆ ಬೆಂಗಳೂರು ಗ್ರಾಮಾಂತರ ಜಿಲ್ಲೆ ಉನ್ನತ ಮಟ್ಟದಲ್ಲಿ ಅಭಿವೃದ್ದಿಯನ್ನು ಗಳಿಸಿದೆ. ವ್ಯಾಪಾರ ಹಾಗೂ ವಾಣಿಜ್ಯಕ್ಕೆ ಸಂಬಂಧಿಸಿದಂತೆ ಮತ್ತು ಕೈಗಾರಿಕಾ ಕ್ಷೇತ್ರದಲ್ಲಿಯೂ ಜಿಲ್ಲೆ ಹಿಂದುಳಿದಿಲ್ಲ.

'ಬೆಂಗಳೂರು–ಕೋಲಾರ, ರಾಷ್ಟ್ರೀಯ ಹೆದ್ದಾರಿಯೂ, ಬೆಂಗಳೂರು ಹೊಸಕೋಟೆ, ಚಿಂತಾಮಣಿ ರಾಜ್ಯ ಹೆದ್ದಾರಿಯೂ ಹಾದುಹೋಗಿದ್ದು, ಹೊಸಕೋಟೆ–ಮಾಲೂರು ಹೊಸಕೋಟೆ–ದೇವನಹಳ್ಳಿ ಮುಂತಾದ ಮಾರ್ಗಗಳ ಜೊತೆಗೆ ಸುತ್ತಮುತ್ತಲ ಗ್ರಾಮಗಳಿಗೆ ಉತ್ತಮಮಾರ್ಗ ಸಂಪರ್ಕಗಳಿವೆ. ಬೆಂಗಳೂರು ಮದ್ರಾಸು ಬ್ರಾಡ್‌ಗೇಜ್ ರೈಲುಮಾರ್ಗ ಈ ತಾಲ್ಲೂಕಿನಲ್ಲಿ ಹಾದುಹೋಗಿದೆ. ತಾಲ್ಲೂಕಿನ ರೈಲು ಮತ್ತು ರಸ್ತೆ ಮಾರ್ಗಗಳು ಇಲ್ಲಿನ ವ್ಯಾಪಾರ, ವಾಣಿಜ್ಯಾಭಿವೃದ್ದಿಗೆ ಸಹಾಯಕವಾಗಿ. ವಾಣಿಜ್ಯಾಭಿವೃದ್ದಿಯ ಉದ್ದೇಶಕ್ಕೆ ಇಲ್ಲಿ ೧,೪೯೬ ರಷ್ಟು ವಿದ್ಯುತ್ ತಂತಿಗಳನ್ನು ಎಳೆಯಲಾಗಿದೆ.

ಇಲ್ಲಿನ ಮಧ್ಯದ ಮತ್ತು ದೊಡ್ಡ ಪ್ರಮಾಣದ ಕಾರ್ಖಾನೆಗಳು ದೊರೆಯುವ ಕಚ್ಚಾವಸ್ತುಗಳನ್ನು ಉಪಯೋಗಿಸಿಕೊಂಡು ದೊಡ್ಡ ಪ್ರಮಾಣದ ಉತ್ಪನ್ನವನ್ನು ತಯಾರಿಸುತ್ತಿದೆ.

ಕರ್ನಾಟಕ ಗೃಹ ನಿರ್ಮಾಣ ಇಟ್ಟಿಗೆ ಉದ್ಯಮ ಹೊಸಕೋಟೆಯ ದೊಡ್ಡಬಳ್ಳಾಪುರ, ದೇವನಹಳ್ಳಿ ಸುಟ್ಟಮಣ್ಣಿನ ಅಯತಾಕಾರದ ಗಟ್ಟಿಗಳನ್ನು ತಯಾರಿಸುವ ಈ ಕಾರ್ಖಾನೆ ಸಾರ್ವಜನಿಕ ಉದ್ಯಮವಾಗಿ ದುಡಿಯುತ್ತಿತ್ತು. ಆದರೆ ಈಗ ಈ ಉದ್ಯಮ ಕೆಲಸವನ್ನು ನಿರ್ವಹಿಸುತ್ತಿಲ್ಲ. 'ಜಮಿನಿ ಉಕ್ಕು ಕೊಳವೆ ಕಾರ್ಖಾನೆ' ಸಾರ್ವಜನಿಕವಾಗಿ ಪ್ರಖ್ಯಾತಿಯನ್ನು ಗಳಿಸಿದೆ. ಇದು ೧೯೮೧ ರಲ್ಲಿ ಕೆ.ಐ.ಎ.ಡಿ.ಬಿ ಕಾರ್ಖಾನೆಗಳ ಸಮುಚ್ಚಯದಲ್ಲಿ ಸ್ಥಾಪಿಸಲ್ಪಟ್ಟಿತು. ಇಲ್ಲಿ ಉಕ್ಕಿನ ಕೊಳವೆ ಮತ್ತು ಭರ್ಜಿಗಳನ್ನು ಬಳಸುವಲ್ಲಿ ಉಪಯೋಗಿಸುವ ಸರಳುಗಳನ್ನು ತಯಾರಿಸುತ್ತಾರೆ.

ಇನ್ನೊಂದು ಸಂಸ್ಥೆಯಾದ 'ನ್ಯಾಷನಲ್ ಸ್ಟಾಂಡರ್ಡ್ ಡಂಕನ್' ಎಂಬ ಸಾರ್ವಜನಿಕ ಸಂಸ್ಥೆಯು ೧೯೮೪ ರಲ್ಲಿ ಕೆ.ಐ.ಎ.ಡಿ.ಬಿ ಸಮುಚ್ಚಯದಲ್ಲಿ ಪ್ರಾರಂಭಿಸಲ್ಪಟ್ಟಿತು. ಇಲ್ಲಿ ಟಯರ್‌ನ ಮಾದರಿಗಳನ್ನು ತಯಾರಿಸಲಾಗುತ್ತಿತ್ತು. ಇದಕ್ಕೆ ಪ್ರಾರಂಭಿಕವಾಗಿ ತೊಡಗಿಸಿದ ಮೊತ್ತ ಒಂದು ಕೋಟಿ ರೂಪಾಯಿಗಳು, ಮತ್ತೊಂದು 'ಇಂಡಟೆಕ್ ಸ್ಪೆಷಾಲಿಟಿ ಕೆಮಿಕಲ್ಸ್ ಲಿಮಿಟೆಡ್' ಎಂಬ ಸಾರ್ವಜನಿಕ ಸಂಸ್ಥೆಯನ್ನು ೧೯೮೮ ರಲ್ಲಿ ಹೊಸಕೋಟೆಯಲ್ಲಿ ಸ್ಥಾಪಿಸಲಾಯಿತು. ಇಲ್ಲಿ ಕೇಬಲ್‌ಗಳನ್ನು ಕೆಲವು ಬೆರಕೆ ಮಾಡಿ ತುಂಬಿಸುವ ಕಚ್ಚಾ ಪದಾರ್ಥಗಳನ್ನು, ಪೆಟ್ರೋಲಿಯಂ ಜೆಲ್ಲಿಗಳನ್ನು, ಎರಕ ಹೊಯ್ಯೋ ಮೇಣವನ್ನು, ಕಾರ್ಖಾನೆಗಳಲ್ಲಿ ಬಳಸುವ ಮೇಣವನ್ನು ತಯಾರಿಸಲಾಗುತ್ತದೆ.

ಇಲ್ಲಿ ಬಟ್ಟೆ ಕಾರ್ಖಾನೆಗಳೂ ಅಧಿಕವಾಗಿದೆ. ೧೯೮೮ ಮಾರ್ಚ್ ಕೊನೆಗೆ ಇಡೀ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿದ್ದ ಒಟ್ಟು ಬಟ್ಟೆ ಕಾರ್ಖಾನೆಗಳ ಸಂಖ್ಯೆ ೬೭೯, ಇದು ೩,೫೩೬ ಜನರಿಗೆ ಉದ್ಯೋಗ ಒದಗಿಸಿಕೊಟ್ಟಿತ್ತು. ಇಲ್ಲಿ ಸಣ್ಣ ಪ್ರಮಾಣದ ಕೈಗಾರಿಕಾ ಶಾಖೆಗಳೂ ಇದ್ದು ಕುಂಬಾರಿಕೆಯವರು, ಅಕ್ಕಸಾಲಿಗರು, ಮರಗೆಲಸದವರು, ಚರ್ಮದ ಉದ್ಯಮದವರು ಇಡೀ ತಾಲ್ಲೂಕಿನಲ್ಲಿ ನೆಲೆಸಿದ್ದಾರೆ. ಅವರ ಕಸುಬು ಸಣ್ಣ ಪ್ರಮಾಣದಲ್ಲಿ ಉಧ್ಯಮವಾಗಿದ್ದು ತಾಲ್ಲೂಕಿನ ಆರ್ಥಿಕ ನೀತಿಯನ್ನು ಸುಧಾರಿಸುವಲ್ಲಿ ಹಾಗೂ ಈ ಕಸುಬುಗಳನ್ನು ಜೀವಂತವಾಗಿರಿಸುವಲ್ಲಿ ಸಹಾಯಕವಾಗಿದೆ. ಕುಂಬಾರಿಕೆ ಹೊಸಕೋಟೆಯಲ್ಲಿ ಪ್ರಮುಖ ಉದ್ಯಮವಾಗಿದೆ. ಚರ್ಮದ ಉದ್ಯೋಗದಲ್ಲಿ ಪ್ರಖ್ಯಾತಿಗಳಿಸಿರುವ ಲಿಡ್ಕರ್ ಚರ್ಮ ಉದ್ಯೋಗ ತಾಲ್ಲೂಕಿನಲ್ಲಿ ಬಹಳ ಕ್ರಿಯಾಶೀಲವಾಗಿ ಕೆಲಸ ನಿರ್ವಹಿಸುತ್ತಿರುವುದನ್ನು ಕಾಣಬಹುದಾಗಿದೆ. ಇದಲ್ಲದೆ ಎಣ್ಣೆ ಕಾರ್ಖಾನೆ, ಕಬ್ಬು ಮತ್ತು ಬಿದಿರು ಕಾರ್ಖಾನೆಗಳು ಸುಣ್ಣ, ಸಾಬೂನು, ರೇಷ್ಮೆ, ಖಾದಿ ಮುಂತಾದ ಕಾರ್ಖಾನೆಗಳೂ ಇಲ್ಲಿವೆ.

ಇದಲ್ಲದೆ ರೇಷ್ಮೆ ಹುಳುಗಳನ್ನು ಸಾಕಲು ಬಳಸುವ ಹಿಪ್ಪು ನೇರಳೆಯನ್ನು ಬೆಳೆಯಲಾಗುತ್ತದೆ. ಈ ರೇಷ್ಮೆಗೆ ಸಂಬಂಧಿಸಿದ ಹೊಲ ಅಥವಾ ಜಮೀನನ್ನು ಹೊಸಕೋಟೆ ಉದ್ಯಮಗಳೂ ಹೆಚ್ಚಿಗೆ ಇದ್ದ ೧೯೮೮ರಲ್ಲಿ ಕೇವಲ ಪಟ್ಟಣ ಪ್ರದೇಶದಲ್ಲಿ ಸುಮಾರು ೬೦ ಹೋಟೆಲುಗಳಿದ್ದವು. ಸಗಣಿಯಿಂದ ಅನಿಲವನ್ನು ಉತ್ಪಾದಿಸುವ ಘಟಕ ಇಲ್ಲಿವೆ. ಈ ಎಲ್ಲಾ ಉದ್ಯಮಗಳಿಗೆ ಸಾಲ ಸೌಲಭ್ಯ ಒದಗಿಸಲು ಖಾಸಗೀ ಸಂಸ್ಥೆಗಳು, ಬ್ಯಾಂಕುಗಳು ಹಾಗೂ ಜೀವವಿಮೆಯ ಸಂಸ್ಥೆಗಳೂ ಇಲ್ಲಿವೆ. ವ್ಯವಸಾಯ ಸೇವಾ ಸಹಕಾರ ಸಂಘ, ಸೇವಾ ಸಹಕಾರ ಸಂಘ, ಹಾಲು ಉತ್ಪಾದಕರ ಸಂಘ, ರೈತರು ಹಾಗೂ ರೇಷ್ಮೆ ಬೆಳೆಗಾರರ ಸಹಕಾರ ಸಂಘಗಳನ್ನು ಇಲ್ಲಿ ಕಾಣಬಹುದು.

ವ್ಯಾಪಾರ ಮತ್ತು ವಾಣಿಜ್ಯಕ್ಕೆ ಸಂಬಂಧಿಸಿದಂತೆ ವಿಜಯನಗರ ಕಾಲದಿಂದಲೂ ಹೊಸಕೋಟೆ ತನ್ನ ಸ್ಥಾನವನ್ನು ಉಳಿಸಿಕೊಂಡು ಬಂದಿದೆ. ಬೆಂಗಳೂರು, ಹೊಸಕೋಟೆ, ದೇವನಹಳ್ಳಿ, ದೊಡ್ಡಬಳ್ಳಾಪುರ, ನೆಲಮಂಗಲ ಮುಂತಾದವುಗಳು ವಾಣಿಜ್ಯ ಅಭಿವೃದ್ಧಿಗೆ ಹೆಸರುವಾಸಿಯಾದ ಕೇಂದ್ರ ಸ್ಥಾನಗಳಾಗಿದ್ದವು. ಆಮದು ಅಥವಾ ಆಯಾತ ಮತ್ತು ರಫ್ತು ಅಥವಾ ನಿರ್ಯಾತ ಕ್ಷೇತ್ರಗಳಲ್ಲಿಯೂ ತಾಲ್ಲೂಕು ಹಿಂದುಳಿದಿಲ್ಲ. ಆಹಾರ ಧಾನ್ಯಗಳು, ಕಿರಾಣಿ ಅಂಗಡಿಯ ಸಾಮನುಗಳು ಮತ್ತು ವಸ್ತ್ರಗಳು, ರೇಷ್ಮೆ ದಾರಗಳು ಹೊಸೆದ ನುಲಿಗಳು ಆಮದು ಮಾಡಿಕೊಂಡರೆ, ಹಣ್ಣು ಮತ್ತು ತರಕಾರಿಗಳು ಇಟ್ಟಿಗೆ ಮತ್ತು ಸುಟ್ಟ ಬೀಡಿಗಳನ್ನು ರಫ್ತು ಮಾಡಲಾಗುತ್ತಿತ್ತು. ಇಂಥ ವ್ಯಾಪಾರ ವ್ಯವಹಾರಗಳಲ್ಲಿ ಸಂತೆಗಳದ್ದೂ ಪ್ರಮುಖವಾದ ಪಾತ್ರವಾಗಿತ್ತು.

ಇವುಗಳಲ್ಲಿ ಹೊಸಕೋಟೆ ಸಂತೆ, ಸೂಲಿಬೆಲೆ ಸಂತೆ, ದೇವನಗುಂದಿ ಸಂತೆಗಳು ತಾಲ್ಲೂಕಿನಲ್ಲಿ ಪ್ರಮುಖವಾಗಿದ್ದವು. ಹೀಗೆ ವಾಣಿಜ್ಯ ವ್ಯವಹಾರಗಳಲ್ಲಿ ಪ್ರಮುಖವಾದ ಪಾತ್ರವಹಿಸುತ್ತಿದ್ದ ಮತ್ತೊಂದು ವಿಷಯವೆಂದರೆ ರಸ್ತೆ ಸಾರಿಗೆ ಮತ್ತು ವಹಿವಾಟುಗಳು, ರಸ್ತೆಗಳ ಉದ್ದಗಲಗಳ ಸೌಕರ್ಯದಿಂದಲೇ ಆಮದು ಮತ್ತು ರಫ್ತು ನೀತಿಯನ್ನು ಅಭಿವೃದ್ಧಿಗೊಳಿಸಲು ಸಹಕಾರಿಯಾಗುತ್ತಿತ್ತು. ಹೊಸಕೋಟೆ–ಬೂದಿಗೆರೆ ರಸ್ತೆ, ಹೊಸಕೋಟೆ–ಶಿಡ್ಲಘಟ್ಟ ರಸ್ತೆ, ಹೊಸಕೋಟೆ–ದೇವನಹಳ್ಳಿ ರಸ್ತೆ, ಹೊಸಕೋಟೆ–ಕಾಡುಗೋಡಿ–ಆನೇಕಲ್ ರಸ್ತೆ ಹೀಗೆ ಪ್ರಮುಖ ನಗರಗಳನ್ನು ಹೊಸಕೋಟೆಗೆ ಜೋಡಿಸುವ ರಸ್ತೆ ವ್ಯವಸ್ಥೆಯನ್ನು ತಾಲ್ಲೂಕಿನಾದ್ಯಂತ ಕಾಣಬಹುದಾಗಿದೆ.

ಇದಲ್ಲದೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಕೆತ್ತನೆ ಮತ್ತು ಕುಸುರಿ ಕೆಲಸಗಳಿಗೂ ಪ್ರಖ್ಯಾತಿಯನ್ನು ಪಡೆದಿದೆ. ಚಿನ್ನ, ಬೆಳ್ಳಿ, ತಾಮ್ರ, ಕಂಚಿನ ಲೋಹಗಳಲ್ಲಿ ಕುಸುರಿ ಕೆಲಸಗಳನ್ನು

ಮಾಡುವ ನುರಿತ ಕೆಲಸಗಾರರನ್ನು ತಾಲ್ಲೂಕಿನಾದ್ಯಂತ ಕಾಣಬಹುದು. ಇಡೀ ಬೆಂಗಳೂರ ಗ್ರಾಮಾಂತರ ಜಿಲ್ಲೆಯಲ್ಲಿ ದೇವನಹಳ್ಳಿ ಹಾಗೂ ಹೊಸಕೋಟೆಗಳಲ್ಲಿ ಕೆಲಸವನ್ನು ಮಾಡುವ ವಿಶ್ವಕರ್ಮ ಜನಾಂಗಕ್ಕೆ ಸೇರಿದ ವ್ಯಕ್ತಿಗಳು ವಾಸಿಸುತ್ತಾರೆ. ಇವರ ಭಾಷೆ ತೆಲುಗು ಮತ್ತು ಕನ್ನಡ, ಇಲ್ಲಿ ಬಿಡಿ ಉದ್ಯಮವನ್ನು ಸಣ್ಣ ಪ್ರಮಾಣದ ಉದ್ಯಮವಾಗಿ ಮೇಡಿಮಲ್ಲಸಂದ್ರದಲ್ಲಿ ಸ್ಥಾಪನೆ ಮಾಡಲಾಯಿತು. ಇಡೀ ಜಿಲ್ಲೆಯಲ್ಲಿ ಇದರ ಪ್ರಮುಖ ಕೇಂದ್ರಗಳೆಂದರೆ ಹೊಸಕೋಟೆ ಮತ್ತು ದೊಡ್ಡಬಳ್ಳಾಪುರ ತಾಲ್ಲೂಕುಗಳು, ಶ್ರೇಣೀಕೃತ ಸಮಾಜದಲ್ಲಿ ಗುಣಮಟ್ಟದ ಅಧಾರದ ಹಿನ್ನೆಲೆಯಲ್ಲಿ ತಾಲ್ಲೂಕು ತನ್ನ ಸ್ಥಾನವನ್ನು ಕಾಯ್ದುಕೊಂಡಿದೆ.

ದಶಕದ ಆಂತರದಲ್ಲಿ ಬೆಂಗಳೂರು ಗ್ರಾಮಾಂತರ ತಾಲ್ಲೂಕುಗಳ ಗುಣಮಟ್ಟವನ್ನು ಪರಿಶೀಲಿಸಿದಾಗ ದಶಕದಿಂದ ದಶಕಕ್ಕೆ ತಾಲ್ಲೂಕು ಎಲ್ಲಾ ಕ್ಷೇತ್ರಗಳಲ್ಲಿಯೂ ಅಭಿವೃದ್ಧಿ ಹೊಂದಿ, ಮೇಲ್ಮಟ್ಟಕ್ಕೆ ಬರಲು ಪರಿಶ್ರಮ ವಹಿಸಿದ್ದನ್ನು ಕಾಣಬಹುದು. ಈ ರೀತಿಯ ಗುಣಮಟ್ಟವನ್ನು ಕಾಯ್ದುಕೊಳ್ಳಲು ನಾನಾ ಕಾರಣಗಳನ್ನು ಕಾಣಬಹುದು. ತಾಲ್ಲೂಕಿನಲ್ಲಿ ಜನರು ಪ್ರಮುಖವಾಗಿ ಕೈಗಾರಿಕೆಯನ್ನು ಕೈಗೊಳ್ಳುವ ಜೊತೆಗೆ ಕೃಷಿಗೂ ಸ್ಥಾನವನ್ನು ನೀಡಿದ್ದರು. ಹೀಗೆ ಕೃಷಿ ಸಣ್ಣ ಸಣ್ಣ ಪ್ರಮಾಣದ ಕೈಗಾರಿಕೆ, ಆರ್ಥಿಕ ಮತ್ತು ಸಾಮಾಜಿಕ ಅಭಿವೃದ್ಧಿ, ಆರೋಗ್ಯ, ವಿದ್ಯಾಭ್ಯಾಸ ಇತ್ಯಾದಿಗಳಲ್ಲಿ ಇಡೀ ಬೆಂಗಳೂರಿನ ಗ್ರಾಮಾಂತರ ಜಿಲ್ಲೆಯು ಮೂಂಚೂಣಿಯೂ ಸ್ಥಾನದಲ್ಲಿ ನಿಲ್ಲುತ್ತದೆ.

ಹೀಗೆ ಎಲ್ಲಾ ಹಂತದಲ್ಲೂ ಮೂಂಚೂಣಿಯ ಸ್ಥಾನದಲ್ಲಿ ನಿಲ್ಲಲ್ಲು ಕಾರಣ, ಇದರ ತ್ವರಿತಗತಿಯ ಬೆಳವಣಿಗೆಯೇ ಆಗಿದೆ. ಇದರೊಂದಿಗೆ ಸಮಾಜ ಸೇವಾ ಕೇಂದ್ರಗಳು, ಮಾರುಕಟ್ಟೆ ವ್ಯವಸ್ಥೆಯೂ ಪ್ರಮುಖವಾದ ಪಾತ್ರವಹಿಸುತ್ತದೆ. ಅಲ್ಲದೆ ಬೆಂಗಳೂರನ್ನು ಮೆಟ್ರೋಪಾಲಿಟನ್ ನಗರ ಮಾಡಬೇಕೆಂದು ಅದರ ಸುತ್ತಮುತ್ತಲಿನ ಪ್ರದೇಶಗಳನ್ನು ಅಭಿವೃದ್ಧಿಯ ಕಡೆಗೆ ಹೋಗುವಂತೆ ಕಾರ್ಯಕ್ರಮಗಳನ್ನು ರೂಪಿಸಿದ್ದರ ಜೊತೆಗೆ 'ಬೆಂಗಳೂರಿಗೆ ಹೊಂದಿಕೊಂಡೇ ತಾಲ್ಲೂಕಗಳು ಇರುವುದರಿಂದ ಅಭಿವೃದ್ದಿ ಪಡೆಯಲು ಪ್ರಾರಂಭಿಸಿತು. ಉದಾಹರಣೆ ಬೈಲನರಸಾಪುರ ಮತ್ತು ತಾಲ್ಲೂಕಿನ ಇತರ ಹಳ್ಳಿಗಳನ್ನು ಅಭಿವೃದ್ದಿಪಡಿಸಲು ಯೋಜನೆಯನ್ನು ರೂಪಿಸಿದ್ದನ್ನು ಇಲ್ಲಿ ಕಾಣಬಹುದು.

ಗ್ರಾಮೀಣ ಭಾವೈಕ್ಯ ಮತ್ತು ಅಭಿವೃದ್ದಿ ಕಾರ್ಯಕ್ರಮಗಳು ಅತಿ ಹೆಚ್ಚು ನಡೆದ ಅವಧಿಯಲ್ಲಿ ದೇವನಹಳ್ಳಿ ಮತ್ತು ಹೊಸಕೋಟೆಗಳನ್ನು ವಿಶೇಷವಾಗಿ ಪರಿಗಣಿಸಲಾಯಿತು. ಸಮುದಾಯ ಅಭಿವೃದ್ದಿ ಹಾಗೂ ಗ್ರಾಮೀಣ ನೀರು ಸರಬರಾಜು ಮತ್ತು ನಿರ್ಮಲೀಕರಣದ ಕಾರ್ಯಕ್ರಮದ ಅಡಿಯಲ್ಲಿ ಜಿಲ್ಲೆಯಲ್ಲಿ ಅಭಿವೃದ್ಧಿ ಕಾರ್ಯಕೈಗೊಳ್ಳಲಾಯಿತು. ನೆಲಮಂಗಲ,

ದೊಡ್ಡಬಳ್ಳಾಪುರ, ದೇವನಹಳ್ಳಿ ಮತ್ತು ಹೊಸಕೋಟೆ ತಾಲ್ಲೂಕುಗಳನ್ನು ಅಭಿವೃದ್ದಿ ಪಡಿಸಲಾಯಿತು.

**ಬೆಂಗಳೂರು ಗ್ರಾಮಾಂತರ ಜಿಲ್ಲೆ ಮಧ್ಯಮ ಮತ್ತು ಬೃಹತ್ ಕೈಗಾರಿಕೆಗಳು**

| ಕ್ರ ಸಂ | ಕೈಗಾರಿಕಾ ಘಟಕಗಳ ಹೆಸರು | ಸ್ಥಳ |
|---|---|---|
| ೧. | ಐಟಿಸಿ ಫಿಲ್ಟರ್ | ದೇವನಹಳ್ಳಿ |
| ೨. | ಅಲ್ ಸ್ಟೋಮ್ ಉಪಕರಣಗಳ ಪ್ರೈ.ಲಿ. | ದೇವನಹಳ್ಳಿ |
| ೩. | ಟ್ರಾಕ್ಟರ್ ಮತ್ತು ಫಾರಮ್ ಸಾಧನ ಸಲಕರಣೆಗಳ ಪ್ರೈ.ಲಿ | ದೊಡ್ಡಬಳ್ಳಾಪುರ |
| ೪. | ಆಟೋ ಬ್ಲಿಡ್ಜ್ ಇಂಡಿಯಾ ಪ್ರ.ಲಿ | ದೊಡ್ಡಬಳ್ಳಾಪುರ |
| ೫. | ರೈಟ್ ಜಿಲ್ ಟ್ಯೆರ್ಸ್ ಪ್ರೈ.ಲಿ | ದೊಡ್ಡಬಳ್ಳಾಪುರ |
| ೬. | ತುಲಸಿಯನ್ ಎನ್.ಇ.ಸಿ. ಲಿಮಿಟೆಡ್ | ದೊಡ್ಡಬಳ್ಳಾಪುರ |
| ೭. | ಪ್ಯೂಷನ್ ಅಪರೆಲ್ಸ್ ಲಿ | ದೊಡ್ಡಬಳ್ಳಾಪುರ |
| ೮. | ಡೆನಿಮ್ ಕೊಕ್ ಲಿ | ದೊಡ್ಡಬಳ್ಳಾಪುರ |
| ೯. | ಸ್ಪಿನ್ನಿಂಗ್ ಮಿಲ್ಸ್ ಲಿ | ದೊಡ್ಡಬಳ್ಳಾಪುರ |
| ೧೦. | ಇಮ್‌ತ್ ಸಿಂಗ್ ಲಿ | ದೊಡ್ಡಬಳ್ಳಾಪುರ |
| ೧೧. | ಕೋಲಾಯಿಲ್ ಫಾರ್ಮಾಸ್ಯುಟಿಕಲ್ಸ್ ಲಿ. | ದೊಡ್ಡಬಳ್ಳಾಪುರ |
| ೧೨. | ಕರ್ನಾಟಕ ಸರ್ಕಾರದ ಅಗ್ರೋ ಲಿ | ದೊಡ್ಡಬಳ್ಳಾಪುರ |
| ೧೩. | ಎನ್. ಕೆ. ಪಾಲಿವಸ್ತ್ರ | ದೊಡ್ಡಬಳ್ಳಾಪುರ |
| ೧೪. | ಬಿ.ಪಿ.ಎಲ್. ಸೋನಿ ಪ್ರೈ ಲಿ. | ದೊಡ್ಡಬಳ್ಳಾಪುರ |
| ೧೫. | ಇಂಡಿಯನ್ ಅಪ್ತಾಲಮಿಕ ಲೆನ್ಸ್‌ಸ್ | ದೊಡ್ಡಬಳ್ಳಾಪುರ |
| ೧೬. | ಅದಿತ್ಯ ಆಟೋ ಉತ್ಪಾದನೆ ಮತ್ತು ಇಂಜಿನಿಯರಿಂಗ ಇಂಡಿಯನ್.ಲಿ. | ದೊಡ್ಡಬಳ್ಳಾಪುರ |
| ೧೭. | ಎಲ್ಪೇನ್ ಇಂಡಸ್ಟ್ರೀಸ್ | ದೊಡ್ಡಬಳ್ಳಾಪುರ |

| | | |
|---|---|---|
| ೧೮. | ಬಿಲ್ಡ್ ಮೆಟ್ ಫೈಬ್ರೆ ಲಿ. | ದೊಡ್ಡಬಳ್ಳಾಪುರ |
| ೧೯. | ಆದಿತ್ಯ ಓರೋಲೋಜಿಕಲ್ಸ್. ಲಿ | ದೊಡ್ಡಬಳ್ಳಾಪುರ |
| ೨೦. | ಸಿಲ್ವರ್ ಸ್ಪಾಕ್ ಅಪರೆಲ್ಸ್ ಲಿ | ದೊಡ್ಡಬಳ್ಳಾಪುರ |
| ೨೧. | ಸುಪ್ರಜಿತ್ ಇಂಜಿನಿಯರಿಂಗ್.ಲಿ. | ದೊಡ್ಡಬಳ್ಳಾಪುರ |
| ೨೨. | ವಿಶಾಲ್ ಪರ್ನೀಚರ್ ಮತ್ತು ಪೈಪ್ಸ್.ಲಿ | ಹೊಸಕೋಟೆ |
| ೨೩. | ಜೆಮಿನಿ ಸ್ಟೀಲ್ ಟ್ಯೂಬ್ಸ್.ಲಿ | ಹೊಸಕೋಟೆ |
| ೨೪. | ಬೆಲ್ ಸೆರಾಮಿಕ್ಸ್ | ಹೊಸಕೋಟೆ |
| ೨೫. | ಟಯೋಮಾ ಎಲೆಕ್ಟ್ರಾನಿಕ್.ಲಿ | ಹೊಸಕೋಟೆ |
| ೨೬. | ಎಲ್.ಎಮ್.ಗ್ರಾಸ್. ಫೈಬ್ರೆ ಇಂಡಿಯ.ಲಿ | ಹೊಸಕೋಟೆ |
| ೨೭. | ವೋಲ್ವಾ ಇಂಡಿಯಾ ಪ್ರೈ.ಲಿ | ಹೊಸಕೋಟೆ |
| ೨೮. | ಇಂಡೋ ಅಜ್ ಮಿಮ್ ತಾಂತ್ರಿಕ.ಲಿ | ಹೊಸಕೋಟೆ |
| ೨೯. | ಸಿಲ್ಕ್ ಟೆಕ್ಸ್ ಲಿ. | ಹೊಸಕೋಟೆ |
| ೩೦. | ಟಿ.ಟಿ.ಕೆ ಲಿ. | ಹೊಸಕೋಟೆ |
| ೩೧. | ರೊ ನೋಬಲ್ ಕೋಟಿಂಗ್ ಇಂಡಿಯಾ ಪ್ರವೇಟ್ ಲಿಮಿಟೆಡ್ | ಹೊಸಕೋಟೆ |
| ೩೨. | ವೆಲ್ಪ್ಯಾಬ್ ತಂತ್ರಜ್ಞಾನ ಪ್ರ.ಲಿ | ಹೊಸಕೋಟೆ |
| ೩೩. | ಐ ಎನ್ ಎ ಇಂಡಿಯಾ ಲಿ. | ಹೊಸಕೋಟೆ |
| ೩೪. | ಡಿಸಾ ಇಂಡಿಯಾ ಲಿ. | ಹೊಸಕೋಟೆ |
| ೩೫. | ಸುನಿಲ್ ಅಗ್ರೋ ಆಹಾರಗಳ ನಿಗಮ | ಹೊಸಕೋಟೆ |
| ೩೬. | ಬೋವಿಂಗ್ ಫೋರೆಸ್ | ಹೊಸಕೋಟೆ |
| ೩೭. | ಉನಿಕಾರನ್ ಅಗ್ರೋ ತಂತ್ರಜ್ಞಾನ.ನಿ. | ಹೊಸಕೋಟೆ |
| ೩೮. | ಗಿಲ್ಟೆಕ್ ಗ್ರಾನೈಟ್ಸ್ | ಹೊಸಕೋಟೆ |
| ೩೯. | ಸಂಗೀತ ಗ್ರಾನೈಟ್ಸ್ | ಹೊಸಕೋಟೆ |

| | | |
|---|---|---|
| ೪೦. | ಯಮುನಾ ಉದ್ದಿಮೆಗಳು | ಹೊಸಕೋಟೆ |
| ೪೧. | ಗ್ಲೋಬಲ್ ಗ್ರೀನ್ ಕೋ ನಿಗಮ | ಹೊಸಕೋಟೆ |
| ೪೨. | ಮೆಥೆಡ್ಸ್ ಇಂಡಿಯಾ | ಹೊಸಕೋಟೆ |
| ೪೩. | ಪೆಸಿಫಿಕ್ ಉದ್ದಿಮೆಗಳ ಲಿ | ನೆಲಮಂಗಲ |
| ೪೪. | ಪೆಸಿಫಿಕ್ ಇಂಡಿಯ ಹೋಲ್ಡಿಂಗ್ ನಿ | ನೆಲಮಂಗಲ |
| ೪೫. | ಬಿ.ಪಿ.ಎಲ್ ನಿಗಮ (ಅಲ್‌ಕಾನಿ ಬ್ಯಾಟರಿ) | ನೆಲಮಂಗಲ |
| ೪೬. | ಫ್ಲಾಸ್ಟ್ರಿಕ್ಸ್ ಪಾಲಿಮರ್ | ನೆಲಮಂಗಲ |
| ೪೭. | ಫೊಸ್ಟ್ರೋಕ್ ರಸಾಯನಿಕಗಳ ಭಾರತೀಯ ನಿ | ನೆಲಮಂಗಲ |
| ೪೮. | ಡೆನ್ಸೋ ಕಿರ್ಲೋಸ್ಕರ್ ಭಾರತೀಯ ನಿ. | ನೆಲಮಂಗಲ |
| ೪೯. | ಕರ್ನಾಟಕ ಬ್ರೆವರಿಸ್ ಮತ್ತು ವಿತರಣಾ ನಿ | ನೆಲಮಂಗಲ |
| ೫೦. | ಬಯೋ ಕೆಮ್ ಅಂತರರಾಷ್ಟ್ರೀಯ ನಿ | ನೆಲಮಂಗಲ |
| ೫೧. | ಕ್ಯಾಡ್‌ಬರಿ ಭಾರತೀಯ ನಿ | ನೆಲಮಂಗಲ |
| ೫೨. | ಅಭಿಯಂತರ ನಿಗಮ | ನೆಲಮಂಗಲ |
| ೫೩. | ಟಿ.ಡಿ. ಪವರ್ ಸಿಸ್ಟಮ್ ನಿ | ನೆಲಮಂಗಲ |
| ೫೪. | ಪವರಿಕಾ | ನೆಲಮಂಗಲ |
| ೫೫. | ವಿನ್‌ಟೆಕ್ | ನೆಲಮಂಗಲ |
| ೫೬. | ಸ್ವಾನ್ ಸಿಲ್ಕ್ ನಿಗಮ | ನೆಲಮಂಗಲ |
| ೫೭. | ಡುಪಾಂಟ್ ಕರ್ಟನ್ ನಿಗಮ | ನೆಲಮಂಗಲ |
| ೫೮. | ಇನ್ಟರ್ ಗಾರ್ಡನ್ ಭಾರತೀಯ ನಿಗಮ | ನೆಲಮಂಗಲ |

ಬೆಂಗಳೂರು ಗ್ರಾಮಾಂತರ ಜಿಲ್ಲೆ ಶೈಕ್ಷಣಿಕ ಕ್ಷೇತ್ರದಲ್ಲಿಯೂ ಹಿಂದುಳಿದಿಲ್ಲ. ಇಲ್ಲಿ ಇರುವ ಶೈಕ್ಷಣಿಕ ಸಂಸ್ಥೆಗಳನ್ನು ಸಮಗ್ರವಾಗಿ ಗಮನಿದಾಗ ತಾಲ್ಲೂಕಿನ ಅಭಿವೃದ್ಧಿಯಲ್ಲಿ ಶೈಕ್ಷಣಿಕ ಮಟ್ಟದ ಪ್ರಮಾಣವೂ ಒಂದು ಪ್ರಮುಖವಾದ ಅಂಶವಾಗಿದೆ. ಈ ಮೊದಲೇ

ತಿಳಿಸಿರುವಂತೆ ಅನೇಕ ರಾಜಮಹಾರಾಜರ ಆಳ್ವಿಕೆಗೆ ಒಳಪಟ್ಟಿದ್ದು ಅವರ ಆಡಳಿತ ನೀತಿಯನ್ನು ತನ್ನದಾಗಿಸಿಕೊಂಡು ಅನೇಕ ವರ್ಷಗಳ ಕಾಲದಿಂದಲೂ ತನ್ನ ಅಸ್ತಿತ್ವವನ್ನು ಕಾಯ್ದುಕೊಂಡು ಬಂದಿದೆ. ಹೊಸಕೋಟೆ ತಾಲ್ಲೂಕಿನಲ್ಲಿ ದೊರೆತ ಶಾಸನಗಳ ಆಧಾರದ ಹಿನ್ನೆಲೆಯಲ್ಲಿ ಸಾರ್ವಜನಿಕ ಆಡಳಿತವನ್ನು ಗಮನಿಸಿದಾಗ ಮೊದಲಿಗೆ ಗಂಗರ ಆಳ್ವಿಕೆ ತಾಲ್ಲೂಕಿನಲ್ಲಿ ಇತ್ತೆಂಬುದು ತಿಳಿದುಬರುತ್ತದೆ. ಗಂಗರ ಆಳ್ವಿಕೆಗೆ ಸಂಬಂಧಿಸಿದ ಕಲಕೊಂಡ–೩೦೦(ಎಚ್.ಟಿ.೮೬) ದಾಖಲೆ ತಾಲ್ಲೂಕಿನಲ್ಲಿ ಲಭಿಸಿದೆ. ಇದರೊಂದಿಗೆ ಗಂಗರ ಇನ್ನೊಂದು ದಾಖಲೆ(ಎಚ್.ಟಿ.೧೭೦) ಮತ್ತು ಕೊಂಡರಹಳ್ಳಿಯಲ್ಲಿ ದಾಖಲಾದ ನೆಕ್ಕುಂದಿ ನಾಡಿಗೆ ಸಂಬಂಧಿಸಿದ (ಎಚ್.ಟಿ.೩೭) ದಾಖಲೆಗಳು ಇದರ ಬಗ್ಗೆ ಸ್ಪಷ್ಟ ವಿಚಾರವನ್ನು ತಿಳಿಸುತ್ತವೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಆಡಳಿತವನ್ನು ಮಂಡಲಸ್ವಾಮಿ, ಮಹಾಪ್ರಭುಗಳು ಕ್ರಿ.ಶ.೧೨೯೯ ರಲ್ಲಿ ನೋಡಿಕೊಳ್ಳುತ್ತಿದ್ದರು. ಇದರ ಜೊತೆಗೆ ಗೌಂಡ ಅಥವಾ ಗೌಡರ ಆಳ್ವಿಕೆ ಇತ್ತು. ಹೊಯ್ಸಳ ಸಾಮ್ರಾಜ್ಯವನ್ನು ಆಳಿದ ಬಲ್ಲಾಳನ ಕಾಲದಲ್ಲಿ ತಾಲ್ಲೂಕಿನಲ್ಲಿ ಗೌಡರ ಆಡಳಿತವನ್ನು ನೋಡಿಕೊಳ್ಳುತ್ತಿದ್ದರು ಕೈವಾರನಾಡು (ಎಚ್.ಟಿ.–೪೦)ರಲ್ಲಿ ದೊರೆತ ಶಾಸನಾಧಾರದಿಂದ ತಿಳಿದುಬರುತ್ತದೆ. ಅಲ್ಲದೆ ವಿಜಯನಗರ ಚೋಳ ಮತ್ತು ಹೊಯ್ಸಳ ಸಾಮ್ರಾಜ್ಯದ ಆಳ್ವಿಕೆಗೆ ಒಳಪಟ್ಟಿದ್ದ ತಾಲ್ಲೂಕು ಅವರ ಆಡಳಿತ ನೀತಿಯನ್ನು ಅಳವಡಿಸಿಕೊಂಡಿತ್ತು ಎಂಬುದನ್ನು ಕ್ರಿ.ಶ.೧೪೩೩ರ ತೊರೈವಾಳಿ ನಾಡು (ಎಚ್.ಟಿ.೧೫೫) ದಾಖಲೆಯಿಂದ ಸ್ಪಷ್ಟಗೊಂಡಿದೆ.

ಹೀಗೆ ಅನೇಕ ವರ್ಷಗಳಿಂದ ಎಲ್ಲಿಯೂ ತಪ್ಪದೆ ಸಮರ್ಪಕವಾಗಿ ನಡೆದುಕೊಂಡು ಬರುತ್ತಿರುವ ಆಡಳಿತದ ರೀತಿ ನೀತಿಯನ್ನು ಕಾಪಾಡಲು ಕ್ರಿ.ಶ.೧೯೮೬ ಆಗಸ್ಟ್ ೧೫ರಲ್ಲಿ ಪ್ರಯೋಗಾತ್ಮಕ ರೀತಿಯಲ್ಲಿ, ಜಿಲ್ಲಾದ್ಯಂತ ನಾಡ ಕಛೇರಿಗಳನ್ನು ಅಥವಾ ಹೋಬಳಿಯ ಕಛೇರಿಗಳನ್ನು ಸ್ಥಾಪಿಸಲಾಯಿತು. ಇದರ ಅನ್ವಯ ಹೆಚ್ಚುವರಿ ತಹಸೀಲ್ದಾರರು ಹಾಗೂ ಅಗತ್ಯಬಿದ್ದ ಕಡೆ ಹೆಚ್ಚುವರಿ ಸಿಬ್ಬಂದಿಯನ್ನು ನೇಮಿಸಲಾಯಿತು. ೧೯೮೮ರಲ್ಲಿ ಎಂಟು ಹೋಬಳಿ ಕಛೇರಿಗಳನ್ನು ನಿರ್ಮಿಸಲಾಯಿತು.

**ಶಿಕ್ಷಣ**

ಶಿಕ್ಷಣ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಕೇವಲ ಕನ್ನಡವನ್ನಷ್ಟೇ ಅಲ್ಲದೆ ತಾಲ್ಲೂಕಿನಲ್ಲಿ ಹಿಂದಿಯನ್ನೂ ಪ್ರಚಾರಕ್ಕೆ ತರಲಾಯಿತು. ಈ ಸಂಬಂಧ ಕರ್ನಾಟಕದಲ್ಲಿ ಮೊಟ್ಟ ಮೊದಲಿಗೆ ಕರ್ನಾಟಕ ಹಿಂದಿ ಪ್ರಚಾರ ಸಮಿತಿ, ೧೯೩೯ರಲ್ಲಿ ಮಹಾತ್ಮ ಗಾಂಧಿಯವರ ನೇತೃತ್ವದಲ್ಲಿ

ಸ್ಥಾಪನೆಯಾಯಿತು. ಇದರ ಘಟಕಗಳು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಕೇವಲ ೨ ಸ್ಥಳಗಳಲ್ಲಿ ಇದ್ದು, ಸಾಹಿತ್ಯ ಸೇವೆ ಮಾಡಿದ ಬಗ್ಗೆ ತಿಳಿದುಬಂದಿದೆ. ಪ್ರಮುಖವಾಗಿ ಹೊಸಕೋಟೆ, ದೊಡ್ಡಬಳ್ಳಾಪುರ, ಕನಕಪುರ, ರಾಮನಗರಗಳು ಇದರ ಕೇಂದ್ರಗಳಾಗಿದ್ದವು. "ಇಲ್ಲಿ ೧೯೮೮-೮೯ರಲ್ಲಿ ಬಾಲ–ಬಾಲಕಿಯರೂ ಸೇರಿದಂತೆ ೧೬೦ ವಿದ್ಯಾರ್ಥಿಗಳು ಪರೀಕ್ಷೆಗೆ ಕುಳಿತಿದ್ದರು. ಇದೇ ಸಂಬಂಧ ೧೯೫೪ರಲ್ಲಿ ಕರ್ನಾಟಕ ಮಹಿಳಾ ಹಿಂದಿ ಸೇವಾ ಸಮಿತಿಯ ಉದಯವಾಯಿತು.

ಇಲ್ಲಿಗೆ ೧೯೮೯ರಲ್ಲಿ ಒಟ್ಟು ೩,೨೦೦ ವಿದ್ಯಾರ್ಥಿಗಳು ಸೇರಲ್ಪಟ್ಟರು. ೧೯೪೩ರಲ್ಲಿ ಮೈಸೂರು ಹಿಂದಿ ಪ್ರಚಾರ ಪರಿಷತ್ತು, ಕೇಂದ್ರ ಸರ್ಕಾರದ ನೆರವಿನಿಂದ ಪ್ರಾರಂಭವಾಯಿತು."[೧೧] ಇದರ ಪ್ರಮುಖವಾದ ಕೇಂದ್ರ ಬೆಂಗಳೂರು ಆಗಿದ್ದು. ಇದು ಪ್ರಥಮ, ಮಧ್ಯಮ, ಪ್ರವೇಶ, ಉತ್ತಮ, ರತ್ನ ಮುಂತಾದ ಪರೀಕ್ಷೆಗಳನ್ನು ನಡೆಸುತ್ತಿತ್ತು. ಇದರ ವತಿಯಿಂದ ಕನ್ನಡ ಪರೀಕ್ಷೆಗಳೂ ನಡೆಯುತ್ತಿದ್ದವು. ಅವುಗಳಲ್ಲಿ ಪ್ರಥಮ, ಮಧ್ಯಮ, ಪ್ರವೇಶ, ಉತ್ತಮ–೧, ಉತ್ತಮ–೨, ರತ್ನಪರೀಕ್ಷೆಗಳನ್ನು ಪರಿಷತ್ತು ನಡೆಸುತ್ತಿತ್ತು. ಕರ್ನಾಟಕ ರಾಜ್ಯದಲ್ಲಿ ನಡೆದ ಸಾಕ್ಷರತಾ ಆಂದೋಲನದ ಅಡಿಯಲ್ಲಿ ಹಿರಿಯರ ಶಿಕ್ಷಣ ಕೇಂದ್ರಗಳು ೧೯೧೨ ರಲ್ಲಿ ಶ್ರೀಯುತ ಸರ್.ಎಂ.ವಿಶ್ವೇಶ್ವರಯ್ಯನವರ ನೆರವಿನಿಂದ ಪ್ರಾರಂಭವಾದವು. ಇದರ ಶಾಖೆ ಮೊದಲಿಗೆ ಮೈಸೂರು ಮಹಾರಾಜ ಕಾಲೇಜಿನಲ್ಲಿ ಪ್ರಾರಂಭವಾಯಿತು. ಇದರ ಅಧ್ಯಕ್ಷರು ಸಹಾಯಕ ಜಿಲ್ಲಾಧಿಕಾರಿಗಳಾಗಿರುತ್ತಿದ್ದರು. ಇದರ ಅಡಿಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ ಸಾಕ್ಷರತೆಯ ಪ್ರಮಾಣ ಹೆಚ್ಚ ತೊಡಗಿತು.

ಸಾಕ್ಷರತಾ ಆಂದೋಲನದ ಜೊತೆಗೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ 'ಭಾರತ್ ಸ್ಕೌಟ್ ಆಂದೋಲನ' ೧೯೧೮ ರಲ್ಲಿ ಗೈಡ್ ಆಂದೋಲನ ೧೯೨೭ ರಲ್ಲಿ ಪ್ರಾರಂಭವಾಯಿತು. ಸ್ಕೌಟ್ಸ್ ಮತ್ತು ಗೈಡ್ಸ್‌ನ ವತಿಯಿಂದ ದೊಡ್ಡಬಳ್ಳಾಪುರದಲ್ಲಿ ೧೧.೦೮.೧೯೮೭ ರಿಂದ ೧೨.೦೮.೧೯೮೮ ರವರೆಗೆ ಯುವ ಜನೋತ್ಸವವನ್ನು ಹಮ್ಮಿಕೊಳ್ಳಲಾಯಿತು. ಭಾವೈಕ್ಯ, ಏಕತೆ, ಶಾಂತಿಗಳ ಮಂತ್ರವನ್ನು ಮೂಲ ಉದ್ದೇಶವಾಗಿಟ್ಟುಕೊಂಡು ನಡೆಸಿದ ಈ ಉತ್ಸವಕ್ಕೆ ಜಿಲ್ಲೆಯಿಂದ ಅನೇಕರು ಆಗಮಿಸಿದ್ದರು. ಶೈಕ್ಷಣಿಕ ವ್ಯವಸ್ಥೆಯನ್ನು ಉತ್ತಮಗೊಳಿಸುವ ಹಿನ್ನೆಲೆಯಲ್ಲಿ ಅನೇಕ ಗ್ರಂಥಾಲಯಗಳು ಇವೆ. ಇಡೀ ತಾಲ್ಲೂಕಿನಲ್ಲಿದ್ದ ಶಾಲೆಗಳಿಗೆ ಊಟದ ವ್ಯವಸ್ಥೆಯನ್ನು ಮಾಡಲು ಇಲ್ಲಿಂದಲೇ ಊಟದ ವ್ಯವಸ್ಥೆಯನ್ನು ಕಳ್ಪಿಸಿಕೊಡಲಾಗುತ್ತಿತ್ತು. ಆರೋಗ್ಯ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಅನೇಕ ವೈದ್ಯಕೀಯ ಆರೋಗ್ಯ ಕೇಂದ್ರಗಳಿದ್ದು, ಆರೋಗ್ಯ ಸಂರಕ್ಷಣೆಗಾಗಿ ತನ್ನ ಸೇವೆ

ಸಲ್ಲಿಸುತ್ತಿರುವುದನ್ನು ಕಾಣಬಹುದು ಇದನ್ನು ಒಳಗೊಂಡಂತೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ನಾಲ್ಕು ತಾಲ್ಲೂಕು ೯೬ ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಕಾಣಬಹುದಾಗಿದೆ.

**ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿರುವ ವಿಶ್ವವಿದ್ಯಾಲಯಗಳು**

- ರೈ ತಂತ್ರಜ್ಞಾನ ವಿಶ್ವವಿದ್ಯಾಲಯ ಕಾಡನೂರು,
- ಗೀತಂ ವಿಶ್ವವಿದ್ಯಾಲಯ ನಾಗದೇನಹಳ್ಳಿ, ದೊಡ್ಡಬಳ್ಳಾಪುರ ತಾಲ್ಲೂಕು,

**ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಇರುವ ಉನ್ನತ ಶಿಕ್ಷಣ ಕಾಲೇಜುಗಳು**

- ಬೆಂಗಳೂರು ಸ್ಕೂಲ್ ಆಫ್ ಮ್ಯಾನೇಜ್‌ಮೆಂಟ್ [MBA, ME]
- ಕೊಂಗಾಡಿಯಪ್ಪ ಉನ್ನತ ಶಿಕ್ಷಣ ಕೇಂದ್ರ,
- ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಹೊಸಕೋಟೆ
- ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಸೂಲಿಬೆಲೆ
- ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ದೇವನಹಳ್ಳಿ
- ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ದೊಡ್ಡಬಳ್ಳಾಪುರ
- ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ನೆಲಮಂಗಲ
- ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ತ್ಯಾಮಗೊಂಡ್ಲು ನೆಲಮಂಗಲ ತಾಲ್ಲೂಕು

**ಸಾಹಿತ್ಯ ಮತ್ತು ಸಾಂಸ್ಕೃತಿಕ ವಿವರಗಳು**

ಬೆಂಗಳೂರು ಗ್ರಾಮಾಂತರ ಜಿಲ್ಲೆಯು ಅನೇಕ ಸಾಹಿತಿಗಳು ಹಾಗೂ ವಿದ್ವಾಂಸರನ್ನು ಸಾಹಿತ್ಯಕ್ಷೇತ್ರಕ್ಕೆ ಕೊಡುಗೆ ಮಾಡಿ ಕೊಟ್ಟಿದೆ, ಬೆಂಗಳೂರು ಕರ್ನಾಟಕ ರಾಜ್ಯದ ಕೇಂದ್ರ ಬಿಂದು, ಈ ಜಿಲ್ಲೆ ಎಲ್ಲಾ ಕ್ಷೇತ್ರಗಳಲ್ಲಿಯೂ ವಿಶಿಷ್ಟವಾದ ಕೊಡುಗೆಯನ್ನು ನಾಡಿಗೆ ಅರ್ಪಿಸಿದೆ. ಈ ಜಿಲ್ಲೆಯಲ್ಲಿ ಹುಟ್ಟಿ ಕನ್ನಡ ಸಾಹಿತ್ಯ ಪರಂಪರೆಗೆ ತಮ್ಮ ಕೃತಿಗಳನ್ನುಅರ್ಪಿಸಿದ ಸಾಹಿತಿಗಳ ಮತ್ತು ವಿದ್ವಾಂಸರ ಕೊಡುಗೆಗಳು ಅನನ್ಯವಾದದ್ದು. ಬೆಂಗಳೂರು ಬಂದ ತಕ್ಷಣ ನಗರ ಸಂಸ್ಕೃತಿಯ ಸವಾಲುಗಳು ಸಾಹಿತಿಯಾದವನ ಅಂತರಾಳಕ್ಕೆ ವಿವಿಧ ಸ್ತರಗಳಲ್ಲಿ ಹೇಗೆ ಪ್ರಭಾವ ಬೀರುತ್ತವೆ ಎಂಬುದು ಸರ್ವವೇದ್ಯವಾದುದು. ಓದುಗ ಆ ಕವಿಯ ಆ ಕಾಲದ

ಆಶಯವನ್ನು ಆಯಾ ಸಂದರ್ಭದಲ್ಲಿ ನಿರೀಕ್ಷಿಸುವ ಸಹಜವಾದ ಸಾಧ್ಯತೆ ಹೆಚ್ಚಾಗಿರುತ್ತದೆ. ಒಟ್ಟು ಸಾಹಿತ್ಯ ಚರಿತ್ರೆ ಎಂಬುದು ಒಂದು ನಿರಂತರವಾದ ಪ್ರಕ್ರಿಯೆ.

ಸಾಹಿತಿಗಳು ವಿದ್ವಾಂಸರು ಯಾವುದೇ ಜಿಲ್ಲೆಯವರಾದರೂ ಸರಿ ಅದರ ಪ್ರಾದೇಶಿಕತೆಯನ್ನು ಏಕಾಏಕಿ ನಗಣ್ಯ ಮಾಡಿ ಸಾಹಿತ್ಯ ಚರಿತ್ರೆಯೆಂಬುದು ನಿರ್ಮಾಣವಾದರೆ ಅದು ಅಪೂರ್ಣವಾಗುತ್ತದೆ. ಕೃತಿಯ ಒಟ್ಟು ಸ್ವರೂಪ ಹಾಗೂ ಆಶಯಗಳು ಅದು ನಿರ್ಮಾಣಗೊಂಡ ಪರಿಸರದ ಮನಸ್ಸನ್ನು ಸಂಸ್ಕೃತಿಯನ್ನು ಹೊರತುಪಡಿಸಿ ನಿರ್ಮಾಣವಾಗಬಾರದು.

ಈ ಹಿನ್ನೆಲೆಯಲ್ಲಿ ತಾಲ್ಲೂಕಿನ ಸಾಹಿತಿಗಳನ್ನು ಹಾಗೂ ಅವರು ರಚಿಸಿರುವ ಕೃತಿಗಳನ್ನು ಗಮನಿಸಿದಾಗ ತಾಲ್ಲೂಕು ಸಾಹಿತ್ಯ ಕ್ಷೇತ್ರದಲ್ಲಿಯೂ ತನ್ನ ಪ್ರಮುಖವಾದ ಪಾತ್ರವಹಿಸಿದೆ ಎಂಬುದನ್ನು ಮನಗಾಣಬಹುದು. ಈ ಹಿಂದೆ ಗಂಗರು ಆಳ್ವಿಕೆ ನಡೆಸಿದರು. ಇವರು ಸಾಹಿತಿಗಳನ್ನು ಪೋಷಿಸುವ ಜೊತೆಗೆ ಅವರಿಗೆ ದಾನದತ್ತಿಗಳನ್ನು ನೀಡುತ್ತಿದ್ದರು. ಗಂಗರ ದೊರೆ ಶ್ರೀಪುರುಷನು ಕ್ರಿ.ಶ.೭೪೬ರಲ್ಲಿ ಹೊಸಕೋಟೆ ತಾಲ್ಲೂಕಿನ ಅತ್ತಿಗುಂಡೂರು ಎಂಬ ಹಳ್ಳಿಯನ್ನು ವಿದ್ವಾಂಸರಾದ ಸಕಲ ಶರ್ಮರಿಗೆ ನೀಡಿದ್ದನು. ಮತ್ತೊಬ್ಬ ವಿದ್ವಾಂಸ ಭೂತಶರ್ಮನಿಗೂ ತಾಲ್ಲೂಕಿನಲ್ಲಿದ್ದ ಸಾಲಿಗ್ರಾಮದಲ್ಲಿ ಒಂದು ಭಾಗವನ್ನು ನೀಡಿ ಗೌರವಿಸಿದ್ದನು.

**ಡಾ.ಡಿ.ಆರ್.ನಾಗರಾಜ್** ನೇಕಾರ ಕುಟುಂಬದಲ್ಲಿ ಜನಿಸಿ ಕನ್ನಡ ಸಾಹಿತ್ಯದ ವಿಮರ್ಶೆ ಕ್ಷೇತ್ರದಲ್ಲಿ ದೈತ್ಯ ಪ್ರತಿಭೆಯಾಗಿದ್ದರು, ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಕನ್ನಡ ಅಧ್ಯಾಪಕರಾಗಿದ್ದವರು, ಅಂತರಾಷ್ಟ್ರೀಯ ಮಟ್ಟದ ಸಂದರ್ಶಕ ಪ್ರಾಧ್ಯಾಪಕರಾಗಿದ್ದರು, ಭಾಷಾ ತಜ್ಞರಾಗಿ ದೊಡ್ಡಬಳ್ಳಾಪುರದ ಖ್ಯಾತಿಯನ್ನು ಬೆಳಗಿದ ಹೆಮ್ಮೆಯ ಪುತ್ರ, ಸಾಹಿತ್ಯದ ವಿವಿಧ ರಂಗಗಳಲ್ಲಿ ಅಗಾದ ಸೇವೆ ಸಲ್ಲಿಸಿದ್ದಾರೆ. ಶಕ್ತಿ ಶಾರದೆಯ ಮೇಳ, ಅಮೃತ ಮತ್ತು ಗರುಡ, ಕನ್ನಡ ಸಾಹಿತ್ಯ ಕಥನ, ಅಲ್ಲಮ ಪ್ರಭು ಮತ್ತು ಶೈವ ಪ್ರತಿಭೆ, ಮುಂತಾದ ಸೃಜನಶೀಲ ಕೃತಿಗಳನ್ನು ಸಾರಸ್ವತ ಲೋಕಕ್ಕೆ ನೀಡಿದ ಬರಹಗಾರರು.

**ಡಾ.ಅನುಪಮ ನಿರಂಜನ** ಮಹಿಳಾ ಸಾಹಿತ್ಯ ಕ್ಷೇತ್ರದಲ್ಲಿ ತಮ್ಮನ್ನು ತೊಡಗಿಸಿಕೊಂಡು ಹಲವಾರು ಕಥೆ ಕಾದಂಬರಿಗಳನ್ನು ರಚಿಸಿದವರು. ವೈದ್ಯಕೀಯ ರಂಗದ ಅತ್ಯುತ್ತಮ ಬರಹಗಾರ್ತಿ. ವೈದ್ಯೆಯಾಗಿ ಲೇಖಕಿಯಾಗಿ ಜನಮಾನಸಗಳಲ್ಲಿ ಬೆಳಗಿದ ದೊಡ್ಡಬಳ್ಳಾಪುರದ ಹೆಣ್ಣು ಮಗಳು. ಅನಂತಗೀತ, ಶ್ವೇತಾಂಬರಿ, ಹೃದಯ ವಲ್ಲಭ, ಕಣಿವೆಗೆ ಬಂತು ಬೇಸಿಗೆ, ಹಿಮದ ಹೂವು, ಮೂಡಣ ಪಡುವಣ, ನಟಿ, ಕೊಳಚೆ ಕೊಂಪೆಯ ದಾನಿಗಳು ಮುಂತಾದ

ಕಾದಂಬರಿಗಳನ್ನು ರಚಿಸಿದ್ದಾರೆ. ಅಲ್ಲೋಲ–ಕಲ್ಲೋಲ ನಾಟಕ, ನಾಟಕ ರಂಗದಲ್ಲೇ ಕಂಪನವನ್ನು ಉಂಟು ಮಾಡಿತ್ತು.

ಕಥಾ ಸಂಕಲನಗಳು ಕಣ್ಮಣಿ, ನೀರಿಗೆ ನೈದಿಲೆ ಶೃಂಗಾರ, ಹೃದಯ ಸಮುದ್ರ, ಒಂದು ಗಿಣಿಯ ಕಥೆ, ಗಿರಿದಾಮ, ಒಡಲು, ಏಳು ಸುತ್ತಿನ ಮಲ್ಲಿಗೆ, ಮುಂತಾದ ಕೃತಿಗಳನ್ನು ರಚಿಸಿದ್ದಾರೆ, ಶಿಶು ಸಾಹಿತ್ಯದ ಉತ್ತಮ ಕೃತಿಗಳನ್ನು ಬರೆದಿದ್ದಾರೆ, ಅವುಗಳಲ್ಲಿ 'ದಿನಕ್ಕೊಂದು ಕಥೆ' ಸಮಗ್ರ ಸಂಪುಟ ಮುಖ್ಯವಾದುದು ಸಾಮಾನ್ಯ ಜನತೆಗೆ ಆರೋಗ್ಯದ ಬಗ್ಗೆ ಅರಿವು ಮೂಡಿಸಲು ಅವರು ರಚಿಸಿದ ಕೃತಿಗಳೆಂದರೆ, ಸ್ತ್ರೀ ಸ್ವಾಸ್ಥ್ಯ ಸಂಹಿತೆ, ಆರೋಗ್ಯ ಭಾಗ್ಯಕ್ಕೆ ವ್ಯಾಯಾಮ, ಕೇಳು ಕಿಶೋರಿ, ಶಿಶು ವೈದ್ಯ ದೀಪಿಕೆ, ತಾಯಿ ಮಗು, ಮುಂತಾದ ವೈದ್ಯಕೀಯ ಪುಸ್ತಕಗಳನ್ನು ಜನಸಾಮಾನ್ಯರು ತಿಳಿದುಕೊಳ್ಳಬೇಕೆಂದು ತಿಳಿಗನ್ನಡದಲ್ಲಿ ಬರೆದಿದ್ದಾರೆ.

**ಡಾ.ಸಿ.ವೀರಣ್ಣ** ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದ ಪ್ರಾಧ್ಯಾಪಕರು ಹಾಗೂ ನಿರ್ದೇಶಕರಾಗಿದ್ದರು, ದೊಡ್ಡಬಳ್ಳಾಪುರ ತಾಲ್ಲೂಕಿನ ಹಣಬೆ ಗ್ರಾಮದವರು. ಪ್ರಗತಿ ಪರವಾದ ಸಾಹಿತ್ಯದ ಮೂಲಕ ತಮ್ಮ ಚಿಂತನೆಗಳನ್ನು ಹರಿಯ ಬಿಟ್ಟವರು. ಮೂಡಲ ದನಿ, ಇವರ ಮೊದಲ ಬಂಡಾಯ ಸಾಹಿತ್ಯ ಕೃತಿಯಾಗಿದೆ, ಜಾನಪದ ವ್ಯದ್ಯ ಕೋಶವನ್ನು ಕನ್ನಡ ಸಾಹಿತ್ಯ ಪರಿಷತ್ತಿಗೆ ಸಂಪಾದಿಸಿಕೊಟ್ಟಿದ್ದಾರೆ, ಪ್ರಾಚೀನ ಸಾಹಿತ್ಯ ಚರಿತ್ರೆ, ಪ್ರತಿಭಟನಾ ಕಾವ್ಯ, ಸಾಹಿತ್ಯ ಮತ್ತು ಕೋಮುವಾದ, ಮುಂತಾದ ಕೃತಿಗಳನ್ನು ರಚಿಸಿದ್ದಾರೆ.

**ಡಾ.ಪರಶಿವ ಮೂರ್ತಿ** ಹಂಪಿ ಕನ್ನಡ ವಿಶ್ವವಿದ್ಯಾಲಯದ ಶಾಸನ ವಿಭಾಗದಲ್ಲಿ ನಿರ್ದೇಶಕರಾಗಿ ಸೇವೆ ಸಲ್ಲಿಸಿ ಪ್ರಸ್ತುತ ತುಮಕೂರು ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರು, ಕನ್ನಡ ಶಾಸನ ಶಿಲ್ಪಿಗಳು, ಇವರ ಮೇರು ಕೃತಿ. ಹಲವಾರು ಸಂಶೋಧನಾ ವಿದ್ಯಾರ್ಥಿಗಳಿಗೆ ಮಾರ್ಗದರ್ಶಕರಾಗಿದ್ದಾರೆ. ಇವರು ದೊಡ್ಡಬಳ್ಳಾಪುರ ತಾಲ್ಲೂಕಿನ ಹೊಸಹಳ್ಳಿಯವರು.

**ಡಾ.ಟಿ.ಎನ್.ಸೀತಾರಾಂ** ತಾಲ್ಲೂಕಿನ ಕಸಬಾ ಹೋಬಳಿಯ ತಳಗವಾರದವರು, ನಾಟಕ, ಚಲನಚಿತ್ರ, ಕಿರುತೆರೆ. ಮಾಧ್ಯಮಗಳಲ್ಲಿ ನಿರ್ದೇಶನ, ಸಂಭಾಷಣೆಗಳ ಮುಖಾಂತರ ಕನ್ನಡ ನಾಡಿನ ಜನತೆಯ ಮನಗೆದ್ದವರು, ಆಸ್ಫೋಟ, ನಮ್ಮೊಳಗೊಬ್ಬ ನಾಜುಕಯ್ಯ, ಕಾಮನ ಬಿಲ್ಲು, ಮಾಯಾಮೃಗ ಎಂಬ ಕೃತಿಗಳು ಕಿರುತೆರೆಯಲ್ಲಿ ಪ್ರಶಸ್ತಿಗಳನ್ನು ಬಾಚಿಕೊಂಡಿವೆ.

**ಡಾ.ಎಲ್.ಹನುಮಂತಯ್ಯ** ದೊಡ್ಡ ಬೆಳವಂಗಲ ಹೋಬಳಿಯ ರಾಮೇಶ್ವರದವರು, ವೃತ್ತಿಯಲ್ಲಿ ಪೂರ್ಣಾವಧಿ ರಾಜಕಾರಣಿಯಾಗಿರುವ ಇವರು ಬಂಡಾಯ ಸಾಹಿತಿ, ದಲಿತ

ಲೋಕದ ಒಳಗೆ, ಅವ್ವ, ಕಪ್ಪು ಕಣ್ಣಿನ ಹುಡುಗಿ, ಹೀಗೆ ಹಲವಾರು ಬಂಡಾಯ ಕೃತಿಗಳನ್ನು ರಚಿಸಿದ್ದಾರೆ. ೧೧ನೇ ಗ್ರಾಮಾಂತರ ಜಿಲ್ಲಾ ಕನ್ನಡ ಸಮ್ಮೇಳನದ ಅಧ್ಯಕ್ಷರಾಗಿದ್ದರು.

**ಹುಲಿಕಲ್ ನಟರಾಜ್.ಹೆಚ್.ಕೆ** ಪವಾಡ ಹುಲಿಕಲ್ ನಟರಾಜ್ ಎಂದು ಜನಪ್ರಿಯರಾಗಿದ್ದಾರೆ, ವೃತ್ತಿಯಲ್ಲಿ ಶಿಕ್ಷಕರಾಗಿ, ಪ್ರವೃತ್ತಿಯಲ್ಲಿ ಪವಾಡ ಬಯಲು ಕಾರ್ಯಕ್ರಮಗಳನ್ನು ರಾಜ್ಯ ಮತ್ತು ರಾಷ್ಟ್ರ ಮಟ್ಟದಲ್ಲಿ ನೀಡುತ್ತಾ ಮೂಢನಂಬಿಕೆ ಮತ್ತು ಬೂಟಾಟಿಕೆಗಳನ್ನು ಪ್ರಾತ್ಯಕ್ಷತೆಗಳೊಂದಿಗೆ ಬಯಲು ಮಾಡುತ್ತಿದ್ದಾರೆ. ಜೊತೆಗೆ ನೀವು ಮಾಡಿ ಪವಾಡ ಎಂಬ ಭಾಗಗಳನ್ನು ಪ್ರಕಟಿಸಿದ್ದಾರೆ. ಮುಗಿಲ ಮರೆಯ ತೇಜ ಕವನ ಸಂಕಲನ ಸಂಪಾದಕೀಯ ಬ್ರಾಹ್ಮಣ ಕನ್ಯ ಕಾದಂಬರಿ ಬರೆದಿದ್ದಾರೆ. ಅಂಗೈಯಲ್ಲಿ ಆರೋಗ್ಯ ಬಡವರ ಬಾಧೆ, ಬರವಣಿಗೆ ಬಾರದವನು ನಾಟಕಗಳು, ಸಾವಿರಾರು ಪವಾಡ ಬಯಲು ಕಾರ್ಯಕ್ರಮಗಳನ್ನು ಕೊಟ್ಟು ರಾಷ್ಟ್ರ ಪ್ರಶಸ್ತಿಯನ್ನು ಪಡೆದಿದ್ದಾರೆ. ಭಾರತ ಜ್ಞಾನ ವಿಜ್ಞಾನ ಸಮಿತಿಯಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಂಡಿದ್ದಾರೆ.

**ಡಾ.ಎಚ್.ಎಲ್.ಪುಷ್ಪ** ಬೆಂಗಳೂರು ಸರ್ಕಾರಿ ಪದವಿ ಪೂರ್ವ ಕಾಲೇಜಿನಲ್ಲಿ ಕನ್ನಡ ಉಪನ್ಯಾಸಕರಾಗಿರುವ ಇವರು ದೊಡ್ಡಬಳ್ಳಾಪುರದ ಉಜ್ಜನಿ ಹೊಸಹಳ್ಳಿಯವರು. ಸ್ತ್ರೀ ಸಂವೇದನೆಯನ್ನು ಮನಮುಟ್ಟುವಂತೆ ತಮ್ಮ ಕವನಗಳಲ್ಲಿ ಸೆರೆಹಿಡಿದಿದ್ದಾರೆ. ಇವರ 'ಅಮೃತಮತಿಯ ಸ್ವಗತ' ಸಾಹಿತ್ಯ ಅಕಾಡೆಮಿ ಪ್ರಶಸ್ತಿಯನ್ನು ಪಡೆದುಕೊಂಡಿದೆ.

**ಬಾಗಲೂರು ರಾಮಸ್ವಾಮಿ** ದೇವನಹಳ್ಳಿ ತಾಲ್ಲೂಕಿನವರು ಇವರು ಸ್ಮಾರ್ತ ಕವಿ, ಕಂದ, ವೃತ್ತ, ಷಟ್ಪದಿ, ಗೀತ, ವಚನ ಎಲ್ಲವನ್ನೂ ಒಳಗೊಂಡಂತೆ ವಶಿಷ್ಠ ರಾಮಾಯಣ ಎಂಬ ಗ್ರಂಥವನ್ನು ರಚಿಸಿದ್ದಾರೆ. ಕುಂದಾಣದಲ್ಲಿದ್ದ ಇವರು ಕಲಿಧರ್ಮ ಶತಕ ಎಂಬ ಗ್ರಂಥವನ್ನು ಕಂದದಲ್ಲಿ ರಚಿಸಿದ್ದಾರೆ.

**ವಿ. ಸೀತಾರಾಮಯ್ಯ** ದೇವನಹಳ್ಳಿ ತಾಲ್ಲೂಕಿನವರು ವಿನಯನಿಧಿ, ಸ್ನೇಹವತ್ಸಲ, ಧೀಮಂತ ವಿದ್ವಾಂಸ, ವಾಗ್ಮಿ, ಉದಾರಿ, ಶುಚಿರುಚಿ ಚತುರ, ಕವಿಯಾಗಿ ಮಾಡಿರುವ ಕೃಷಿ ವಿಮರ್ಶಕರಾಗಿ ನೀಡಿರುವ ದೃಷ್ಟಿ ಸತ್ವಯುತವಾದುದ್ದು. ಇವರು ಹುಟ್ಟಿದ್ದು ಬೂದಿಗೆರೆಯಲ್ಲಿ ಸಾಹಿತ್ಯ ಪಥ: ಕವನಸಂಗ್ರಹಗಳು: ಗೀತಗಳು, ದೀಪಗಳು, ನೆರಳು–ಬೆಳಕು, ಕದಂಬ, ಅರಲು ಬರಲು, ಮುಂತಾದವು. ಗದ್ಯಕೃತಿಗಳು: ಪಂಪಾಯಾತ್ರೆ, ಅಗ್ರಹ (ನಾಟಕ) ವಿಮರ್ಶೆ ಅಶ್ವತ್ಥಾಮನ್, ಕರ್ಣಾಟಕದ ಕಾದಂಬರಿ, ಕಲಾನುಭವ, ಮುಂತಾದವು. ಶಾಸ್ತ್ರಗ್ರಂಥಗಳು: ಹಣ ಪ್ರಪಂಚ, ಧರ್ಮಶಾಸ್ತ್ರ, ಭಾರತ ರಾಜ್ಯಾಂಗ ರಚನೆ, ಇನ್ನೂ ಮುಂತಾದ ಪ್ರತಿಬಾಪೂರ್ಣ ಕೃತಿಗಳನ್ನು ರಚಿಸಿದ್ದಾರೆ.

**ಪ್ರೊ.ಕೆ.ಎಸ್.ನಿಸಾರ್ ಅಹಮ್ಮದ್** ದೇವನಹಳ್ಳಿ ತಾಲ್ಲೂಕಿನವರು ನಿತ್ಯೋತ್ಸವ ಕವಿಯೆಂದೇ ಹೆಸರಾದ ಪ್ರಸಿದ್ದ ಕವಿ. ಧರ್ಮ, ದೇವರು, ಸಮಾಜ, ರಾಜಕೀಯ, ಭಾಷೆ, ಹೀಗೆ ಹತ್ತು ಹಲವಾರು ವಸ್ತು ವಿಷಯಗಳ ಬಗ್ಗೆ ಸಾಹಿತ್ಯ ಸಿಂಚನವನ್ನು ಜನತೆಗೆ ಕೊಟ್ಟ ಕವಿ, ಇವರ ಕವನ ಸಂಗ್ರಹಗಳು: ಮನಸ್ಸು ಮತ್ತು ಗಾಂಧಿಬಜಾರು, ನೆನದವರ ಮನದಲ್ಲಿ, ಸುಮುಹೂರ್ತ, ಸಂಜೆ  ಐದರಮಳೆ, ಮುಂತಾದವು, ವಿಮರ್ಶೆ: ಇದು ಬರೀ ಬೆಡಗಲ್ಲೋ ಅಣ್ಣ, ಮಕ್ಕಳ ಸಾಹಿತ್ಯ ಹಕ್ಕಿಗಳ ಶಿಲೆಗಳು ಖನಿಜಗಳು, ಮುಂತಾದವು. ಅನುವಾದಗಳು: ಒಥೆಲೋ, ಹೆಜ್ಜೆ ಗುರುತು, ಮುಂತಾದವು.

**ಡಾ.ಜಿ.ಮರಳುಸಿದ್ದಪ್ಪನವರು** ನೆಲಮಂಗಲ ತಾಲ್ಲೂಕು ಮೈಲನಹಳ್ಳಿ ಡಾ॥ ಜಿ.ಮರುಳಸಿದ್ದಪ್ಪನವರು ಪ್ರಖ್ಯಾತ ವಿದ್ವಾಂಸರು ಬಾಣ ಕಾದಂಬರಿ, ಪ್ರಭುಲೀಲೆ, ಭರತನಾಟ್ಯ ಶಾಸ್ತ್ರ, ಇತ್ಯಾದಿ ಗಂಥಗಳನ್ನು ಸಂಗ್ರಹಿಸಿದ್ದಾರೆ.

**ಕಂಬಾಳಿನ ಬಿ ಸಿದ್ದಗಂಗಯ್ಯ**ನವರು ಜಾನಪದ ಕ್ಷೇತ್ರದಲ್ಲಿ ಅಪಾರ ಕೆಲಸ ಮಾಡಿದ್ದಾರೆ. ನಿಸರ್ಗಪ್ರಿಯ ಎಂಬ ಕಾವ್ಯ ನಾಮದಿಂದ ಅನೇಕ ನಾಟಕ, ಕಥೆ ಕವನಗಳನ್ನು ಬರೆದಿದ್ದಾರೆ. ಇವರ ಪುನಃಶ್ಚೇಪ, ಚೋರಪುರಾಣ, ಕೆರೆಗೆ ಹಾರ ಮೈಥಿಲಿ ಇತ್ಯಾದಿ ನಾಟಕಗಳು, ನೀರಿಬೆ ಎಂಬ ಕವನ ಸಂಕಲನ, ಮಾತಾಡು ಮಲ್ಲಿಗೆ ಎಂಬ ಜಾನಪದ ಕೃತಿ ಇವರ ಸಾಧನೆಯ ಮೈಲಿಗಲ್ಲುಗಳು.

**ಡಾ.ಹೆಚ್.ಎಸ್.ಗೋಪಾಲರಾವ್‌ರವರು** ವೃತ್ತಿಯಲ್ಲಿ ಕರ್ನಾಟಕ ವಿದ್ಯುತ್ ಮಂಡಳಿಯಲ್ಲಿ ಸಹಾಯಕ ಇಂಜಿನಿಯರ್ ಆಗಿದ್ದರೂ ಪ್ರವೃತ್ತಿಯಿಂದ ಸಂಶೋಧಕರು. ಜೇನು, ನಂಜು, ಗತಿ, ಭಿನ್ನ, ಪರಿಗ್ರಹಣ, ಇವರ ಕಾದಂಬರಿಗಳು, ಗುಲ್ಬುಟ್ಟಿ ಮುನ್ವುಟ್ಟ ಮಕ್ಕಳ ನಾಟಕ, ಇದಕ್ಕೆ ರಾಜ್ಯ ಸರ್ಕಾರದ ಪ್ರಶಸ್ತಿ ಸಂದಿದೆ. ಕರ್ನಾಟಕ ಇತಿಹಾಸ ಕೈಪಿಡಿ ಮತ್ತು ಕರ್ನಾಟಕ ಏಕೀಕರಣ ಇತಿಹಾಸ ಇವರ ಮಹತ್ವ ಪೂರ್ಣ ಕೃತಿಗಳು, ಶ್ರೀಯುತರ ಕರ್ನಾಟಕ ಏಕೀಕರಣ ಇತಿಹಾಸಕ್ಕೆ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಬಂದಿದೆ. ಇವರ ಸಂಶೋಧನಾ ಪ್ರಬಂಧ ಕಲ್ಯಾಣಿ ಚಾಲುಕ್ಯರ ದೇವಾಲಯಗಳ ಸಾಂಸ್ಕೃತಿಕ ಅಧ್ಯಯನ'ಕ್ಕೆ ಡಾಕ್ಟರೇಟ್ ಪದವಿ ಬಂದಿದೆ, ಇವರು ಕರ್ನಾಟಕ ಇತಿಹಾಸ ಅಕಾಡೆಮಿಯ ಗೌರವ ಕಾರ್ಯದರ್ಶಿಯಾಗಿ ಕೆಲಸ ಮಾಡಿದ್ದಾರೆ.

**ಡಾ.ಮಲ್ಲೇಪುರಂ.ಜಿ.ವೆಂಕಟೇಶ್** ಕನ್ನಡ ಸಂಸ್ಕೃತ ಭಾಷೆಗಳಲ್ಲಿ ಅಗಾದ ಪಾಂಡಿತ್ಯವನ್ನು ಪಡೆದವರಾಗಿದ್ದಾರೆ. ಹಂಪಿ ಕನ್ನಡ ವಿಶ್ವವಿದ್ಯಾಲಯದಲ್ಲಿ ಕೆಲಸ ನಿರ್ವಹಿಸಿ ಕರ್ನಾಟಕ ಸರ್ಕಾರ ಕರ್ನಾಟಕ ಸಂಸ್ಕೃತ ವೇದ ಮಹಾವಿದ್ಯಾಲಯದ ಉಪಕುಲಪತಿಗಳಾಗಿ ಕಾರ್ಯನಿರ್ವಹಿಸಿ ನಿವೃತ್ತರಾಗಿದ್ದಾರೆ. ಸಹೃದಯಿ ವಿಮರ್ಶಕರಾದ ವೆಂಕಟೇಶರವರು ಶಂಭಾ

ಜೋಶಿಯವರ ಸಂಶೋಧನೆಗಳನ್ನು ಚೆನ್ನಾಗಿ ಅರ್ಥ ಮಾಡಿಕೊಂಡವರು. ನಿಸರ್ಗಕ್ಕೆ ಸಂಬಂಧಿಸಿದ ಕವಿತೆಗಳ ಸಂಕಲನವನ್ನು ಶಂಬಧರನ 'ಲಟಕ ಮೇಳಕಂ' ಪ್ರಹಸನವನ್ನು ಮೂರ್ಖರ ಮೇಳ ಎಂಬುದಾಗಿ ಅನುವಾದಿಸಿದ್ದಾರೆ, ಇವಲ್ಲದೆ ಶಂಭಾ ಅಧ್ಯಯನ, ಶಂಭಾ ಕೃತಿ ಸಮೀಕ್ಷೆ, ಸ್ಫೋಟವಾದ, ಸಾಹಿತ್ಯ ಮತ್ತು ಪುರಾಣ, ಸಂಸ್ಕೃತಿ ಮತ್ತು ಶಂಭಾ, ಪತಾಳಿ, ವಿ.ಕೃ. ಗೋಕಾಕ್ ಪರಿಚಯ ಮುಂತಾದ ಕೃತಿಗಳ ರಚನೆ ಮಾಡಿದ್ದಾರೆ.

## ಅಡಿ ಟಿಪ್ಪಣಿಗಳು

೧. ಕರ್ನಾಟಕ ರಾಜ್ಯ ಗೆಜಿಟಿಯರ್ ಬೆಂಗಳೂರು ಗ್ರಾಮಾಂತರ ಜಿಲ್ಲೆ ಕರ್ನಾಟಕ ಸರ್ಕಾರ ಬೆಂಗಳೂರು, ೧೯೮೯. ಪುಟ.ಸಂಖ್ಯೆ–೩೩

೨. ಪಿ.ವಿ ಕೃಷ್ಣಮೂರ್ತಿ ಕರ್ನಾಟಕ ಲೋಚನ ಸುಗಟೂರು ವಂಶದ ಪಾಳೆಯಗಾರರು ಸುಗಟೂರು, ಪುಟ.ಸಂಖ್ಯೆ ೪೧-೪೨

೩. ಹಾ.ಮಾ.ನಾಯಕ್, (ಸಂ) ಕರ್ನಾಟಕ ವಿಷಯ ವಿಶ್ವಕೋಶ ಪುಟ ಸಂಖ್ಯೆ ೫೪೩

೪. ಸೂರ್ಯನಾಥ್ ಕಾಮತ್, ಕರ್ನಾಟಕ ರಾಜ್ಯ ಗೆಜಿಟಿಯರ್ ಬೆಂಗಳೂರು ಗ್ರಾ ಜಿ, ಪುಟ ಸಂಖ್ಯೆ–೨

೫. ಹಾ.ಮಾ.ನಾಯಕ್, ಕರ್ನಾಟಕ ವಿಷಯ ವಿಶ್ವಕೋಶ, ಪುಟ.ಸಂಖ್ಯೆ–೧೬೩೭

೬. ಕರ್ನಾಟಕ ವಿಷಯ ವಿಶ್ವಕೋಶ ಭಾಗ–೧ ಭಾಗ–೨ ಸಂಪಾದಕರು ಹಾ.ಮಾ.ನಾಯಕ್

೭. ಕೆ.ಸಂಪತ್‌ಗಿರಿ ರಾವ್ (ಸಂ) ಕರ್ನಾಟಕ ಪರಂಪರೆ ಸಂಪುಟ–೨ ಪುಟ ಸಂಖ್ಯೆ–೨೦೯

೮. ಕರ್ನಾಟಕ ವಿಷಯ ವಿಶ್ವಕೋಶ ಭಾಗ–೧ ಭಾಗ–೨ ಸಂಪಾದಕರು ಹಾ ಮಾ ನಾಯಕ್ ಪುಟ ಸಂಖ್ಯೆ ೨೯೪

೯. ಸೂರ್ಯನಾಥ್ ಕಾಮತ್ ಕರ್ನಾಟಕ ರಾಜ್ಯ ಗೆಜಿಟಿಯರ್ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಪುಟ ಸಂ ೩೬೭

೧೦. ಬೆಂಗಳೂರು ಗ್ರಾ ಜಿಲ್ಲೆ ಅಂಕಿ ಅಂಶಗಳ ನೋಟ ೧೯೯೮-೯೯ ಪುಟ ಸಂ ೩೩

೧೧. ಪ್ರೊ.ಚಂದ್ರಪ್ಪ ಸಂಪಾದಕರು ಬೆಂಗಳೂರು ಗ್ರಾ ಜಿಲ್ಲಾ ಪ್ರಾತಿನಿದಿಕ ದರ್ಶಿನಿ ೨೦೧೦ ಪುಟ ಸಂಖ್ಯೆ ೩೬-೪೮

# ಅಧ್ಯಾಯ–೩

# ಐತಿಹ್ಯಗಳ ಸ್ವರೂಪ ಮತ್ತು ಲಕ್ಷಣ

ಐತಿಹ್ಯದ ಹುಟ್ಟು–ಬೆಳವಣಿಗೆ ಪ್ರಾಚೀನತೆ, ಪುರಾಣವಾಗಿ, ದಂತಕತೆಯಾಗಿ, ವದಂತಿಯಾಗಿ, ಐತಿಹ್ಯದ ವಿವಿಧ ಹಂತಗಳಾದ ಸ್ಥಳ, ಘಟನೆ, ಚರಿತ್ರೆ, ಸಮಾಜ ಸಂಸ್ಕೃತಿಯ ಹಿನ್ನೆಲೆಯಲ್ಲಿ ಹುಟ್ಟಿಕೊಳ್ಳುವ ಕಥೆಯೇ ಐತಿಹ್ಯ, ವಿವಿಧ ಜಾನಪದ ವಿದ್ವಾಂಸರು ಪಟ್ಟಿ ಮಾಡಿರುವ ಐತಿಹ್ಯದ ಪ್ರಕಾರಗಳು ಸ್ಥಳನಾಮಗಳ ಹಿಂದೆ ಇರುವ ಐತಿಹ್ಯಗಳು ವ್ಯಕ್ತಿನಾಮಗಳ ಹಿಂದೆ ಇರುವ ಘಟನಾ ಐತಿಹ್ಯಗಳು ವ್ಯಕ್ತಿ ಐತಿಹ್ಯಗಳಿಗೆ ಮುಂತಾದವುಗಳನ್ನು ವಿಶ್ಲೇಷಣೆ ಮಾಡಬಹುದು. "ಇತಿ' ಇತಿಹ ಎನ್ನುವ ಸಂಸ್ಕೃತ ರೂಪದಿಂದ 'ಐತಿಹ್ಯವು' ಹೀಗೆ ಇತ್ತು. ಹೀಗೆ ನಡೆದಿತ್ತು ಎಂಬಿತ್ಯಾದಿ ಅರ್ಥಗಳಿವೆ"[೧]

ಇತಿಹಾಸವು ಐತಿಹ್ಯಗಳೊಳಗೆ ಸಾಮ್ಯ ವ್ಯತ್ಯಾಸಗಳೇನಾದರೂ ಇವೆಯೇ ಎಂಬ ವಿಚಾರವನ್ನು ನಾವು ಚರ್ಚೆ ಮಾಡಬೇಕಾಗಿದೆ. ಐತಿಹ್ಯವೆಂದರೆ ಜನರಿಂದ ಜನರಿಗೆ ಒಂದು ಬಾಯಿಂದ ಮತ್ತೊಂದು ಬಾಯಿಗೆ ಮತ್ತು ಸ್ಥಳಗಳಿಗೆ ಘಟನೆಗಳಿಗೆ ಸಂಬಂಧಿಸಿದಂತೆ ಮೌಖಿಕ ಸಂಪ್ರದಾಯದಲ್ಲಿ ಉಳಿದುಕೊಂಡು ಬಂದಿರುವ ಐತಿಹ್ಯವು ಜನಪದ ಸಾಹಿತ್ಯ ಪ್ರಕಾರವೆಂದು ಪರಿಗಣಿತವಾದುದರಿಂದ ಇದು ಒಂದು ರೀತಿಯಲ್ಲಿ ಜನಪದ ಇತಿಹಾಸವಾಗಿದೆ.

'ಐತಿಹ್ಯ ಅಥವಾ ಲೆಜೆಂಡ್ ಎಂಬ ಪದವು ಪರಂಪರೆಯಿಂದ ಬಂದದ್ದು ಎಂಬ ವಿಶಾಲಾರ್ಥದಲ್ಲಿ ಬಳಕೆಯಾಗಿದೆ. ಐತಿಹ್ಯ ಎನ್ನವುದಕ್ಕೆ ಕನ್ನಡ ನಿಘಂಟು ಸಾಧು ಸ'ಂತರ ಜೀವನ ಕತೆ ಎಂಬ ಹೊಸ ಅರ್ಥವನ್ನು ದಾಖಲಿಸಿದೆ. ಒಟ್ಟಿನಲ್ಲಿ ಐತಿಹ್ಯ ಎಂದರೆ ಪರಂಪರೆಯಿಂದ ಬಂದಿರುವುದು, ಪರಂಪರಾಗತ ವೃತ್ತಾಂತ, ಇತಿಹಾಸಕ್ಕೆ ಸಂಬಂಧಿಸಿದ ಚರಿತ್ರೆ, ಇಲ್ಲವೆ ಐತಿಹ್ಯವು ಇತಿಹಾಸಕ್ಕೆ ಸಮೀಪವರ್ತಿಯಾದುದು ಎಂದು ಅನೇಕ ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. "ಎಲ್ಲೋ ಯಾವಾಗಲೋ ಘಟಿಸಿದ ಒಂದು ಘಟನೆ ಅಥವಾ ಒಂದು ಸ್ಥಳದ ವೈಶಿಷ್ಟ್ಯ ಅಥವಾ ವ್ಯಕ್ತಿಯೊಬ್ಬನ ಸಾಧನೆ, ಆ ಪರಿಸರದ ವ್ಯಕ್ತಿಗಳ ಮೇಲೆ ಪ್ರಭಾವ ಬೀರಿರುತ್ತದೆ. ಈ ಪ್ರಭಾವವೇ ಪರಿಣಾಮವಾಗಿ ಅವರಲ್ಲೊಬ್ಬ ಪ್ರತಿಭಾಶಾಲಿ ಆ ನಿರ್ದಿಷ್ಟ ಘಟನೆಗೆ ಅಥವಾ ಸ್ಥಳಕ್ಕೆ ಅಥವಾ ವ್ಯಕ್ತಿಗೆ ತನ್ನ ಕಲ್ಪನೆಯ ವೈಭವೀಕರಣದ ಅಂಶಗಳನ್ನು ಸೇರಿಸಿ ಬಿಡುತ್ತಾನೆ. ಆ ಪರಿಷ್ಕೃತ ಅಂಶಗಳನ್ನು ಹರಡುತ್ತಾನೆ."[೨] ಹೀಗೆ ಒಂದು

ಘಟನೆಗೆ ಅಥವಾ ಸ್ಥಳಕ್ಕೆ ಅಥವಾ ಒಂದು ವ್ಯಕ್ತಿಗೆ ಸಂಬಂಧಿಸಿದ ಐತಿಹ್ಯ ಉಂಟಾಗುತ್ತದೆ, ಇಂಥ ಐತಿಹ್ಯದ ಸೃಷ್ಟಿಯಲ್ಲಿ ಉಪಲಬ್ಧ ದಾಖಲೆಗಳನ್ನು ಬಳಸಿಕೊಳ್ಳಲಾಗುತ್ತದೆ.

ಆದರೆ ಇವು ನೈಜ ಚರಿತ್ರೆಯಾಗಲು ಬೇಕಾದ ವಸ್ತು ನಿಷ್ಠತೆಯಿಂದ, ವೈಜ್ಞಾನಿಕ ದೃಷ್ಟಿಕೋನದಿಂದ ದೂರಸರಿದು "ಕಲ್ಪನೆಯ ಆಶ್ರಯವನ್ನು ಪಡೆದು ಕಾವ್ಯದ ಧಾಟಿಯಲ್ಲಿ ಸಾಗುತ್ತದೆ. ಭಾವುಕತೆ ವಿಜೃಂಭಿಸುತ್ತದೆ. ಅಂದಾಗಲೂ ನಡೆದಿರಬಹುದಾದ ಘಟನೆಯೊಂದು ಅದರ ತಳಭಾಗದಲ್ಲಿ ರೂಪಾಂತರಗೊಳ್ಳದೇ ಇರುವುದುಂಟು. ಕೆಲವು ಸಂಭಾವ್ಯ ಅಂಶಗಳು ಮೇಲಿಂದ ಮೇಲೆ ಸೇರುತ್ತಿದ್ದರೂ ಮೂಲ ಅಂಶ ಪೂರ್ಣ ನಾಶವಾಗುವುದಿಲ್ಲ, ಕಲಾಕೃತಿಯೊಂದರಲ್ಲಿ ನಡೆಯುವಂತೆ ಪೂರ್ಣವಾಗಿ ಹೊಸಮೈಯನ್ನು ಪಡೆಯುವುದಿಲ್ಲ."[೩]

ಅಂದರೆ ಪ್ರಾಚೀನ ಕಾಲದ ಚಾರಿತ್ರಿಕ ಸಂಗತಿಯೊಂದು ಕ್ರಮೇಣ ಅಪೂರ್ವವೂ, ಅದ್ಭುತವೂ ಆದ ಸನ್ನಿವೇಶಗಳನ್ನು ಒಳಗೊಳ್ಳುತ್ತಾ ತಲೆಮಾರುಗಳ ಮೂಲಕ ಹರಿದು ಬರುವಾಗ, ಒಂದು ಹಂತದಲ್ಲಿ ಐತಿಹ್ಯ ನಿಧಾನವಾಗಿ ರೂಪುಗೊಳ್ಳುತ್ತಾ ಸಾಗಿ ಕೊನೆಗೆ ನಿರ್ದಿಷ್ಟ ಆಕೃತಿಯನ್ನು ಪಡೆದು ಗಟ್ಟಿಯಾಗುತ್ತದೆ. ಈಗಾಗಲೇ ಸ್ಪಷ್ಟಪಡಿಸಿದಂತೆ ಚರಿತ್ರೆಗೂ, ಐತಿಹ್ಯಕ್ಕೂ ಇರುವ ಸಂಬಂಧವನ್ನು ಖಚಿತವಾಗಿ ಗುರುತಿಸಲಾಗದು. ಭೌತಿಕ ಆಧಾರವೊಂದನ್ನು ಆಧರಿಸಿ ಹುಟ್ಟಿದ ಕಥನಗಳು ಐತಿಹ್ಯಗಳಾದರೆ ಅದೇ ಆಧಾರವನ್ನು ಆಧರಿಸಿದ ವಸ್ತುನಿಷ್ಠ ವೈಜ್ಞಾನಿಕ ನಿರೂಪಣೆ ಚರಿತ್ರೆಯಾಗಬಹುದು. "ಜನಪದರ ಮಟ್ಟಿಗೆ ಐತಿಹ್ಯಗಳ ಶೈಕ್ಷಣಿಕ ಪ್ರವೃತ್ತಿ, ಐತಿಹ್ಯಗಳಲ್ಲಿ ಗಾಢವಾಗಿ ಹುದುಗಿರುವ ಅದರ ಶೈಕ್ಷಣಿಕ ಪ್ರವೃತ್ತಿಯು ಅದನ್ನು ಮನರಂಜನಾ ಉದ್ದೇಶದಿಂದ ಬೇರ್ಪಡಿಸಿದೆ. ಜನರಿಗೆ ತಿಳುವಳಿಕೆ ನೀಡಬಯಸುವ ಐತಿಹ್ಯದ ಶೈಕ್ಷಣಿಕ ಪ್ರವೃತ್ತಿಯೇ ಅದರ ವಿವರಣಾತ್ಮಕ ಭಾಗವನ್ನು ನಿಯಂತ್ರಿಸಿದೆ. ಅಂದರೆ ಐತಿಹ್ಯಗಳು ಸತ್ಯವೆಂಬ ಭಾವದಲ್ಲಿ ಸಂಕ್ಷಿಪ್ತವಾಗಿರುತ್ತದೆ."[೪]

ಇಲ್ಲಿಯೇ ಐತಿಹ್ಯಗಳು ಜನಪದ ಕತೆಗಳಿಗಿಂತ ಭಿನ್ನವಾಗುತ್ತದೆ. "ಒಬ್ಬಾತನು 'ಸತ್ಯ' ಅಥವಾ 'ನಿಜ'ವನ್ನು ನಿರೂಪಿಸುವ ಬಗೆಯಲ್ಲಿಯೇ ಚರಿತ್ರೆ ಅಥವಾ ಐತಿಹ್ಯ ಅಥವಾ ಕತೆ ಅಥವಾ ಪುರಾಣ ಸೃಷ್ಟಿಯಾಗುತ್ತದೆ. ನಿಜಕ್ಕೆ ಚರಿತ್ರೆಯಲ್ಲಿ ವಿವರಣೆ ಮತ್ತು ವ್ಯಾಖ್ಯಾನ ಇರುತ್ತದೆ. ಐತಿಹ್ಯದಲ್ಲಿ ಕೇವಲ ನಿರೂಪಣೆ ಇರುತ್ತದೆ. ಕಥೆಯಲ್ಲಿ ರಂಜನಾಂಶ ಪ್ರಧಾನವಾಗುತ್ತದೆ. ಪುರಾಣದಲ್ಲಿ ಸಾರ್ವಕಾಲಿಕತೆ ಮುಖ್ಯವಾಗುತ್ತದೆ. ಇವುಗಳೆಲ್ಲದರ ಹುಟ್ಟಿಗೆ ವ್ಯಕ್ತಿಯೊಬ್ಬನ ಪ್ರತಿಭೆ ಮಾತ್ರ ಸಾಲದು. ಆ ಪ್ರತಿಭೆ ಅರಳುವುದಕ್ಕೆ ಪೋಷಕವಾದ ಸಾಮಗ್ರಿಯೊಂದು ಭೌತಿಕ ಜಗತ್ತಿನಲ್ಲಿಯೇ ಬೇಕು."[೫] ಇದರ ಸಹಾಯದಿಂದ ಆನಂತರ ನಿರೂಪಣ ಕವಿಪ್ರತಿಭೆ ಪ್ರಾಚೀನ ಸತ್ಯಗಳನ್ನು ಸಾಕ್ಷಾತ್ಕರಿಸಬಹುದು, ಐತಿಹ್ಯದ

ಗರ್ಭದೊಳಗಳಿಗಿರುವ 'ಭೌತಿಕ ಸತ್ಯವು ವಿಶ್ವದ ಮಾನವವರ್ಗ, ಪ್ರಾಣಿವರ್ಗ ಮತ್ತು ಸಸ್ಯವರ್ಗದ ಯಾವುದೇ ವಿಷಯಗಳನ್ನು ಕುರಿತಾಗಿರಬಹುದು ಅಥವಾ ಈ ಮೂರರ ಬಳಕೆಯಲ್ಲಿಯೇ ಹುಟ್ಟಬಹುದು.'

ಹೀಗಿರುವಾಗ ಭೌತಿಕ ಸತ್ಯದ ಅಥವಾ ಆಧಾರದ ನಿರೂಪಣೆ ವೈಜ್ಞಾನಿಕವಾಗಿದ್ದಂತೆ ಮೇಲ್ನೋಟಕ್ಕೆ ತೋರಿದರೂ ಐತಿಹ್ಯದಲ್ಲಿ ಹಾಗಿರುವುದಿಲ್ಲ. ಅದು 'ನಾಟಕೀಯ ಅತಿಮಾನುಷತೆ'ಯನ್ನು ಹೊಂದುತ್ತದೆ. ಇಲ್ಲವೇ ವಿಮರ್ಶಕವಲ್ಲದ ತಿಳುವಳಿಕೆಯಿಂದಲೂ ಹೊಸರೂಪ ಪಡೆಯಬಹುದು. ಹೀಗೆ ಆದಾಗಲೂ ಐತಿಹ್ಯದ ನಿರೂಪಕ ಕೊಡುವ ಭೌತಿಕ ಆಧಾರವು ಕಣ್ಣೆದುರೇ ಇರುತ್ತದೆ. ಆ ಆಧಾರಕ್ಕೂ ನಿರೂಪಣೆಗೂ ವೈಜ್ಞಾನಿಕ ಸಂಬಂಧ ಇರುವುದಿಲ್ಲ. ಸುಸಂಬದ್ಧ ತರ್ಕ ಮಾತ್ರ ಇರುತ್ತದೆ. ಕಲ್ಲಿನಲ್ಲಿ ಒಂದೆರಡು ಗೆರೆ ಇದ್ದರೆ ಮಾತ್ರ ಅದು ಸೀತೆಯ ಸೆರಗಿನ ಗುರುತು ಎಂಬ ನಿರೂಪಣೆಯನ್ನು ಪಡೆದುಕೊಳ್ಳುತ್ತದೆ. ಅದೇ ರೀತಿ ಕಲ್ಲಿದ್ದರೆ ಮಾತ್ರ ಭೀಮನಕಲ್ಲು, ಕೆರೆಯಿದ್ದರೆ ಮಾತ್ರ 'ಜಟಾಯುತೀರ್ಥ', ಗುಹೆಯಿದ್ದರೆ ಮಾತ್ರ 'ಪಾಂಡವರ ಗುಹೆ' ಸಿದ್ದವಾಗುತ್ತದೆ. ಆದರೆ, ಐತಿಹ್ಯದ ವಸ್ತುಗಳಾದ ಪ್ರಾಣಿವರ್ಗ–ಸಸ್ಯವರ್ಗ–ಮಾನವವರ್ಗ ಮತ್ತು ಅವು ಮೂರರ ಸಮನ್ವಯದ ಸಾತ್ವಿಕೆ ಪುರಾಣದ ಹುಟ್ಟಿಗೆ ಕಾರಣವಾಗುತ್ತದೆ. ಜನರ ನಂಬಿಕೆ, ಶ್ರದ್ಧೆ, ನಡವಳಿಕೆ, ಮೌಲ್ಯ ವ್ಯವಸ್ಥೆ, ಆದರ್ಶಗಳು ಪುರಾಣವನ್ನು ಸೃಷ್ಟಿಸುತ್ತವೆ.

ಹಾಗೆಂದು "ಭೌತಿಕ ವಸ್ತುಗಳ ಮೂರ್ತತೆಯ ಅವಲಂಬನ ಅದಕ್ಕೆ ಬೇಡ, ಕತೆಗಳಿಗಾದರೂ ಅಷ್ಟು ಮೂಲವಸ್ತುಗಳು ಹೊಸ ಆಕೃತಿಯೊಂದನ್ನು ಪಡೆದುಕೊಂಡು ನಿರ್ದಿಷ್ಟ ಸಾತ್ವಿಕತೆಯೊಂದನ್ನು ಅಲ್ಲಿ ಪ್ರಕಟಪಡಿಸುತ್ತದೆ. ಈ ದೃಷ್ಟಿಯಿಂದ ಕತೆಗಳು ಐತಿಹ್ಯದತ್ತ ಸುಳಿದಾಡಿದರೆ, ಐತಿಹ್ಯಗಳು ಚರಿತ್ರೆಯತ್ತ ವಾಲುತ್ತದೆ."[೬] ಚರಿತ್ರೆ ಬದುಕಿನ ವಾಸ್ತವತೆಯ ಅಧಿಕೃತ ನಿರೂಪಣೆಯಾಗಿದೆ. ಭೌತಿಕ ಆಧಾರ ಅಥವಾ ಸತ್ಯಗಳೆಲ್ಲವೂ ಐತಿಹ್ಯಕ್ಕೆ ವಸ್ತುವಾಗಲಾರವು.

ಅವು ಸಾಮಾನ್ಯ ಜೀವನ ಶಿಷ್ಟಕ್ಕಿಂತ ಭಿನ್ನವಾಗಿದ್ದು ವಿಶಿಷ್ಟವಾಗಿರಬೇಕು ಅಥವಾ ಅಸಾಮಾನ್ಯವಾಗಿರಬೇಕು. ಸಾಮಾನ್ಯ ಶಿಷ್ಟಕ್ಕಿಂತ ವಿಶೇಷವಾಗಿರುವುದು ಅಥವಾ ಸಾಮಾನ್ಯ ವಿಷಯಗಳಿಗಿಂತ ಅಸಾಮಾನ್ಯವಾಗಿರುವುದು, ಯಾವುದೇ ಆದರೂ ತನ್ನ ಇರುವಿಕೆಯ ಸ್ಥಿತಿಯಲ್ಲಿಯೇ ಜನರ ಮೇಲೆ ಪ್ರಭಾವ ಬೀರಲು ಸಮರ್ಥವಾಗಿರುತ್ತದೆ. ವ್ಯಕ್ತಿ, ಸ್ಥಳ ಮತ್ತು ಕಾಲವೆಂಬ ಮೂರು ವಿಂಗಡಣೆಗಳಲ್ಲಿ ಈ ಅಸಾಮಾನ್ಯತ್ವವನ್ನು ಗುರುತಿಸಲು ಸಾಧ್ಯವಿದೆ. ಊರಿಗೆಲ್ಲ ದೊಡ್ಡದಾಗಿರುವ ಬೆಟ್ಟ ಅಥವಾ ಕೆರೆ ಸಾಮಾನ್ಯರಿಗಿಂತ ವಿಶೇಷ ಶಕ್ತಿವಂತನಾಗಿದ್ದ

ಅಥವಾ ಪ್ರತಿಭಾಶಾಲಿ ವ್ಯಕ್ತಿ, ಸಾಮಾನ್ಯ ಜೀವನದಲ್ಲಿ ಸೇರ್ಪಡೆಯಾಗಿರುವ ಕಾಲಕ್ಕಿಂತ ಬೇರೆಯಾದ ಅರ್ಥಪೂರ್ಣವಾದ ಕಾಲ ಇವು ಮೂರು ಐಕ್ಯ ಹೊಂದಿ ಅಥವಾ ಪ್ರತ್ಯೇಕವಾಗಿಯೂ ಐತಿಹ್ಯದಲ್ಲಿ ಸ್ಥಾನ ಪಡೆಯುತ್ತವೆ. “ಪುರಾಣ ವ್ಯಕ್ತಿಗಳೆಲ್ಲರೂ ಸಾಮಾನ್ಯ ಮನುಷ್ಯರಿಗಿಂತ ವಿಶಿಷ್ಟರು. ಅಸಾಮಾನ್ಯರಾದುದರಿಂದ ಅವರಿಗೆ ಐತಿಹ್ಯದಲ್ಲಿ ವಿಶೇಷ ಸ್ಥಾನವಿದೆ. ಪುರಾಣಗಳು ಐತಿಹ್ಯಗಳಿಗೂ ಪ್ರಾಚೀನವಾಗಿರಬೇಕು ಮಾತುಗಳು ಹುಟ್ಟಲು ಇದೇ ಕಾರಣವಾಗಿದೆ.”[೭]

ಐತಿಹ್ಯಗಳನ್ನು ಕುರಿತು ಆರಂಭದ ಅಧ್ಯಯನಗಳು ಹಾಗೂ ಅಧ್ಯಯನವನ್ನು ಕುರಿತ ಆಸಕ್ತಿ ಮೊದಲಿಗೆ ಕಂಡುಬರುವುದು “ಪಾಶ್ಚಾತ್ಯರಲ್ಲಿ ‘Legend’ಎನ್ನುವ ಪದಕ್ಕೆ ಸಂವಾದಿಯಾಗಿ ಕನ್ನಡದಲ್ಲಿ ಐತಿಹ್ಯ ಎನ್ನುವ ಪದವನ್ನು ಬಳಸುತ್ತಿದ್ದೇವೆ.‘Legend’ ಎನ್ನುವ ಪದ ಮೂಲತಃ ಲ್ಯಾಟಿನ್ ಭಾಷೆಗೆ ಸೇರಿದ್ದೆಂದು ವಿದ್ವಾಂಸರು ಗುರ್ತಿಸಿದ್ದಾರೆ.”[೮] ಹಾಗೂ ಆರಂಭದಲ್ಲಿ ಈ ಶಬ್ದವು ವ್ಯಾಪ್ತಿ ಸೀಮಿತವಾಗಿತ್ತು. ಆರಂಭದಲ್ಲಿ ಸಾಧು ಸಂತರ ಜೀವನ ಚರಿತ್ರೆಗಷ್ಟೇ ಪಾಶ್ಚಾತ್ಯ ಸಂದರ್ಭದಲ್ಲಿ ಈ ಪದವನ್ನು ಬಳಸಲಾಗುತ್ತಿತ್ತು. “ಜಾಕಬ್ಸ್‌ಡೇವರಾಗಿಸೆ ಅವರು ಸಂಪಾದಿಸಿರುವ ‘Golden Legend’ಎನ್ನುವ ಸುಮಾರು ೧೩ ನೇ ಶತಮಾನದ್ದೆಂದು ಗುರುತಿಸಲಾಗಿರುವ ಕೃತಿಯಲ್ಲಿ ಕೇವಲ ಸಾಧುಸಂತರ ಕಥೆಗಳಷ್ಟೇ ಸಂಕಲಿತವಾಗಿರುವುದು ಇದಕ್ಕೆ ನಿದರ್ಶನವೆಂದು ಭಾವಿಸಬಹುದು. ಜನಪದ ಅಧ್ಯಯನ ವಿಸ್ತರಿಸಿದಂತೆಲ್ಲ ‘Legend’ ಎಂಬ ಪದ ಸೀಮಿತ ಅರ್ಥದಿಂದ ಪಾರಾಗಿ ಮೌಖಿಕ ಪರಂಪರೆಯ ಅನೇಕ ಸಂಗತಿಗಳನ್ನು ಒಳಗೊಂಡು ವಿಸ್ತೃತವಾಯಿತು.”[೯]

ಲ್ಯಾಟಿನ್ ಭಾಷೆಯ ಲೆಜೆಂಡಾ (legenda)ಎಂಬ ಶಬ್ದಕ್ಕೆ ಇಂಗ್ಲಿಷ್‌ನಲ್ಲಿ “ಲೆಜೆಂಡ್” ಎಂದು ಬಳಸಲಾಗಿದ್ದು ಇದಕ್ಕೆ ಸಂವಾದಿಯಾಗಿ ಕನ್ನಡದಲ್ಲಿ ‘ಐತಿಹ್ಯ’ ಎಂಬ ಶಬ್ದವನ್ನು ಬಳಸಲಾಗಿದೆ ಐತಿಹ್ಯ ಎಂದರೆ ಒಂದು ಸ್ಥಳ ಅಥವಾ ಘಟನೆ ವ್ಯಕ್ತಿಯ ಸುತ್ತ ಸಾಂಪ್ರದಾಯಿಕವಾಗಿ ಬೇರೆ ಬೇರೆ ವಿಷಯಗಳನ್ನು ಆಧಾರಿಸಿ ಬೆಳೆದು ಬಂದು ಒಂದು ಕಥನ ಎಂಬ ಅರ್ಥವನ್ನು ಪಡೆದು ಕೊಂಡಿತು. ಐತಿಹ್ಯವು ಜಾನಪದ ಅಧ್ಯಯನದಲ್ಲಿ ಒಂದು ಪ್ರಮುಖ ಅಂಶವಾಗಿದ್ದು ಜನಪದ ಸಂಸ್ಕೃತಿಯ ವಿವಿಧ ಮುಖಗಳನ್ನು ಗುರುತಿಸುವುದಕ್ಕೆ ಸಹಾಯಕವೆಂಬ ಅಭಿಪ್ರಾಯವಿದ್ದರೂ ಪ್ರಸ್ತುತ ಚಾರಿತ್ರಿಕ ಮತ್ತು ಪುರಾಣ ಕಥೆಗಳನ್ನು ಧಾರ್ಮಿಕ ಬದ್ದತೆಯನ್ನು ಉಳಿಸಿಕೊಂಡಿರುವ ಐತಿಹ್ಯಗಳನ್ನು ಗಮನಿಸುವುದು ಸಾಂಸ್ಕೃತಿಕ ಇತಿಹಾಸದ ಸಂದರ್ಭದಲ್ಲಿಯೂ ಮುಖ್ಯವಾಗಿರುತ್ತದೆ ಹೀಗಾಗಿ ಸಾಮಾನ್ಯ ಜನ

ಐತಿಹ್ಯಗಳನ್ನು ಇತಿಹಾಸವೆಂದು ಕಥೆಯನ್ನು ಆಧಾರಿಸಿ ಹೇಳುವುದುಂಟು. ಮುಂದೆ ಕ್ರಮ ಬದ್ದವಾದ ಅಧ್ಯಯನ ಪ್ರಾರಂಭವಾದ ಮೇಲೆ ಐತಿಹ್ಯವೆಂಬುದು "ಜಾನಪದ ಪರಿಕಲ್ಪನೆ ಅದೇ ಅಧೀಕೃತ ಇತಿಹಾವಲ್ಲವೆಂಬುದು ಬೆಳಕಿಗೆ ಬಂದಿತು ಆದರೆ ಸಂಸ್ಕೃತಿಯ ಪರಿಕಲ್ಪನೆಯಲ್ಲಿ ಅಧಿಕೃತವೆನ್ನಬಹುದಾದ ಏಕಮುಖ ಆಕೃತಿಯ ಕಡೆಗಿನ ಒಲವಿನಿಂದ ಅದನ್ನು ಒಂದೇ ಎನ್ನುವ ನೆಲೆಯಿಂದ ವಿವರಿಸುವುದನ್ನುಇಂದು ತಿರಸ್ಕರಿಸಬೇಕಾಗಿದೆ, ಯಾವುದೇ ಸಂಸ್ಕೃತಿಯನ್ನು ಒಂದೇ ಲಕ್ಷಣದಿಂದ ವಿವರಿಸುವುದು ಆ ಸಂಸ್ಕೃತಿಯನ್ನು ಜೀವಂತವಾಗಿಟ್ಟು ಅಸಂಖ್ಯಾತ ವಿನ್ಯಾಸಗಳ ಮತ್ತು ಅವುಗಳ ಅಭಿವ್ಯಕ್ತಿಯ ಅನೇಕ ವಲಯಗಳನ್ನು ನಿರಾಕರಿಸಿದಂತಾಗುತ್ತದೆ."[೧೦] ಐತಿಹ್ಯ ಕೆಲವು ಸಂದರ್ಭಗಳಲ್ಲಿ ಸತ್ಯದ ಘಟನೆಯನ್ನು ಆಧಾರಿಸಿದ ಚರಿತ್ರೆ ಆಗಿರಲಿಕ್ಕೆ ಸಾಧ್ಯವಿದೆ ಆದರೆ ಸದಾಕಾಲ ಐತಹ್ಯದಲ್ಲಿ ಇತಿಹಾಸವಿರುವುದಿಲ್ಲ ಎಂಬುದು ಅಷ್ಟೇ ಸತ್ಯ ಆದರೆ ಐತಿಹ್ಯ ಚರಿತ್ರೆಯ ವೇಷವನ್ನು ತಪ್ಪದೇ ಧರಿಸುತ್ತದೆ ಅಷ್ಟೇ ಅಲ್ಲದೇ ಅದರ ಲಕ್ಷಣಗಳಲ್ಲಿ ಒಂದು.

"ಐತಿಹ್ಯದ ಮತ್ತೊಂದು ಲಕ್ಷಣವೆಂದರೆ ಇದು ಪುರಾಣದ ಜೊತೆಗೆ ಹೋಲಿಕೆಯನ್ನು ಪಡೆದಿರುತ್ತದೆ, ಅನೇಕ ವೇಳೆ ಪುರಾಣ ಮತ್ತು ಐತಿಹ್ಯ ಇವುಗಳನ್ನು ವಿಭಜಿಸುವುದು ಕಷ್ಟ ಎಂಬುವುದು ವಿದ್ವಾಂಸರ ಅಭಿಪ್ರಾಯ ಪುರಾಣಕ್ಕೆ ಇರುವಷ್ಟು ದೀರ್ಘತೆ ಐತಿಹ್ಯಗಳಿಗೆ ಇರುವುದಿಲ್ಲ. ಅನೇಕ ಸಂದರ್ಭದಲ್ಲಿ ಜನ ಸಾಮಾನ್ಯರ ನಂಬಿಕೆಗಳು ಐತಿಹ್ಯಗಳ ಹುಟ್ಟಿಗೆ ಕಥೆಗಳು ಕಾರಣವಾಗಿ ಐತಿಹ್ಯಗಳು ಚಾಲನೆಯನ್ನು ಪಡೆದುಕೊಂಡಿರುತ್ತದೆ."[೧೧] ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಪರಿಸರದಲ್ಲಿಯೂ ಚರಿತ್ರೆಗೆ ಸಂಬಂಧಿಸಿದಂತೆ ಧಾರ್ಮಿಕ ನಂಬಿಕೆಗಳು ಪುರಾಣ ಮತ್ತು ಸಾಮಾಜಿಕ ನಂಬಿಕೆಗಳನ್ನು ಆಧರಿಸಿ ಹಲವಾರು ಐತಿಹ್ಯಗಳು ಪ್ರಚಲಿತವಾಗಿದೆ.

ಐತಿಹ್ಯಗಳು ಮುಖ್ಯವಾಗಿ ಒಂದು ಜನಪದ ಗದ್ಯಪ್ರಕಾರ ಐತಿಹ್ಯಗಳು ಹೆಚ್ಚಾಗಿ ಹಳ್ಳಿಗಾಡಿನಲ್ಲಿ ಕಂಡುಬರುತ್ತವೆ. ಜನರು ತಮ್ಮದೇ ಆದ ಆಚಾರ ವಿಚಾರಗಳು ಘಟನೆಗಳಿಗೆ ಸಂಬಂಧಿಸಿದಂತೆ ಐತಿಹ್ಯಗಳನ್ನು ರಚಿಸುತ್ತಿದ್ದರು. ಐತಿಹ್ಯಗಳು ಗದ್ಯವಾಗಿದ್ದು ಅವು ಸೃಜನಶೀಲ ಕವಿಗೆ ದೊರೆತರೆ ಅವು ಪದ್ಯವಾಗಿ ಪರಿವರ್ತನೆಗೊಳ್ಳುತ್ತವೆ. ಕೇವಲ ನಾಟಕಕ್ಕೆ ಮಾತ್ರ ಸೀಮಿತಾಗದೇ ಭಾರತದಾದ್ಯಂತ ಐತಿಹ್ಯಗಳು ಕಂಡುಬರುತ್ತವೆ.

ಪಾಶ್ಚಿಮಾತ್ಯ ಜಾನಪದ ವಿದ್ವಾಂಸರು ವಿಶ್ವದ ಜಾನಪದ ಅಧ್ಯಯನಕ್ಕೆ ಸುಗಮ ದಾರಿಯನ್ನು ಕಲ್ಪಿಸಿ ಕೊಟ್ಟಿದ್ದಾರೆ. ಭಾರತದ ದೇಶದಲ್ಲಿ ಕರ್ನಾಟಕ ಜಾನಪದ ಬೆಳೆಯುತ್ತಾ ಬಂದಿದೆ. ಜಾನಪದ ಅಧ್ಯಯನಕ್ಕೆ ಸುಲಭವಾಗಲು ವಿವಿಧ ಬಗೆಗಳಾಗಿ ವರ್ಗೀಕರಣ

ಮಾಡಿಕೊಳ್ಳಲಾಗಿದೆ. ಅದರಲ್ಲಿ ಐತಿಹ್ಯವು ಒಂದಾಗಿದೆ ಈ ಪ್ರಕಾರವನ್ನು ವಿವಿಧ ರೀತಿಯಲ್ಲಿ ಸಂಶೋಧನೆಗೆ ಒಳಪಡಿಸಲಾಗುತ್ತದೆ.

"ಜರ್ಮನ್ ಭಾಷೆಯಲ್ಲಿ 'ಸಾಗೆ' ಎಂದೂ ಆಂಗ್ಲ ಭಾಷೆಯಲ್ಲಿ 'ಲೆಜೆಂಡ್' ಎಂದೂ ಬಳಕೆಯಲ್ಲಿನ ಪದಕ್ಕೆ ನಮ್ಮಲ್ಲಿರುವ ಸಂವಾದಿ ಪದವೇ ಐತಿಹ್ಯ ಅರ್.ಎಸ್ ಬಾಗ್ಸ್ ಅವರ ಪ್ರಕಾರ ಲೆಜೆಂಡ್ ಅಂದರೆ ನಿರ್ಧಿಷ್ಟ ವ್ಯಕ್ತಿ ಸ್ಥಳ ವಸ್ತುಗಳಿಗೆ ಸಂಬಂಧಿಸಿದಂತೆ ನಡೆದವುಗಳೆಂದೇ ಹೇಳಲಾಗುವ ಯಾವುದೇ ನಿರ್ದಿಷ್ಟ ಹಿನ್ನೆಲೆಯಲ್ಲಿ ಸಾಂಪ್ರದಾಯಿಕ ವಿಷಯಗಳೂ ಸೇರಿ ಹುಟ್ಟಿರುವ ನಿರೂಪಣೆ ಎಂದಿದ್ದಾರೆ."[೧೨]

ಕೆಲವು ವಿದ್ವಾಂಸರು ಲೆಜೆಂಡ್ ಎನ್ನುವ ಪದಕ್ಕೆ ಅಲ್ಲಿ ಬೇರೆ ಬೇರೆ ಸಂದರ್ಭದಲ್ಲಿ ಬೇರೆ ಬೇರೆ ಅರ್ಥಗಳನ್ನು ಕೊಡಲಾಗಿದೆ. ಐತಿಹ್ಯಗಳು ಅಸಂಪ್ರದಾಯಿಕ ಅವೈಜ್ಞಾನಿಕ ಐತಿಹ್ಯಗಳನ್ನೇ ವಿವರಿಸಬಹುದಾಗಿದೆ. ಐತಿಹ್ಯವೆಂದರೆ ದಂತಕಥೆಗಳಿಗೆ ಸಂಬಂಧಿಸಿದ ರೀತಿಯಲ್ಲಿದೆ ಎಂದು ಹೇಳಬಹುದು. ಐತಿಹ್ಯದ ಬಗ್ಗೆ ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟುವಿನ ಮೊದಲನೆಯ ಸಂಪುಟದಲ್ಲಿ 'ಐತಿಹ್ಯ' ಪದಕ್ಕೆ ಪರಂಪರೆಯಿಂದ ಬಂದಿರುವುದು ಪುರಾಣ ಚರಿತ್ರೆ ಎಂಬಿತ್ಯಾದಿ ಅರ್ಥಗಳನ್ನು ಕೊಟ್ಟು ನಾಚಿರಾಜೀಯದಲ್ಲಿ ಪ್ರಯೋಗವಾಗಿರುವ ಪ್ರಮಾಣವಿಲ್ಲದೆ ಪರಂಪರೆಯಿಂದ ಬಂದ ಮಾತು ಹೇಳುವುದು 'ಐತಿಹ್ಯಂ ಇತಿಹಾಸಯೆನಿಸುಗಂ' ಎಂಬ ಮಾತನ್ನು ಎಂ.ಎಸ್.ಪುಟ್ಟಣ್ಣನವರ 'ಪಾಳೆಗಾರರು' ಕೃತಿಯಲ್ಲಿ ಈ ಪುಣ್ಯಕ್ಷೇತ್ರದಲ್ಲಿ ಒಂದು ಐತಿಹ್ಯವುಂಟು ಎಂಬುದನ್ನು ಐತಿಹ್ಯಕ್ಕೆ ತನ್ನದೇ ಆದ ಇತಿಹಾಸವನ್ನು ಪಡೆದುಕೊಂಡಿದೆ."

ಜಾನಪದ ನೆಲೆಗಟ್ಟಿನಲ್ಲಿ ಐತಿಹ್ಯಗಳು ತನ್ನದೇ ಆದ ಮಹತ್ವವನ್ನು ಪಡೆದುಕೊಳ್ಳುತ್ತದೆ. ಏಕೆಂದರೆ ಐತಿಹ್ಯವು ಇತಿಹಾದಿಂದ ಬಹುದೂರ ಸಾಗಿರುತ್ತದೆ. ಹಾಗೆಂದು ಅದು ಪುರಾಣದಂತ ಕತೆಯೂ ಅಲ್ಲ. ಎಲ್ಲೋ ಯಾವಾಗಲೋ ಘಟಿಸಿದ ಒಂದು ಘಟನೆ ಅಥವಾ ಒಂದು ಸ್ಥಳದ ವೈಶಿಷ್ಟ್ಯ ಅಥವಾ ವ್ಯಕ್ತಿಯೊಬ್ಬನ ಸಾಧನೆಯು ಆ ಪರಿಸರದ ವ್ಯಕ್ತಿಗಳ ಮೇಲೆ ಪ್ರಭಾವ ಬೀರುತ್ತದೆ. ಕನ್ನಡ ಸಾಹಿತ್ಯದಲ್ಲಿ ಕಥೆ ಕಾದಂಬರಿಗಳು ಸಾಮಾನ್ಯವಾಗಿ ಐತಿಹ್ಯದ ಹಿನ್ನೆಲೆಯಲ್ಲಿ ರಚನೆಯಾಗಿರುವುದನ್ನು ಕಾಣಬಹುದಾಗಿದೆ. ಐತಿಹಾಸಿಕ ಕಾದಂಬರಿಗಳಲ್ಲಿ ಘಟನೆಗಳು, ವ್ಯಕ್ತಿಯ ಪಾತ್ರಗಳು, ನೈಜ ಘಟನೆಗಳ ಸುತ್ತ ಕಾದಂಬರಿಕಾರರು ರಂಜನೀಯ ಅಂಶಗಳಿಗೆ ಮೆರಗು ನೀಡಿದ್ದಾರೆ.

ಐತಿಹ್ಯಕಾರನು ನೈಜ ಅಂಶಗಳನ್ನು ಮತ್ತು ಘಟನೆಗಳನ್ನು ತನ್ನ ಶೈಲಿಯಲ್ಲಿಯೇ ತನ್ನ ಕಾಲ್ಪನಿಕ ದೃಷ್ಟಿಕೋನದಲ್ಲಿ ಕಾದಂಬರಿಯ ಐತಿಹ್ಯವನ್ನು ದಾಟಿ ಮುಂದೆ ಹೋಗಿದೆ ಎಂದು ಹೇಳಬಹುದು.

ಐತಿಹ್ಯಗಳು ಜನಪದ ಸಾಹಿತ್ಯ ಪ್ರಕಾರಗಳಲ್ಲಿ ತನ್ನದೇ ಆದ ವೈಶಿಷ್ಟ್ಯವನ್ನು ಪಡೆದುಕೊಂಡಿದೆ. "ಅಂದರೆ ವಾಸ್ತವಾಗಿ ನಡೆದ ಘಟನೆಯನ್ನು ನಿರೂಪಕರು ಕೆಲವು ಕುರುಹುಗಳನ್ನು ಕಾಣುತ್ತಾರೆ. ಯಾವುದೇ ಒಂದು ಸ್ಥಳ, ವಸ್ತು, ಘಟನೆಗೆ ಸಂಬಂಧಪಟ್ಟಂತೆ ಅನೇಕ ಅವಶೇಷಗಳು ಇವೆ. ಅಂದರೆ ಯಾವುದೇ ಒಂದು ಹೆಬ್ಬಂಡೆಯಾಗಿರಬಹುದು. ಅದರಲ್ಲಿ ಗುಡ್ಡ, ಗವಿ ಮುಂತಾದವುಗಳು ಹಬ್ಬಹರಿದಿನಗಳು, ಆಚಾರ ವಿಚಾರಗಳು, ನಂಬಿಕೆಗಳು, ಅದೇ ರೀತಿ ಕೆಲವು ವೀರ ಪುರುಷರು ಬಳಕೆ ಮಾಡುತ್ತಿದ್ದ ಆಯುಧಗಳು ಉಡುಗೆತೊಡುಗೆಗಳಿಗೆ ಸಂಬಂಧಿಸಿದಂತೆ ಈ ಘಟನೆಗಳಿಗೆ ಜನಪದರು ಐತಿಹ್ಯಗಳನ್ನು ಬಳಕೆ ಮಾಡುತ್ತಿದ್ದರು."[೧೩]

ಜನಪದರು ಮೌಖಿಕವಾಗಿ ಕೆಲವು ಘಟನೆಗಳನ್ನು ತೆಗೆದುಕೊಂಡು ತಮ್ಮದೇ ಆದ ರೀತಿಯಲ್ಲಿ ವಸ್ತುವನ್ನು ಬಳಸಿಕೊಂಡು ಐತಿಹ್ಯಗಳನ್ನು ರಚನೆ ಮಾಡುತ್ತಾರೆ. ಒಂದೊಂದು ಪ್ರದೇಶಕ್ಕೂ ಒಂದೊಂದು ರೀತಿಯಲ್ಲಿ ಐತಿಹ್ಯಗಳು ಹುಟ್ಟಿಕೊಳ್ಳುತ್ತವೆ.

"ಐತಿಹ್ಯಗಳು ಸಹಜವಾಗಿ ಕುರುಹುಗಳಿಂದ-ಗುರುತುಗಳಿಂದ ಬೆಟ್ಟು ಮಾಡಿ ತೋರಿಸುವ ರೀತಿಯಲ್ಲಿ ಇರುತ್ತವೆ. ಆಮೇಲೆ ಅವುಗಳಿಗೆ ಸರಿಹೊಂದುವಂತೆ ಐತಿಹ್ಯಗಳು ಹುಟ್ಟಿಕೊಳ್ಳುವುದೂ ಸ್ವಾಭಾವಿಕ. ಒಬ್ಬ ಪ್ರತಿಭಾನ್ವಿತ ವ್ಯಕ್ತಿ ಒಂದು ಘಟನೆ ವಸ್ತುವಿಗೆ ಸಂಬಂಧಿಸಿದಂತೆ ಕಥೆಯನ್ನು ರಂಗು ರಂಗಾಗಿ ಹೇಳುವುದು ಸಹಜ. ಅವನು ಈ ಘಟನೆಯೊಂದರ ವಿವರಣೆ ನೀಡುವುದಕ್ಕೂ ಸಾಧ್ಯತೆಗಳಿವೆ. ಹೀಗೆ ಐತಿಹ್ಯವು ತನ್ನದೇ ಆದ ಸ್ವರೂಪವನ್ನು ಪಡೆದುಕೊಂಡಿದೆ."[೧೪]

ಈಗಾಗಲೇ ಸ್ಪಷ್ಟಪಡಿಸಿದಂತೆ ಚರಿತ್ರೆಗೂ ಐತಿಹ್ಯಕ್ಕೂ ಇರುವ ಸಂಬಂಧವನ್ನು ಖಚಿತವಾಗಿ ಗುರುತಿಸಲಾಗದು. ಭೌತಿಕ ಆಧಾರವೊಂದನ್ನು ಆಧರಿಸಿ ಹುಟ್ಟಿದ ಕಥನಗಳು ಐತಿಹ್ಯಗಳಾದರೆ ಆದೇ ಆಧಾರವನ್ನು ಆದರಿಸಿದ ವಸ್ತುನಿಷ್ಠ ವೈಜ್ಞಾನಿಕ ನಿರೂಪಣೆ ಚರಿತ್ರೆಗಳಾಗಿವೆ. ಇಲ್ಲಿ ಇನ್ನೊಂದು ಅಂಶವನ್ನು ಸ್ಪಷ್ಟಪಡಿಸಿಕೊಳ್ಳಬೇಕು. ಅದೆಂದರೆ ಐತಿಹ್ಯಗಳ ಶೈಕ್ಷಣಿಕ ಪ್ರವೃತ್ತಿ ಐತಿಹ್ಯಗಳಲ್ಲಿ ಗಾಢವಾಗಿ ಹುದುಗಿರುವ ಅದರ ಶೈಕ್ಷಣಿಕ ಪ್ರವೃತ್ತಿಯನ್ನು ಮನರಂಜನಾ ಉದ್ದೇಶದಿಂದ ಬೇರ್ಪಡಿಸಿದೆ.

ಜನರಿಗೆ ತಿಳುವಳಿಕೆ ನೀಡಬಯಸುವ ಐತಿಹ್ಯದ ಶೈಕ್ಷಣಿಕ ಪ್ರವೃತ್ತಿಯೇ ಅದರ ವಿವರಣಾತ್ಮಕ ಭಾಗವನ್ನು ನಿಯಂತ್ರಿಸಿದೆ. ಅಂದರೆ ಐತಿಹ್ಯಗಳು ಸತ್ಯವೆಂಬ ಭಾವದಲ್ಲಿ ಸಂಕ್ಷಿಪ್ತವಾಗಿರುತ್ತದೆ. ಇಲ್ಲಿಯೇ ಐತಿಹ್ಯಗಳು ಜನಪದ ಕಥೆಗಳಿಗಿಂತ ಭಿನ್ನವಾಗುತ್ತದೆ. ಒಬ್ಬಾತನು ಸತ್ಯ ಅಥವಾ ನಿಜವನ್ನು ನಿರೂಪಿಸುವ ಬಗೆಯಲ್ಲಿಯೇ ಚರಿತ್ರೆ ಅಥವಾ ಐತಿಹ್ಯ ಅಥವಾ ಕಥೆ ಪುರಾಣ ಸೃಷ್ಟಿಯಾಗುತ್ತದೆ. ಭೌತಿಕ ಆಧಾರ ಅಥವಾ ಸತ್ಯಗಳೆಲ್ಲವೂ ಐತಿಹ್ಯಕ್ಕೆ ವಸ್ತುವಾಗಲಾರದು. ಅವು ಸಾಮಾನ್ಯ ಜೀವನ ಮಟ್ಟಕ್ಕಿಂತ ಭಿನ್ನವಾಗಿದ್ದು ವಿಶಿಷ್ಟವಾಗಿರಬೇಕು ಅಥವಾ ಅಸಾಮಾನ್ಯವಾಗಿರಬೇಕು ಸಾಮಾನ್ಯ ವಿಷಯಗಳಿಗಿಂತ ಅಸಾಮಾನ್ಯವಾಗಿರುವುದು ಯಾವುದೇ ಆದರೂ ತನ್ನ ಇರುವಿಕೆಯ ಸ್ಥಿತಿಯಲ್ಲಿಯೇ ಜನರ ಮೇಲೆ ಪ್ರಭಾವ ಬೀರಲು ಸಮರ್ಥವಾಗಿರುತ್ತದೆ. ವ್ಯಕ್ತಿ, ಸ್ಥಳ ಮತ್ತು ಕಾಲವೆಂಬ ಮೂರು ವಿಂಗಡಣೆಗಳಲ್ಲಿ ಈ ಅಸಮಾನ್ಯತ್ವವನ್ನು  ಗುರುತಿಸಲು ಸಾಧ್ಯವಿದೆ. ಊರಿಗೆಲ್ಲ ದೊಡ್ಡದಾಗಿರುವಬೆಟ್ಟ ಅಥವಾ ಕೆರೆ ಸಾಮಾನ್ಯರಿಗಿಂತ ವಿಶೇಷ ಶಕ್ತಿವಂತನಾಗಿದ್ದ ಅಥವಾ ಪ್ರಭಾವಶಾಲಿ ವ್ಯಕ್ತಿ ಸಾಮಾನ್ಯ ಜೀವನದಲ್ಲಿ ಸೇರ್ಪಡೆಯಾಗಿರುವ ಕಾಲಕ್ಕಿಂತ ಬೇರೆಯಾದ ಅರ್ಥಪೂರ್ಣವಾದ ಕಾಲ ಇವು ಮೂರು ಐಕ್ಯಹೊಂದಿ ಅಥವಾ ಪ್ರತ್ಯೇಕವಾಗಿ ಐತಿಹ್ಯದಲ್ಲಿ ಸ್ಥಾನ ಪಡೆದಿರುತ್ತದೆ.

ಚಾರಿತ್ರಿಕವೆಂದು ಜನ ಸಾಮಾನ್ಯವಾಗಿ ಅಂಗೀಕರಿಸಿದ್ದು ಪರಂಪರಾಗತವಾದ ವಿಶೇಷ ಘಟನೆ, ಇಲ್ಲಿನ ಸಂಗತಿಗಳನ್ನು ಇತಿಹಾಸದ ಸಂಗತಿಗಳಂತೆ ತಾಳೆ ನೋಡಲು ಆಗುವುದಿಲ್ಲವಾದರೂ ವಸ್ತು ಸಾಕಷ್ಟು ಪ್ರಾಚೀನ ಮೂಲದ್ದಾಗಿರುತ್ತದೆ. ಪ್ರಾಚೀನ ಕಾಲದ ಚಾರಿತ್ರಿಕ ಸಂಗತಿಯೊಂದು ಕ್ರಮೇಣ ಅಪೂರ್ವವೂ ಅದ್ಭುತವೂ ಆದ ಸನ್ನಿವೇಶಗಳನ್ನು ಒಳಗೊಳ್ಳುತ್ತ ತಲೆಮಾರುಗಳ ಮೂಲಕ ಹರಿದು ಬರುವಾಗ ಐತಿಹ್ಯ ರೂಪುಗೊಂಡಿರಬೇಕೆಂದು ತೋರುತ್ತದೆ. ಐತಿಹ್ಯದಲ್ಲಿ ಚಾರಿತ್ರಿಕ ಅಂಶ ಎಷ್ಟು ಕಾಲ್ಪನಿಕ ಅಂಶ ಎಷ್ಟು? ಎಂದು ಗೆರೆಯಳೆದು ತೋರಿಸಲು ಸಾಧ್ಯವಾಗದು. "ಐತಿಹ್ಯಗಳು ವ್ಯಕ್ತಿಗಳ ಸ್ಥಳಗಳು ಅಥವಾ ಘಟನೆಗಳ ವಾಸ್ತವ ಅಥವಾ ತೋರಿಕೆಯ ನಂಬಿಕೆಯನ್ನೊಳಗೊಂಡ ಕಥನಗಳು ಇವು ನಡೆದ ಘಟನೆಗಳ ಪಳೆಯುಳಿಕೆಗಳೆನ್ನಬಹುದು ಮತ್ತು ಹೇಳುವವರ ನಂಬಿಕೆಯಂತೆ ಉಳಿದುಬಂದಿವೆ."[೧೫] ಗೊತ್ತಾದ ಸ್ಥಳಗಳಿಗೆ ಸಂಬಂಧಿಸಿದವು ಆದರೆ ಬೇರೆ ಬೇರೆ ಸ್ಥಳಗಳಲ್ಲಿ ಇಂಥದೇ ರೀತಿಯ ಕಥನ ನಂಬಿಕೆ ಕಂಡುಬಂದಲ್ಲಿ ಆಶ್ಚರ್ಯ ಪಡಬೇಕಾದುದಿಲ್ಲ.

ಮೂಲತಃ ಲೆಜೆಂಡ್ ಪದ ಧಾರ್ಮಿಕ ರೀತಿಯ ಕಥನವೊಂದಕ್ಕೆ ಅನ್ವಯಿಸುತ್ತಿದ್ದು ಆಮೇಲೆ ಚಾರಿತ್ರಿಕ ಆಧಾರವಿರದಿದ್ದರೂ ಜನಾಧರಣೀಯ ಸತ್ಯವಾಗಿ ತಲೆಮಾರಿನಿಂದ ತಲೆಮಾರಿಗೆ ಬಂದಿರುವ ಕಥೆಗೂ ಬಳಕೆಯಾಯಿತು. ಪ್ರಥಮ ಹಂತದಲ್ಲಿ ಈ ಪದ ಸಾಧು

ಜೀವನಕ್ಕೆ ಸಂಬಂಧಿಸಿದ ಕಥೆಗಳನ್ನು ಸೂಚಿಸುತ್ತಿದ್ದಂತೆ ತೋರುತ್ತದೆ. ಉದಾ: ಜಾಕಬ್‌ಡೇವರಾಗಿನ ಅವರ ಗೋಲ್ಡನ್ ಲೆಜೆಂಡ್.

ಸಾಧು ಕಥೆಗಳ ಸಂಗ್ರಹ ಇಂಗ್ಲೀಷ್ ಭಾಷಾಂತರ ಕ್ರಿ.ಶ ೧೪೮೩ ರಲ್ಲಿ ಪ್ರಕಟವಾಯಿತು. "ಲೆಜೆಂಡ್ ಎಂಬ ಮಧ್ಯಕಾಲೀನ ಲ್ಯಾಟಿನ್‌ನ ಲೆಜೆಂಡಾ ಎಂಬುದರಿಂದ ಆರಾಧನಾ ಮಂದಿರಗಳಲ್ಲಿ ಪಠನೆಗಳಿಗಾಗಿ ಉಪಯೋಗಿಸುತ್ತಿದ್ದ ಬೈಬಲ್ಲಿನಿಂದ ಮತ್ತು ಸಾಧು ಜೀವನದಿಂದ ತೆಗೆದ ಭಾಗಗಳಿಗೆ ಈ ಪದವನ್ನು ಬಳಸಲಾಯಿತು ಪಾಶ್ಚಾತ್ಯ ಸಂಸ್ಕೃತಿಯಲ್ಲಿನ ಕ್ರೈಸ್ತ ಸಾಧುಗಳನ್ನು ಕುರಿತ ಐತಿಹ್ಯಗಳನ್ನು ನೋಡಿಯೇ ಯುರೋಪಿನ ಕೆಲವು ಲೇಖಕರು ಲೆಜೆಂಡ್ ಪದವನ್ನು ಸಾಧು ಐತಿಹ್ಯಕ್ಕೆ ನಿಶ್ಚಿತಗೊಳಿಸಿದ ಹಾಗೆ ಕಾಣುತ್ತದೆ."[೧೬] ಇತರ ಮಧ್ಯಯುಗದ ಐತಿಹ್ಯಗಳಲ್ಲಿ ಇತಿಹಾಸ ಮತ್ತು ನೀತಿ ಕಥೆಗಳು ಬಿಡಿಸಲಾಗದ ರೀತಿಯಲ್ಲಿ ಸೇರಿಕೊಂಡಿರುವುದನ್ನು ಕಾಣಬಹುದು.

"ಇತಿಹಾಸದ ಬರವಣಿಗೆ ಹೆಚ್ಚು ವ್ಯವಸ್ಥಿತವಾಗಿ ಬಂದು ತನ್ನ ವಸ್ತುವಿನ ನಿಜತ್ವವನ್ನು ದೃಢಪಡಿಸಿಕೊಂಡ ಮೇಲೆ ಉಳಿದ ನೀತಿ ಕಥೆಗಳು ಮತ್ತು ನಂಬಲಾಗದ ಕಥೆಗಳು ಐತಿಹ್ಯದ ಕ್ಷೇತ್ರಕ್ಕೆ ಬಂದಿವೆಯೆಂದು ಕೆಲವರ ಅಭಿಪ್ರಾಯ ಆಧುನಿಕ ಬಳಕೆಯಲ್ಲಿ ಈ ಪದಕ್ಕೆ ಪ್ರಧಾನವಾಗಿ ಎರಡು ಅರ್ಥವಿದೆ. ಒಂದು ನಾಣ್ಯ, ಸ್ಮಾರಕ ಇತ್ಯಾದಿಗಳ ಮೇಲಿನ ಶಾಸನದು ಎಂದು ಗ್ರಹಿಕೆಯಾಗಿರುವ ಬರವಣಿಗೆಯ ಕಥನ"[೧೭] ಕೆಲವು ಆಧುನಿಕ ಲೇಖಕರು ಈರ್ಷೆಯ ಶೈಲಿಯಲ್ಲಿ ಕರೆದಿರುವುದೂ ಉಂಟು.

ಇದರಿಂದಾಗಿ ಅಕ್ಷರಸ್ಥರ ನಡುವೆ ಈ ಪದ ಜಾನಪದಕ್ಕಿಂತ ಭಿನ್ನವಾದ ಪುರಾತನ ಗ್ರಂಥವೊಂದರಿಂದ ಬಂದ ಕಥೆಯೊಂದಕ್ಕೆ ಅನ್ವಯಿಸುತ್ತಿದ್ದಂತೆ ತಿಳಿಯುತ್ತದೆ. ಆದರೆ ಇತ್ತೀಚೆಗೆ ಜಾನಪದ ವಿದ್ವಾಂಸರು ಇದನ್ನು ಕಂಠಸ್ಥವಾಗಿ ಬಂದ ಕಥೆಗಳಿಗೆ ಅನ್ವಯಿಸಿ ಇದರ ಅರ್ಥವನ್ನು ನಿಗಧಿಪಡಿಸಿದ್ದಾರೆ. ಈ ದೃಷ್ಟಿಯಲ್ಲಿ ಐತಿಹ್ಯವೆಂದರೆ ವ್ಯಕ್ತಿ ಸ್ಥಳ ಅಥವಾ ಘಟನೆಯೊಂದನ್ನು ಕುರಿತಂತೆ ಸಾಂಪ್ರದಾಯಿಕ ಮೂಲವಸ್ತುಗಳೊಡನೆ ನಿಜಾಂಶವೊಂದರ ಮೇಲೆ ಆಧಾರಿತವಾಗಿದೆಯೆಂದು ಭಾವಿಸುವ ಕಥನವೇ ಆಗಿದೆ. ಐತಿಹ್ಯಗಳು ಮೊದ ಮೊದಲು ಸಂಕ್ಷಿಪ್ತವೂ ಸರಳವೂ ಆಗಿದ್ದು ಕ್ರಮೇಣ ಉತ್ಪ್ರೇಕ್ಷಿತ ವಿವರಣೆಗಳ ದೀರ್ಘ ಹಾಗೂ ಕಲ್ಪನಾತ್ಮಕ ಕಥೆಗಳಾಗಿ ಬೆಳವಣಿಗೆ ಹೊಂದಿದವು ಮೂಲದಲ್ಲಿ ಇವು ಚಾರಿತ್ರಿಕವೆನಿಸಿದರೂ ಅನಂತರದಲ್ಲಿ ಸಾಂಪ್ರದಾಯಕವೆನಿಸುವವು. ಕೆಲವು ಐತಿಹ್ಯ ಮತ್ತು ಸಾಂಪ್ರದಾಯಗಳನ್ನು ಜೊತೆ ಜೊತೆಯಲ್ಲಿ ಏಕಮಾತ್ರ ಕಥನಾಶಯ ಕಂಡುಬರುತ್ತದೆ.

ವಸ್ತುವಿನದೃಷ್ಟಿಯಿಂದ ೧. ಸೃಷ್ಟಿ ಅಥವಾ ಜಗತ್ತಿನ ಮೂಲವನ್ನು ಕುರಿತಾದ ವಿವರಣಾತ್ಮಕ ಐತಿಹ್ಯಗಳು ೨. ಅತಿಮಾನುಷ ವ್ಯಕ್ತಿಗಳನ್ನು ಕುರಿತ ಐತಿಹ್ಯಗಳು ೩.ಐತಿಹಾಸಿಕ ಅಥವಾ ಮಿಥ್ಯೆತಿಹಾಸಿಕ ಐತಿಹ್ಯಗಳು. "ಸೃಷ್ಟಿ ಕಾರ್ಯದ ಉಗಮ ಭೂಮಿ ರೂಪಿತವಾದ ಬಗ್ಗೆ ಮೊದಲಾದ ವಿಷಯಗಳನ್ನೊಳಗೊಂಡ ಐತಿಹ್ಯಗಳು ಬಹುಮಟ್ಟಿಗೆ ಪುರಾಣದ ಸಂಪರ್ಕವನ್ನು ಪಡೆದಿರುತ್ತದೆ."[೧೮] ಈ ಬಗೆಗಿನ ಕಥೆ'ಗಳು ಜಗತ್ತಿನ ಎಲ್ಲ ಕಡೆಯಲ್ಲೂ ಸಾಕಷ್ಟು ಸಂಖ್ಯೆಯಲ್ಲಿ ದೊರಕುತ್ತದೆ. ಇವುಗಳ ಮೇಲೆ ಆಯಾ ದೇಶದ ಪವಿತ್ರ ಧಾರ್ಮಿಕ ಗ್ರಂಥಗಳು ಪ್ರಭಾವ ಬೀರಿರುವುದನ್ನು ಕಾಣಬಹುದು.

ಜನಪದ ಇನ್ನೂ ನಂಬಿಕೊಂಡಿರುವ ಕಿನ್ನರ ದೆವ್ವ ಪಿಶಾಚಿ ರಾಕ್ಷಸ ಮೊದಲಾದ ಅದ್ಭುತಗಳನ್ನು ಒಳಗೊಂಡಿರುವ ಕಥೆಗಳೇ ಎರಡನೆಯ ವಿಭಾಗದ ಐತಿಹ್ಯಗಳು ಇದರಲ್ಲಿ ಕಿನ್ನರ ಕಥೆಗಳಿಗೂ ಐತಿಹ್ಯಗಳಿಗೂ ಇರುವ ಸಂಬಂಧವನ್ನು ಅವುಗಳಲ್ಲಿರುವ ಸಮಾನಾಂತರವಾದ ಅದ್ಭುತಗಳಿಂದ ಗುರುತಿಸಬಹುದು. ಇನ್ನೂ ಮೂರನೆಯ ವಿಭಾಗದ ಐತಿಹ್ಯಗಳು ಚಾರಿತ್ರಿಕ ಲಕ್ಷಣಗಳನ್ನು ಆಶ್ರಯಿಸಿರುವ ರಚನೆಗಳನ್ನು ತಿಳಿಸುತ್ತದೆ. "ಐತಿಹ್ಯದ ವಸ್ತು ಸಮಗ್ರವಾಗಿ ಕಲ್ಪನಾತ್ಮಕವೆಂದೂ ಕರೆಯಬೇಕಾಗಿಲ್ಲ ಕಲ್ಪನೆಗೆ ಆಧಾರ ಕೊಡುವ ಸತ್ಯಾಂಶಗಳೂ ಅಲ್ಲಿರುತ್ತವೆ. ಐತಿಹ್ಯಗಳು ಐತಿಹಾಸಿಕ ಗಣ್ಯವ್ಯಕ್ತಿಗಳ ಸುತ್ತ ಗುಂಪುಗೂಡಿ ಬೆಳೆದಿರುವ ಹಾಗೆ ಕಾಣುತ್ತದೆ. ಪುರಾತನ ಐತಿಹಾಸಿಕ ವ್ಯಕ್ತಿ ಕ್ರಮೇಣ ಐತಿಹ್ಯದ ವಸ್ತುವಾಗಿ ಅವನ ಗುಣ ಗೌರವ ವೈಶಿಷ್ಟ್ಯಗಳ ಮೇಲೆ ಐತಿಹ್ಯದ ಕಥೆಗಳು ರೂಪುಗೊಂಡಿರಬೇಕು."[೧೯] ಜನಸಾಮಾನ್ಯರಲ್ಲಿ ಐತಿಹ್ಯವನ್ನು ಇತಿಹಾಸದ ಜೊತೆಗೆ ತಪ್ಪು ಕಲ್ಪಿಸಿಕೊಳ್ಳುವುದೂ ಒಂದು ಸಾಮನ್ಯ ಪ್ರವೃತ್ತಿ ಅಂತೂ ಕಾಲದಿಂದ ಕಾಲಕ್ಕೆ, ನೆನಪಾಗಿ ಉಳಿದುಕೊಂಡಿರುವ ಕೆಲವು ಐತಿಹಾಸಿಕ ಲಕ್ಷಣಗಳನ್ನು ಐತಿಹ್ಯಗಳು ವ್ಯಕ್ತಪಡಿಸುತ್ತವೆ. ಆದರೆ ಕೆಲವು ಸಾರಿ ಇವು ಬ್ರಾಂತಿ ಮೂಲವೂ ಅಸಂಬದ್ದವೂ ಆಗಿರುವುದುಂಟು.

ಉದಾ: ಪೈಡ್, ಪೈಪರ್ ಆಪ್ ಹ್ಯಾಮಲಿನ್ ಎಂವ ಕಿನ್ನರಿ ಜ್ಯೋಗಿಯ ಕಥೆ ವಿವರಣೆಯ ದೃಷ್ಟಿಯಿಂದ ಐತಿಹ್ಯಗಳನ್ನು ಸ್ಥಳೀಯ ಐತಿಹ್ಯ ಮತ್ತು ವಲಸೆಯ ಐತಿಹ್ಯಗಳೆಂದು ಎರಡು ದೊಡ್ಡ ಗುಂಪುಗಳಾಗಿ ವಿಂಗಡಿಸಬಹುದು. ಸ್ಥಳೀಯ ಐತಿಹ್ಯಗಳು ಗೊತ್ತಾದ ಸ್ಥಳವೊಂದಕ್ಕೆ ಸಂಬಂಧಿಸಿದವು ಭೂವಲಯದ ಅಥವಾ ಹೆಸರಿನ ಕೆಲವು ಸ್ಥಳೀಯ ವೈಲಕ್ಷಣಗಳನ್ನು ವಿವರಿಸುವುದಕ್ಕಾಗಿಯೇ ಸ್ಥಳೀಯ ಸಂಪ್ರದಾಯದ ಕಥೆಯೊಂದನ್ನು ಹೇಳುವುದಕ್ಕಾಗಿಯೇ ಅವು ಸೃಷ್ಟಿಯಾಗುತ್ತದೆ. ಸೂಕ್ಷ್ಮವಾಗಿ ಹೇಳುವುದಾದರೆ ಸ್ಥಳೀಯ ಐತಿಹ್ಯ ಚಿಕ್ಕದಾದರೂ ಘಟನಾತ್ಮಕವಾದುದು. ವಿವರಣಾತ್ಮಕವಾದುದು ಇದರ ಕ್ಷೇತ್ರ ತುಂಬ

ಪರಿಮಿತ ಬಹು ಹಿಂದಿನ ಸಂಪ್ರದಾಯಗಳನ್ನು ನೀತಿ ಪದ್ದತಿಗಳನ್ನು ಹೊಂದಿ ಪುರಾತತ್ವದ ಸೂಚಿಯಾಗಿರುತ್ತದೆ. ಸಾಮಾನ್ಯವಾಗಿ ಹರ್ಷಾಂತರವಾದರೂ ದುಃಖಾಂತರವಾಗಿಯೂ ಕೊನೆಗೊಳ್ಳುವ ಐತಿಹ್ಯಗಳು ಹಲವಾರಿವೆ. ಇವುಗಳ ಇನ್ನೊಂದು ಗುಣಬೋಧ ಪರತೆ ಮತ್ತು ನೀತಿಪರತೆ, ಭೂತಪ್ರೇತ ಮೊದಲಾದವುಗಳಲ್ಲಿನ ನಂಬಿಕೆ ಇವುಗಳ ಮತ್ತೊಂದು ಲಕ್ಷಣ ಸ್ಥಳೀಯ ಐತಿಹ್ಯಗಳು ವಲಸೆ ಹೋಗುವುದಿಲ್ಲ. ಅವು ಸಂಕ್ಷಿಪ್ತವಾಗಿದ್ದು ಕೆಲವು ಆಶಯಗಳನ್ನು ಒಳಗೊಂಡಿರುತ್ತವೆ. ಈ ಪರಿಮಿತ ಆಶಯಗಳೇ ಯಾವಾಗಲೂ ಆವರ್ತನಗೊಳ್ಳುತ್ತಿರುತ್ತವೆ.

ಸ್ಥಳೀಯ ಐತಿಹ್ಯಗಳಲ್ಲಿ ಹಲವಾರು ಪ್ರಕಾರಗಳಿವೆ. ಮುಖ್ಯವಾದವುಗಳನ್ನು ಮಾತ್ರ ಇಲ್ಲಿ ಹೆಸರಿಸಲಾಗಿದೆ. ಜಗತ್ತಿನಾದ್ಯಂತ ಕಂಡುಬರುವ ಇಂಥಹದೊಂದು ಪ್ರಕಾರವೆಂದರೆ ಪ್ರವಾಹ ಐತಿಹ್ಯ ಕೆರೆ, ಕೊಳ, ಸರೋವರಗಳು ಇರುವ ಕಡೆಯಲ್ಲಿ ಈ ರೀತಿಯ ಐತಿಹ್ಯಗಳಾಗಿ ಪ್ರಚಲಿತವಾಗಿವೆ. ಇವುಗಳ ಬಗ್ಗೆ ಆಳವನ್ನು ಕಂಡರಿಯಬೇಕೆಂದು ಹೊರಟರೆ ಆಪತ್ತು ತಪ್ಪಿದ್ದಲ್ಲವೆಂದು ನಂಬಿಕೆಯಿದೆ. ಕೆರೆ ಅಥವಾ ಸರೋವರದ ಮಧ್ಯಭಾಗದಲ್ಲಿ ಭೂಭಾಗವೊಂದು ಇದ್ದು ಅಲ್ಲಿಯ ನಿವಾಸಿಗಳ ನಾಸ್ತಿಕತೆಯಿಂದಾಗಿ ಪ್ರವಾಹ ಬಂದು ಮುಳುಗಿ ಹೋಯಿತೆಂದು ಕಥೆಯುಂಟು. ಈ ಬಗೆಯ ಐತಿಹ್ಯಗಳಲ್ಲಿ ಪ್ರಮುಖವಾದುದು ನೋವು ಮತ್ತು ಅವನ ದೋಣಿಯ ಕಥೆ. ಇದಲ್ಲದೆ ಆಲ್ಬನ್‌ಲೇಕ್ ಐತಿಹ್ಯವನ್ನು ತೆಗೆದುಕೊಳ್ಳಬಹುದು. ಆಲ್ಬಲಾಂಗಾ ಎಂಬುವನೊಬ್ಬ ಮಾನವ ರೂಪದಲ್ಲಿ ದೇವತೆಯನ್ನು ನಿರ್ಮಿಸಿ ಜುಪಿಟರ್ ದೇವತೆಯ ಗುಡುಗು ಮಿಂಚುಗಳನ್ನು ಅಣಕಿಸಿದಂತೆ ಈ ಇದು ಮೂಲತಃ ಐತಿಹ್ಯ ರೂಪದಲ್ಲಿದ್ದು ಈಗ ರೂಪಾಂತರಗೊಂಡು ಪುರಾಣವಾಗಿದೆ ಎಂದು ಅಭಿಪ್ರಾಯವೊಂದಿದೆ. ಇದರಲ್ಲಿ ಐತಿಹ್ಯದ ಅಂಶವನ್ನು ಗುರುತಿಸಬಹುದು.

ಜಾನಪದ ಸಂಗ್ರಹ ಅಧ್ಯಯನಗಳಿಗೆ ಜಗತ್ತಿನಾದ್ಯಂತ ಈಗ ಹೊಸ ಚಾಲನೆ ದೊರೆತಿದೆ. ಇಂತಹ ಅಧ್ಯಯನಗಳಲ್ಲಿ ಐತಿಹ್ಯಗಳು ಇವೆ. ರಿಚರ್ಡ್ ಡಾರ್ಸನ್, ಸ್ಮಿಥ್ ಥಾಂಪ್ಸನ್, ಆರ್.ಎಸ್.ಬಾಗ್ಸ್, ಅನಾಆಂಟೆ, ಆಲನ್‌ಡೆಂಡ, ಮುಂತಾದ ಪಾಶ್ಚಿಮಾತ್ಯ ವಿದ್ವಾಂಸರು ತಮ್ಮ ಜಾನಪದ ಅಧ್ಯಯನಗಳಲ್ಲಿ ಲೆಜೆಂಡ್‌ಗಳನ್ನು ಸ್ಪರ್ಶಿಸಿದ್ದಾರೆ. ಭಾರತದ ದೇಶದಲ್ಲಿ ಐತಿಹ್ಯಗಳ ಕುರಿತಂತೆ ವ್ಯಾಪಕವಾದ ಆಧ್ಯಯನ ನಡೆಸಿದ್ದಾರೆ. ಎ.ಕೆ.ಘೋಷ್‌ರವರ "ಲೆಜೆಂಡ್ಸ್ ಫ್ರಂ ಇಂಡಿಯನ್ ಹಿಸ್ಟರಿ" ಮುಂತಾದ ಬೆರಳಣಿಕೆಯ ಕೃತಿಗಳಷ್ಟು ಇಲ್ಲಿ ಉಲ್ಲೇಖತವಾಗಿವೆ.

ಐತಿಹ್ಯಗಳ ವಸ್ತುತಂತ್ರ ಸ್ವರೂಪ ಮತ್ತು ಶೈಲಿಗಳು ತುಂಬ ಸಂಕೀರ್ಣವಾಗಿರುವುದರಿಂದ ಅವುಗಳನ್ನು ಕರಾರುವಕ್ಕಾಗಿ ವಿಭಜಿಸಲು ಸಾಧ್ಯವಿಲ್ಲ. "ಎಷ್ಟೋ

ಬಾರಿ ಐತಿಹ್ಯಗಳಿಗೆ ಒಂದು ನಿರ್ದಿಷ್ಟ ಪಠ್ಯವೇ ಇಲ್ಲದಿರುವುದರಿಂದ ಈ ಕೆಲಸಕ್ಕೆ ಇನ್ನಷ್ಟು ತೊಡಕುಂಟಾಗಿದೆ. 'ಪಾಶ್ಚಾತ್ಯ ವಿದ್ವಾಂಸರಾದ ಗ್ರೀಮ್ ಸಹೋದರರು ಉಪಲಬ್ದ ಐತಿಹ್ಯಗಳನ್ನು ಮೂರು ರೀತಿಯಿಂದ ವಿಭಜಿಸಿದ್ದಾರೆ.'

೧. ಸ್ಥಳೀಯ ಐತಿಹ್ಯಗಳು

೨. ವಿವರಣಾತ್ಮಕ ಐತಿಹ್ಯಗಳು

೩. ಚಾರಿತ್ರಿಕ ಐತಿಹ್ಯಗಳು

ಈ ವರ್ಗೀಕರಣ ತುಂಬ ಸ್ಥೂಲವಾಗಿರುವುದು ಮೇಲ್ನೋಟಕ್ಕೆ ವೇದ್ಯವಾಗುವ ವಿಚಾರ."[೨೦] ಇದರಲ್ಲಿ ಮೊದಲಿನ ವರ್ಗೀಕರಣವೇನೋ ಸಮರ್ಪಕವಾಗಿದೆ. ಆದರೆ ರಾಷ್ಟ್ರ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ಮನ್ನಣೆ ಪಡೆದ ಐತಿಹ್ಯಗಳನ್ನು ಮುಂದಿನಂತೆ ವಿಭಜಿಸಲಾಗಿದೆ. ಮೊದಲ ವಿಭಜನೆಯ ಪ್ರಕಾರ,

೧. ವಿವರಣಾತ್ಮಕ ಮತ್ತು ಅಂತಿಮಗತಿ ಶಾಸ್ತ್ರದ ಐತಿಹ್ಯಗಳು

೨. ಚಾರಿತ್ರಿಕ ಐತಿಹ್ಯಗಳು ಮತ್ತು ನಾಗರೀಕತೆಯ ಚರಿತ್ರಗೆ ಸಂಬಂಧಿಸಿದ ಐತಿಹ್ಯಗಳು

೩. ಅತಿಮಾನುಷ ಶಕ್ತಿಗಳ ಅಥವಾ ಪೌರಾಣಿಕ ಐತಿಹ್ಯಗಳು

೪. ಧಾರ್ಮಿಕ ಐತಿಹ್ಯಗಳು ಅಥವಾ ದೇವರುಗಳ ಮತ್ತು ನಾಯಕರುಗಳ ಪುರಾಣಗಳು

ದಕ್ಷಿಣ ಕನ್ನಡ ಜಿಲ್ಲೆಯ ಐತಿಹ್ಯಗಳ ಕುರಿತು ವಿಶ್ಲೇಷಣಾತ್ಮಕ ಪ್ರಬಂಧ ಬರೆದ ತಾಳ್ತಜೆ ವಸಂತಕುಮಾರ ಅವರು ರಿಚರ್ಡ್ ಎಂ ಡಾರ್ಸನ್‌ರ ವರ್ಗೀಕರಣವನ್ನೇ ಆಶ್ರಯಿಸಿ ಜಿಲ್ಲೆಯ ಐತಿಹ್ಯಗಳನ್ನು ೩ ರೀತಿಯಿಂದ ವಿಭಜಿಸಿದ್ದಾರೆ.

೧. ವ್ಯಕ್ತಿ ಪ್ರಧಾನ ಐತಿಹ್ಯಗಳು

೨. ಸ್ಥಳ ಪ್ರಧಾನ ಐತಿಹ್ಯಗಳು

೩. ಘಟನಾ ಪ್ರಧಾನ ಐತಿಹ್ಯಗಳು

ವ್ಯಕ್ತಿ ಪ್ರಧಾನ ಐತಿಹ್ಯವನ್ನು ಮತ್ತೆ ಅವರು ಎರಡು ಭಾಗಗಳಾಗಿ ವಿಂಗಡಿಸಿದ್ದಾರೆ.

೧. ಪೌರಾಣಿಕ ವ್ಯಕ್ತಿಗಳು

೨. ಐತಿಹಾಸಿಕ ವ್ಯಕ್ತಿಗಳು ಎಂಬ ಎರಡು ವಿಭಜನೆಯನ್ನು ಕಾಣಬಹುದು.

ಐತಿಹ್ಯಗಳಿಗೆ ಕಾಲ ಸಂಬಂಧಿಯಾದ ಆಯಾಮ ಇರುತ್ತದೆ "ಪುರಾಣ ಮತ್ತು ಐತಿಹ್ಯಗಳು ನಿಜವಾದ ಕಾಲದಲ್ಲಿ ಇರುತ್ತವೆ. ಪುರಾಣಕ್ಕಿಂತ ಮೊದಲು ಕಾಲ ಇರುವುದಿಲ್ಲ. ಪುರಾಣಕಾಲ ಎನ್ನುವುದು ಅತ್ಯಂತ ಪ್ರಾಚೀನ ಕಾಲ್ಪನಿಕ ಕಾಲ. ಐತಿಹ್ಯವು ಮನುಷ್ಯ ಸೃಷ್ಟಿಯ ಬಳಿಕದ

ಕಾಲಕ್ಕೆ ಸೇರಿದ್ದು”[೨೧] ಪುರಾಣಕಾಲದ ಆರಂಭವು ಪಡೆದುಕೊಂಡಿರುವ ಕೊನೆಯಾದರೆ ಐತಿಹ್ಯಕಾಲದ ಕೊನೆಯು ತೆರೆದುಕೊಂಡಿರುವ ಕೊನೆಯಾಗಿದೆ.”

## ಅಡಿ ಟಿಪ್ಪಣಿಗಳು

೧. ವಿಶ್ವಕೋಶ ಮೈಸೂರು ವಿ ವಿ ಐತಿಹ್ಯ ಸಂಪಾದಕರು ಹಾ ಮಾ ನಾಯಕ್, ಪುಟ ಸಂ ೧೮೭

೨. ಡಾ॥ ಎಸ್ ಎಂ ವೃಷಬೇಂದ್ರ ಸ್ವಾಮಿ ಜಾನಪದ ಸಾಹಿತ್ಯ ದರ್ಶನ–೧೫ ಪುಟ ಸಂ ೩೪

೩. ಅದೇ ಪುಟ ಸಂ ೨೭

೪. ಡಾ॥ ಪುರುಷೊತ್ತಮ್ ಬಿಳಿಮಲೆ ಐತಿಹ್ಯ ಸ್ವರೂಪ ಲಕ್ಷಣ ಪ್ರಕಾರಗಳು ಜಾನಪದ ಸಾಹಿತ್ಯ ದರ್ಶನ ಭಾಗ–೧೫ ಪುಟ ಸಂ ೩೦

೫. ಅದೇ ಪುಟ ೩೧

೬. ಹಾ ಮಾ ನಾಯಕ್ (ಪ್ರ ಸಂ) ಕನ್ನಡ ವಿಶ್ವಕೋಶ ಸಂಪುಟ ೩ ಪುಟ ಸಂಖ್ಯೆ ೨೫೭

೭. ಅದೇ ಪುಟ ಸಂಖ್ಯೆ ೨೫೭

೮. ವಸಂತಕುಮಾರ್ ತಾಳ್ತಜೇ ಸಾರಸ ಪುಟ ಸಂ ೧೨೨

೯. ಜೆ.ಎಚ್ ಲಕ್ಕಪ್ಪಗೌಡ (ಸಂ) ಕನ್ನಡ ಪುಸ್ತಕ ಪ್ರಾದೀಪಕಾರ ಬೆಂಗಳೂರು ಪುಟ ಸಂ ೨೭

೧೦. ಅದೇ ಪುಟ ಸಂ ೩೫

೧೧. ಕನ್ನಡ ಜಾನಪದ ವಿಶ್ವಕೋಶ (ಸಂ) ಡಾ॥ ಚಂದ್ರಶೇಖರ್ ಕಂಬಾರ ಕನ್ನಡ ಸಾಹಿತ್ಯ ಪರಿಷತ್ ೧೯೮೫ ಪುಟ ಸಂ ೨೫೦,

೧೨. ದಕ್ಷಿಣ ಕನ್ನಡ ಜಿಲ್ಲೆಯ ಐತಿಹ್ಯಗಳು ಡಾ॥ ಸುಬ್ಬಣ್ಣ ರೈ ಪುಟ ಸಂ ೧೧

೧೩. ಕನ್ನಡ ಸಾಹಿತ್ಯ ಪರಿಷತ್ತು ಕನ್ನಡ ನಿಘಂಟು ಪುಟ ಸಂ ೧೭೬, ೧೨೬

೧೪. ದಕ್ಷಿಣ ಕನ್ನಡ ಜಿಲ್ಲೆಯ ಐತಿಹ್ಯಗಳು, ಪುಟ ಸಂ ೨೫

೧೫. ದಕ್ಷಿಣ ಕನ್ನಡ ಜಿಲ್ಲೆಯ ಐತಿಹ್ಯಗಳು ಪುಟ ಸಂ ೯೦

೧೬. ವಿಶ್ವಕೋಶ ಸಂಪುಟ ೩ ಪುಟ ಸಂ ೨೫೭

೧೭. ಡಾ॥ ಪುರುಷೊತ್ತಮ್ ಬಿಳಿಮಲೆ ಐತಿಹ್ಯ ಸ್ವರೂಪ ಲಕ್ಷಣ ಪ್ರಕಾರಗಳು ಜಾನಪದ ಸಾಹಿತ್ಯ ದರ್ಶನ ಭಾಗ–೧೫ ಪುಟ ಸಂ ೮೦-೮೧

೧೮. ಕನ್ನಡ ವಿಶ್ವಕೋಶ ಸಂಪುಟ ೬ ೧೯೭೧ ಪುಟ ಸಂ ೨೫೭

೧೯. ಅದೇ ಪುಟ ಸಂಖ್ಯೆ ೩೭

೨೦. ಡಾ॥ ಪುರುಷೊತ್ತಮ್ ಬಿಳಿಮಲೆ ಐತಿಹ್ಯ ಸ್ವರೂಪ ಲಕ್ಷಣ ಪ್ರಕಾರಗಳು ಜಾನಪದ ಸಾಹಿತ್ಯ ದರ್ಶನ ಭಾಗ–೧೫ ಪುಟ ಸಂ ೧೦೨

೨೧. ಅದೇ ಪುಟ ಸಂಖ್ಯೆ ೧೦೮

# ಅಧ್ಯಾಯ–೪

## ಪೌರಾಣಿಕ ಐತಿಹ್ಯಗಳು (ಪುರಾಣ ಮೂಲದ ಐತಿಹ್ಯಗಳು)

ಸಾಂಪ್ರದಾಯಕವಾದ ಪುರಾತನ ಕಥೆಗಳು–ಎಂಬ ಅರ್ಥದಲ್ಲಿ 'ಪುರಾಣ' ಶಬ್ದವನ್ನು ಬಳಸುವುದು ರೂಢಿಯಾಗಿದೆ. ಪ್ರಾಚೀನವಾದ ನಂಬಿಕೆಗಳು, "ಆದಿಮ ಜನರ ನಡವಳಿಕೆಗಳು, ಅತಿಮಾನುಷ ಅಮಾನುಷ ಸಂಗತಿಗಳ ಬಗೆಗೆ ಬಹುಹಿಂದಿನ ಕಲ್ಪನೆಗಳು, ಪ್ರಕೃತಿಯ ಗೋಚರ ಮತ್ತು ಅಗೋಚರ ಶಕ್ತಿಗಳ ಬಗೆಗೆ ಜನಜನಿತವಾಗಿ ಮೂಡಿ ಬಂದಿರುವ ಅಭಿಪ್ರಾಯಗಳು ಇವೆಲ್ಲವನ್ನು ತಿಳಿದುಕೊಳ್ಳುವುದಕ್ಕೆ ಪುರಾಣಗಳು ಪ್ರಮುಖ ಸಾಧನಗಳಾಗಿವೆ."[1] ಜನ ಸಾಮಾನ್ಯರು ಬಹಳ ಹಳೆಯ ಕಾಲದ ಕಟ್ಟುಕತೆ ಅವಲಂಬಿತವಾದುದು. ಸುಳ್ಳಿನ ಕಂತೆ, ಬೇಸರ ತರಿಸುವಂಥದು ಎಂಬ ರೀತಿಯಲ್ಲಿ ಪುರಾಣ ಶಬ್ದವನ್ನು ಬಳಸುವುದುಂಟು. "ಕಾಳಿದಾಸ ಕವಿಯು ತನ್ನ ಮಾಳವಿಕಾಗ್ನಿಮಿತ್ರ ನಾಟಕದಲ್ಲಿ 'ಪುರಾಣಮಿತ್ಯೇವನ ಸಾಧು ಸರ್ವಂ ನ ಚಾಪಿ ಕಾವ್ಯಂ ನವಮಿತ್ಯದವದ್ಯಂ' ಎನ್ನುವಾಗ ಪ್ರಾಚೀನವಾದುದು ಮತ್ತು ವಿನೂತವಾದದು ಎಂಬ ಅರ್ಥಗಳನ್ನು ಉದ್ದೇಶಿಸಿದ್ದನೆಂಬುದು ಸ್ಪಷ್ಟವಾಗುತ್ತದೆ. ದೇವತೆಗಳು ಮತ್ತು ರಾಕ್ಷಸರನ್ನು ಕುರಿತ ಕತೆಗಳು ಎಂಬ ಅರ್ಥದಲ್ಲಿ ಮಹಾಭಾರತವು 'ಪುರಾಣ'ವನ್ನು ಬಳಸಿದೆ."[2] ನಂತರ ಶಿವದೇವಾಲಯದ ಎದುರುಗಡೆ ಒಂದು ಬಂಡೆಯಿದೆ. ರಾಗಿ ಬೀಸುವ ಕಲ್ಲಿನ ಆಕಾರವಾಗಿದೆ.

ಅದನ್ನು ಎತ್ತಲು ಸಾಧ್ಯವಾಗುವುದಿಲ್ಲ ಅದರ ಮೇಲೆ ದಿಕ್ಕುಗಳನ್ನು ಗುರುತಿಸುವ ಕೋನಗಳಿವೆ. ಸುಲಭವಾಗಿ ತಿರುಗಿಸಲು ಸಾಧ್ಯವಿಲ್ಲ. ಕಷ್ಟಪಟ್ಟು ಯಾರಾದರೂ ತಿರುಗಿಸಿದರೆ ಆ ಭಾಗಕ್ಕೆ ಆ ವರ್ಷ ಹೆಚ್ಚಿನ ಮಳೆಯಾಗಿ ಬೆಳಯಾಗುತ್ತದೆಂದು ನಂಬಿದ್ದಾರೆ. ಇದನ್ನು ಈಗಲೂ ನೋಡಬಹುದು ಆದರೆ ಇದನ್ನು ಎತ್ತಿ ಪಕ್ಕಕ್ಕೆ ಇಡಲು ಮಾತ್ರ ಸಾಧ್ಯವಾಗುವುದಿಲ್ಲ. ಅದೂ ಕೂಡ ದಿಕ್ಕುಗಳನ್ನು ತೋರಿಸುವ ದಿಕ್ಸೂಚಿಯಾಗಿದೆ. ಅದನ್ನು ತಿರುಗಿಸಿದ ಕಡೆಯಲ್ಲ ಆ ವರ್ಷ ಯತೇಚ್ಛವಾಗಿ ಮಳೆಯಾಗುವುದು ನಡೆದು ಬಂದಿದೆ. ಇದನ್ನು ದೇವರ ಕಲ್ಲು, ದೇವರು ತಿರುಗಿಸುವ ಕಲ್ಲು ಎಂತಲೂ ಕರೆಯಬಹುದು. ಇದಕ್ಕೆ ಯಾವುದೇ ರೀತಿಯ ಭಕ್ತಿ ಭಾವಗಳು ಸೂಚಿಸಿದ್ದರೂ ಸರಿಯೇ ಅವರ ಭಕ್ತಿಗೆ ಅನುಸಾರವಾಗಿ ಕಾರ್ಯ ನಿರ್ವಹಿಸುತ್ತದೆ ಎಂದು ಹೇಳುತ್ತಾರೆ.

ಪುರಾಣದ ಪ್ರಧಾನ ಸಂಗತಿಗಳು ದೇವತೆಗಳ ಸುತ್ತ ಹೆಣೆಯಲ್ಪಟ್ಟಿವೆ. ಆದಿಮಾನವನ ನಿಸರ್ಗ ನಿಯಮವನ್ನು ವಿವರಿಸಲು ಮಾಡಿದ ಪ್ರಯತ್ನವೇ ಪುರಾಣ, "ಸೂರ್ಯ, ಜಗತ್ತು, ಆಕಾಶ ಮತ್ತು ಮರಣೋತ್ತರ ಜೀವನವೇ ಪುರಾಣಗಳ ಉಗಮದ ಮೂಲ ಪ್ರೇರಣೆಗಳು.

ಪುರಾಣ ಕಥೆಗಳಲ್ಲಿ ಮನುಷ್ಯನ ಸಾಮರ್ಥ್ಯವನ್ನು ಮೀರಿದ ಚಟುವಟಿಕೆಗಳನ್ನು ಕಾಣುತ್ತೇವೆ. ನಿಜ ಜೀವನದಲ್ಲಿ ಮಾಡಲಾಗದ್ದನ್ನು ಮನುಷ್ಯ ಪುರಾಣದಲ್ಲಿ ಸಾಧಿಸಿ ತೋರಿಸುತ್ತಾನೆ."[೩] ಅವನ ಹಗಲುಗನಸುಗಳು ಪುರಾಣದಲ್ಲಿ ನಿಜರೂಪವನ್ನು ತಳೆಯುತ್ತದೆ. ಐತಿಹ್ಯ ಇದಕ್ಕಿಂತ ಭಿನ್ನ ಐತಿಹ್ಯ ಇತಿಹಾಸದ ಅಂಶವನ್ನು ಒಳಗೊಂಡಿದ್ದು ಸ್ಥಳೀಯವಾಗಿರುತ್ತದೆ. ಇದು ಪರಂಪರೆಯಿಂದ ಪರಂಪರೆಗೆ, ಜನಾಂಗದಿಂದ ಜನಾಂಗಕ್ಕೆ ಹರಿದು ಬಂದ ಚರಿತ್ರೆಯಾಗಿದೆ. ಮನುಷ್ಯ ಸಾಮರ್ಥ್ಯದ ಅತ್ಯಧಿಕ ಪ್ರಮಾಣ ಐತಿಹ್ಯದಲ್ಲಿ ವ್ಯಕ್ತಗೊಳ್ಳುತ್ತದೆ. ಪುರಾಣಕ್ಕೆ ಅತಿಮಾನುಷ ಗುಣವಿದ್ದರೆ, ಐತಿಹ್ಯದಲ್ಲಿ ಸಾಹಸದ ಯತ್ನಗಳು ಕಂಡುಬರುತ್ತದೆ.

ಐತಿಹ್ಯ ಇತಿಹಾಸದ ವ್ಯಕ್ತಿ, ಊರು ಮತ್ತು ಘಟನೆಗಳನ್ನು ಅಲೌಕಿಕಗೊಳಿಸುವ ಕಥಾಪ್ರಕ್ರಿಯೆ ಎನ್ನಬಹುದು. ಇಲ್ಲಿ ಪೌರಾಣಿಕ ಅಂಶಗಳನ್ನು ತಮ್ಮ ಸ್ಥಳಕ್ಕೆ ಆರೋಪಿಸಿಕೊಳ್ಳುವ ಮನೋಧರ್ಮ ಕಂಡಬರುತ್ತದೆ. "ಐತಿಹ್ಯ ನಿರ್ದಿಷ್ಟ ಸ್ಥಳವೊಂದಕ್ಕೆ ಗಂಟು ಹಾಕಿಕೊಂಡಿರುತ್ತದೆ. ಅದು ಸ್ಥಳದ ಹೆಸರಿನ ಉಗಮದ ಕಥೆ ಹೇಳುತ್ತದೆ. ಶಿಷ್ಟ ಸಂಸ್ಕೃತಿಯ ಮತ್ತು ಜನಪದ ಸಂಸ್ಕೃತಿಯ ಪುರಾಣಗಳ ನಡುವೆ ಇರುವ ಅಂತರವನ್ನು ಗಮನಿಸುವುದು ಅಗತ್ಯವಾಗಿದೆ. ಶಿಷ್ಟ ಸಂಸ್ಕೃತಿಯ ಪುರಾಣಗಳು ಧಾರ್ಮಿಕವಾದ ಆಲೋಚನೆ ಮತ್ತು ಅಭಿವ್ಯಕ್ತಿಯನ್ನು ಹೊಂದಿರುತ್ತದೆ."[೪] ಅಮೂರ್ತವಾದ ಪರಿಕಲ್ಪನೆಗಳಿಗೆ ಅಲ್ಲಿ ಅವಕಾಶವಿದೆ. ಪರಲೋಕದ ಕಲ್ಪನೆ ಅಲ್ಲಿ ಯಥೇಚ್ಚವಾಗಿ ಬರುತ್ತದೆ.

ಇದು ಜನಪದ ಸಂಸ್ಕೃತಿಯ ಪುರಾಣಗಳು ಸ್ಥಳೀಯ ಗುಣವನ್ನು ಹಾಗೂ ಮಾಹಿತಿಯನ್ನು ಹೊಂದಿರುತ್ತವೆ. ಇಲ್ಲಿ ನಿತ್ಯ ಬದುಕಿನ ವಿವರಗಳು ಜನಪದ ಪುರಾಣಗಳ ಬಹುಪಾಲನ್ನು ಆಕ್ರಮಿಸಿಕೊಂಡಿರುವುದನ್ನು ಕಾಣಬಹುದು. "ಕಣ್ಣಿಗೆ ಕಾಣುವ ಅನುಭವದ ತೆಕ್ಕೆಗೆ ಸಿಗುವ ಲೋಕದ ಬಗ್ಗೆ ಈ ಪುರಾಣಗಳಲ್ಲಿ ಹೆಚ್ಚಿನ ಚಿಂತನ, ಮಂಥನ ನಡೆಯುತ್ತದೆ. ಅದ್ದರಿಂದ ಜನಪದ ಸಂಸ್ಕೃತಿ ಲೌಕಿಕವಾದದ್ದು ಎಂದು ಹೇಳಬಹುದು. ಈ ಎರಡು ಸಂಸ್ಕೃತಿಗಳಲ್ಲಿ ಪರಸ್ಪರ ಕೊಡುವ, ಕೊಳ್ಳುವ ಕ್ರಿಯೆ ಕಾಲಾಂತರದಿಂದ ನಡೆಯುತ್ತಾ ಬಂದಿದೆ."[೫] ಕೆಲವು ಸಲ ಪುರಾಣ ಮೂಲಗಳನ್ನು ಗುರುತಿಸುವಲ್ಲಿ ಗೊಂದಲವೂ ಉಂಟಾಗುತ್ತದೆ. ಇಷ್ಟಾಗಿಯೂ ಪುರಾಣ, ಐತಿಹ್ಯಗಳು ಚರಿತ್ರೆಯ ಅನೇಕ ಸಂಗತಿಗಳನ್ನು ತಿಳಿಸಿಕೊಡುತ್ತದೆ.

ಹರಿಯುವ ನೀರು, ಉರಿಯುವ ಸೂರ್ಯ, ಗಿಡ, ಮರ, ಕಲ್ಲುಗಳಲ್ಲಿ ಚೈತನ್ಯವನ್ನು ಕಂಡು ಮನಷ್ಯ ಅವುಗಳನ್ನು ಆರಾಧಿಸತೊಡಗಿದ. ಆದ್ದರಿಂದ ಗ್ರಾಮದೇವತೆಗಳ ಗರ್ಭಗುಡಿಯಲ್ಲಿರುವ ಉದ್ಭವಮೂರ್ತಿಗಳೆಲ್ಲ ಬಹುಪಾಲು ಶಿಲೆಗಳು, ಹುತ್ತಗಳು, ಶಿಲೆ, ಹುತ್ತ,

ವೃಕ್ಷಗಳನ್ನು ಆರಾಧಿಸುತ್ತಾ ಬಂದ ಮನುಷ್ಯ ಆನಂತರ ಅವುಗಳಿಗೆ ಪುರಾಣ ಕಥೆಗಳನ್ನು ಕಟ್ಟಿರುವ ಸಾಧ್ಯತೆ ಇದೆ. ಆದ್ದರಿಂದ ದೇವತೆಗಳ ಸುತ್ತ ಪುರಾಣ ಕಥೆಗಳ ಜಾಲವನ್ನು ಹರಡಿದ್ದು ನಮ್ಮ ಪೂರ್ವಿಕರ ಆಲೋಚನಾ ಶಕ್ತಿಯಲ್ಲಾದ ಪ್ರಗತಿಯ ಸೂಚಕವೆಂದು ಹೇಳಬಹುದು. ಹೀಗೆ ಉಗಮಗೊಂಡ ಪುರಾಣಗಳು ಸಾಮಾಜಿಕ ಪುರಾಣಗಳಾಗಿ ಪರಿವರ್ತನೆ ಹೊಂದಿ ಸಾಮಾಜಿಕ ನೀತಿ–ನಿಯಮಗಳನ್ನು ಕಾಪಾಡಿಕೊಳ್ಳುವ ಸಾಧನಗಳಾದವು. "ನಿರ್ದಿಷ್ಟ ದೇವತೆ ಇಲ್ಲದಿದ್ದರೆ ಅದಕ್ಕೆ ಸಂಬಂಧಿಸಿದ ಪುರಾಣ ಸೃಷ್ಟಿ ಆಗುವುದಿಲ್ಲ. ಹಾಗೆಯೇ ಒಂದು ಶಿಲೆಯೋ, ಹುತ್ತವೋ, ವೃಕ್ಷವೋ ಇಲ್ಲದಿದ್ದರೆ ದೈವದ ಕಲ್ಪನೆ ವಿಕಾಸ ಹೊಂದುವುದಿಲ್ಲ. ಆದ್ದರಿಂದ ದೈವದ ಕಲ್ಪನೆಯ ಬೆಳವಣಿಗೆಗೆ ಪೀಠಿಕೆಯಂತೆ ಒಂದು ವಸ್ತು ಮೊದಲು ಸ್ಥಾಪನೆ ಆಗಬೇಕು, ಆನಂತರ ದೈವತೆಗೆ ಒಂದು ಪುರಾಣ ಪರಂಪರೆ ದಕ್ಕುತ್ತದೆ."[೬] ಅದರ ಗುಣ ಸ್ವಭಾವಗಳನ್ನು ಚಿತ್ರಿಸುವ ವರ್ಣಮಯ ಪುರಾಣಾವಳಿ ಏರ್ಪಡುತ್ತದೆ.

**ಘಾಟಿ ಸುಬ್ರಮಣ್ಯ**

ಘಾಟಿ ಸುಬ್ರಹ್ಮಣ್ಯ ದೇವಸ್ಥಾನ ಇರುವುದು ಬೆಂಗಳೂರು ಗ್ರಾಮಾಂತರ ಜಿಲ್ಲೆ ದೊಡ್ಡಬಳ್ಳಾಪುರ ತಾಲ್ಲೂಕಿನ ತೂಬೆಗೆರೆ ಗ್ರಾಮದಲ್ಲಿ ಘಾಟಿಸುಬ್ರಮಣ್ಯವು ದೊಡ್ಡಬಳ್ಳಾಪುರ ತಾಲ್ಲೂಕಿನ ಉತ್ತರ ಭಾಗದಲ್ಲಿರುವ ಈ ಕ್ಷೇತ್ರಕ್ಕೆ ವಿಶೇಷ ಬಸ್ಸುಗಳ ಸೌಲಭ್ಯ ಬೆಂಗಳೂರಿನಿಂದ ಇದ್ದು, ರೈಲಿನ ಸೌಲಭ್ಯವು ಸಹ ಇದೆ. ಪ್ರತಿನಿತ್ಯ ಸಾವಿರಾರು ಜನ ಭಕ್ತಾಧಿಗಳು ಘಾಟಿಗೆ ಆಗಮಿಸಿ ಪೂಜೆಯನ್ನು ಸಲ್ಲಿಸಿ, ತಮ್ಮ ಕಷ್ಟಗಳನ್ನು ಪರಿಹರಿಸಿಕೊಳ್ಳುತ್ತಾರೆ. ಘಾಟಿ ಸುಬ್ರಮಣ್ಯ ಕ್ಷೇತ್ರವು ಆರುನೂರು ವರ್ಷಗಳ ಹಿಂದಿನ ಇತಿಹಾಸವನ್ನು ಪಡೆದುಕೊಂಡಿದೆ. ಈ ಕ್ಷೇತ್ರವು ಸಮೃದ್ಧವಾದ ಧಾರ್ಮಿಕ ಪುರಾಣದ ಸಂಗತಿಯೊಂದನ್ನು ಕಥೆಯಾಗಿ ಎಣೆದುಕೊಂಡಿದೆ. ಶಿವಪುರಾಣದ ಕಥೆಯ ತುಣಕೊಂದನ್ನು ತನ್ನ ಹುಟ್ಟಿನ ಹಿನ್ನೆಲೆಯಾಗಿಸಿಕೊಂಡಿರುವ ಘಾಟಿ ಸುಬ್ರಹ್ಮಣ್ಯವು ವಿಜಯನಗರ ಅರಸರ ಆಳ್ವಿಕೆಯಲ್ಲಿ ನಿರ್ಮಾಣಗೊಂಡಿದೆ. ವಿಜಯನಗರ ಅರಸರ ಆಳ್ವಿಕೆಯ ಕಾಲದಲ್ಲಿ ವಿಜಯನಗರದ ಅರಸರು ದಕ್ಷಿಣ ಭಾರತದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ದೇವಾಲಯಗಳ ನಿರ್ಮಾಣಕ್ಕೆ ಪ್ರೋತ್ಸಾಹ ನೀಡಿದರು ಹಾಗಾಗಿ ಅವರು ನಿರ್ಮಾಣ ಮಾಡಿದ ದೇವಾಲಯಗಳು ಇಂದಿಗೂ ದಕ್ಷಿಣ ಭಾರತದಲ್ಲಿ ತುಂಬಾ ಪ್ರಸಿದ್ದಿಯನ್ನು ಪಡೆದಿದ್ದು ಘಾಟಿಯು ಸಹ ಮಹತ್ವವನ್ನು ಪಡೆದಿದೆ. ಕುಕ್ಕೆ ಸುಬ್ರಹ್ಮಣ್ಯದ

ನಂತರ ಅತ್ಯಂತ ಹೆಚ್ಚು ಜನಪ್ರಿಯವಾದ ಸ್ಥಳ ಘಾಟಿ, ಪ್ರತಿನಿತ್ಯ ಸಾವಿರಾರು ಭಕ್ತಿಗಳು ತಮ್ಮ ಇಷ್ಟಾರ್ಥಗಳನ್ನು ಈಡೇರಿಸಿಕೊಡಲು ಇಲ್ಲಿಗೆ ಬರುತ್ತಾರೆ.

ಘೋರ್ಪಡೆ ರಾಜಮನೆತನದ ಬಗ್ಗೆ ಹೆಚ್ಚಿನ ಜನರಿಗೆ ಗೊತ್ತಿಲ್ಲ ಆದರೆ ಅವರ ವಂಶಸ್ಥರು ಇಂದಿಗೂ ಸಂಡೂರು, ಬೆಂಗಳೂರಿನಲ್ಲಿ ವಾಸವಿದ್ದಾರೆ. ಸಂಡೂರಿನ ಘೋರ್ಪಡೆ ರಾಜ ಮನೆತನ, ದಕ್ಷಿಣ ಭಾರತದಲ್ಲಿರುವ ಮರಾಠ ಪರಂಪರೆಯ ಏಕೈಕ ರಾಜಮನೆತನ ಸಂಡೂರಿನಲ್ಲಿ ಅವರು ಪಡೆಯುವ ಜನಗೌರವ ಹಾಗೂ ಜನಪ್ರಿಯತೆ ವಿಶಿಷ್ಟವಾದುದು. ಹಳೆಯ ಅಧಿಕಾರ ಉಳಿದುಕೊಂಡಿಲ್ಲವಾದರೂ, ಅನೇಕ ರೀತಿಗಳಲ್ಲಿ ಅವರ ಗತ್ತು, ಗೌರವ ಇನ್ನೂ ಉಳಿದುಕೊಂಡಿದೆ. ಪರಂಪರೆಯನ್ನು ಮುಂದುವರಿಸಿರುವವರು ಮನೆತನದ ಅಧಿಕಾರ, ಪರಂಪರೆಗಳ ಚುಕ್ಕಾಣಿಯನ್ನು ಘನತೆಯಿಂದ ಉಳಿಸಿಕೊಂಡಿದ್ದಾರೆ. ಮೂಲತಃ ಗಣಿ ಉಧ್ಯಮಿಗಳು ಆಗಿರುವ ಘೋರ್ಪಡೆ ವಂಶದ ಕೊನೆಯ ಕುಡಿ ಕಾರ್ತಿಕೇಯ ಘೋರ್ಪಡೆಯವರು.

ಪುರಾಣಗಳ ಪ್ರಕಾರ, ತಾರಕಾಸುರ ಎಂಬ ರಾಕ್ಷಸನು ಇಲ್ಲಿನ ಜನರಿಗೆ ಕಷ್ಟಗಳನ್ನು ನೀಡುತ್ತಿದ್ದನಂತೆ ದೇವಾನು ದೇವತೆಗಳು ಸುಬ್ರಹ್ಮಣ್ಯ ಸ್ವಾಮಿಯ ಮೊರೆಹೋದರು, ಆಗ ಸುಬ್ರಹ್ಮಣ್ಯನು ಆತನನ್ನು ಇಲ್ಲಿ ಕೊಂದನಂತೆ ಆದ್ದರಿಂದ ಈ ಸ್ಥಳಕ್ಕೆ ಘಾಟಿ ಸುಬ್ರಹ್ಮಣ್ಯ ಎಂದು ಹೆಸರು ಬಂದಿದೆ ಎನ್ನುತ್ತದೆ ಸ್ಥಳ ಪುರಾಣ. ಇಷ್ಟೆ ಅಲ್ಲದೆ ಕುಮಾರಧಾರ ಪುಷ್ಕರಣಿಯಿದೆ ಶ್ರೀ ಕ್ಷೇತ್ರದ ಮಹಿಮೆಯ ಸ್ಥಳವಾಗಿಯು ಪುಣ್ಯಜಲವಾಗಿಯು ಕುಮಾರಧಾರ ಪುಷ್ಕರಣಿಯನ್ನು ಭಕ್ತಾಧಿಗಳು ಕಾಣುತ್ತಾ ಇದರಲ್ಲಿ ಶ್ರೀ ಸ್ವಾಮಿಯವರು ಸ್ನಾನವನ್ನು ಆಚರಿಸುತ್ತಾರೆ ಎಂದು ನಂಬಿಕೆ ಇದೆ. ಅದ್ದರಿಂದ ಇಲ್ಲಿನ ಜಲದಿಂದ ಸ್ನಾನ ಮಾಡಿದರೆ ಚರ್ಮರೋಗವು ನಿವಾರಣೆಯಾಗುತ್ತದೆ ಎಂದು ಸಾವಿರಾರು ಭಕ್ತಾದಿಗಳು ಹೇಳುತ್ತಾರೆ.

ಘಾಟಿ ಸುಬ್ರಮಣ್ಯಕ್ಕೆ ಸಂಬಂದಿಸಿದಂತೆ ಜನಪದರಲ್ಲಿ ರೂಡಿಯಲ್ಲಿರುವ ಪುರಾಣ ಐತಿಹ್ಯವೆಂದರೆ,

ವಿಳ್ಳೇದೆಲೆ ವ್ಯಾಪಾರಿಯೊಬ್ಬ ವ್ಯಾಪಾರದ ನಿಮಿತ್ತ ಪ್ರತಿನಿತ್ಯ ಹೋಗಿ ಬರುವಾಗ ಈಗ ದೇವಸ್ಥಾನವಿರುವ ಸ್ಥಳದಲ್ಲಿ ವಿಶ್ರಮಿಸುತ್ತಿದ್ದನಂತೆ. ಆ ವ್ಯಾಪಾರಿಯು ಪಕ್ಕದಲ್ಲೇ ಇರುವ ಕುಮಾರತೀರ್ಥದ ಬಳಿ ಊಟ ಮಾಡಿ, ನೀರು ಕುಡಿದು (ಆಗ ಕುಮಾರ ತೀರ್ಥ ಕೇವಲ ಒಂದು ಸಣ್ಣ ಕೊಳವಾಗಿತ್ತು) ಬಂದು, ಈಗ ಮೂಲ ವಿಗ್ರಹವಿರುವ ಬಲಭಾಗದಲ್ಲಿ ಏಳು ಹೆಡೆಗಳು ಉದ್ಭವಿಸಿರುವ ಶಿಲೆಯ ಮೇಲೆಯೇ ಮಲಗುತ್ತಿದ್ದನಂತೆ. ಒಮ್ಮೆ ಆತ ಮಲಗಿದ್ದಾಗ ನೆರಳಿನ ಮರದಡಿಯ ಈ ಶಿಲೆಯ ಮೇಲೆ ಭಾರವಾಗಿ ಏಕೆ ಮಲಗಿರುವೆ ಏಳು ಎದ್ದೇಳು

ಎಂಬ ಮಾತುಗಳು ಕೇಳಿತಂತೆ. ಹೀಗೆ ಹಲವು ಬಾರಿ ಪುನರಾವರ್ತನೆಯಾಯಿತು. ಆಗ ಆತ ಇದು ಯಾವುದೋ ದುಷ್ಟಶಕ್ತಿಯಿರಬೇಕು ಎಂದುಕೊಂಡು ಸುಮ್ಮನಾದನಂತೆ.

ಒಂದು ಹಬ್ಬದ ದಿನ ಎಲೆ ಮಾರಿ ಆಯಾಸಗೊಂಡು ಆತ ಅದೇ ಶಿಲೆಯ ಮೇಲೆ ಒಂದು ದಿನ ಮಲಗಿದ್ದಾಗ, ಸುಬ್ರಹ್ಮಣ್ಯ ದೇವರು ಕನಸಿನಲ್ಲಿ ವ್ಯಾಪಾರಿಗೆ ತನ್ನ ಸ್ವರೂಪದಲ್ಲಿ ದರ್ಶನ ನೀಡಿ, ತಾನು ಈ ಶಿಲೆಗೆ ಇಪ್ಪತ್ತು ಜಾನ್ಮಾಂತರದಲ್ಲಿ ಇರುವುದಾಗಿಯೂ ಈ ವಿಷಯವನ್ನು ತನ್ನ ಭಕ್ತನಾದ ಬಳ್ಳಾರಿಯ ಸಂಡೂರಿನ ರಾಜರಿಗೆ ಈ ವಿಷಯ ತಿಳಿಸು, ಅವರು ಇಲ್ಲಿ ಗುಡಿ-ಗೋಪುರ ಕಟ್ಟಿಸುತ್ತಾರೆ.

ನಿನಗೆ ನಾನು ಜೀವನಾಂತ್ಯದಲ್ಲಿ ಮುಕ್ತಿ ನೀಡುವೆ ಎಂದು ಅಣತಿ ನೀಡಿ, ಅದೃಶ್ಯನಾದನಂತೆ ಈ ಸ್ವಪ್ನದಿಂದ ಎಚ್ಚೆತ್ತ ವ್ಯಾಪಾರಿಯು ಎದುರು ಒಬ್ಬ ಬ್ರಾಹ್ಮಣನನ್ನು ಕಂಡು, ಎಲ್ಲ ಕನಸಿನಲ್ಲಿ ನಡೆದ ಸಂದರ್ಭವನ್ನು ಆ ಬ್ರಾಹ್ಮಣನಿಗೆ ತಿಳಿಸದನಂತೆ ಬ್ರಾಹ್ಮಣ ಆ ಶಿಲೆಯ ಬಳಿ ಬಂದಾಗ, ದೇವರು ಕ್ಷಣ ಮಾತ್ರ ಸರ್ಪ ರೂಪದಲ್ಲಿ ಬ್ರಾಹ್ಮಣನಿಗೂ ದರ್ಶನ ನೀಡಿ ಅದೃಶ್ಯವಾಯಿತಂತೆ.

ಆಗ ಬ್ರಾಹ್ಮಣ ಮತ್ತು ವ್ಯಾಪಾರಿ ಇಬ್ಬರೂ ಸೇರಿ ಸಂಡೂರಿಗೆ ಹೋಗಿ ರಾಜರ ದರ್ಶನ ಮಾಡಿ ತಮ್ಮ ಕನಸಿನ ವೃತ್ತಾಂತ ತಿಳಿಸಿದರಂತೆ. ಆದರೆ, ರಾಜನು ತನಗೆ ಹಲವು ರಾಜಕಾರ್ಯಗಳಿದ್ದು, ತಕ್ಷಣವೇ ಅಲ್ಲಿಗೆ ಬರಲಾಗುವುದಿಲ್ಲ, ಅಗತ್ಯವಿದ್ದರೆ ಧನಕನಕ ಸಹಾಯ ಮಾಡುವುದಾಗಿಯೂ, ನೀವೇ ದೇಗುಲ ಕಟ್ಟಿ ಎಂದು ಹೇಳಿದನಂತೆ.

ಇದರಿಂದ ಬೇಸರಗೊಂಡ ವ್ಯಾಪಾರಿ ಮತ್ತು ಬ್ರಾಹ್ಮಣನು, ಮಹಾಸ್ವಾಮಿ ಆ ಭಗವಂತನ ಅಣತಿಯನ್ನು ನಿಮಗೆ ತಿಳಿಸಿದ್ದೇವೆ. ನಮಗೆ ಮನೆಯಲ್ಲಿ ಒಂದು ದಿನ ರಾತ್ರಿ ಉಳಿದುಕೊಳ್ಳಲು ಅವಕಾಶ ನೀಡಿ ಎಂದು ಕೇಳಿಕೊಂಡು. ಅದೇ ದಿನ ರಾತ್ರಿ ರಾಜನ ಸ್ವಪ್ನದಲ್ಲಿ ಉಗ್ರವಾಗಿ ಕಾಣಿಸಿಕೊಂಡು ಸ್ವಾಮಿ ತನ್ನ ಆಜ್ಞೆಯನ್ನು ತಿರಸ್ಕರಿಸಿದ ರಾಜನ ಮೇಲೆ ವ್ಯಗ್ರನಾದನಂತೆ.

ನೀನು ನನ್ನ ಅಣತಿ ತಿರಸ್ಕರಿಸಿರುವ ಫಲವಾಗಿ ನಿನ್ನ ಖಜಾನೆ ಬರಿದಾಗಿ, ನಿನ್ನ ಪುತ್ರ, ಪೌತ್ರ ಕಳತ್ರಾದಿಗಳಿಗೆ ಕಷ್ಟ ಬರಲಿದೆ ಎಂದು ಎಚ್ಚರಿಸಿದನಂತೆ. ಕೂಡಲೇ ನಿದ್ದೆಯಿಂದೆದ್ದ ರಾಜನು ತನ್ನ ತಪ್ಪಿಗೆ ದೇವರ ಕ್ಷಮೆ ಕೋರಿ, ಆ ವ್ಯಾಪಾರಿ ಮತ್ತು ಬ್ರಾಹ್ಮಣನನ್ನು ಹುಡುಕಿ ಕರೆಸಿ ಅವರೊಂದಿಗೇ ಘಾಟಿಯತ್ತ ಪ್ರಯಾಣ ಬೆಳೆಸಿದನಂತೆ. ಆ ಕ್ಷೇತ್ರಕ್ಕೆ ಬಂದು ಮೂಲ ದೇವರ ದರ್ಶನ ಪಡೆದು, ದೇವರ ಅಣತಿಯಂತೆ ಗುಡಿ ಗೋಪುರ ಕಟ್ಟಿಸಿ, ಆ ಬ್ರಾಹ್ಮಣನನ್ನೇ ಪೂಜೆಗೆ ನೇಮಿಸಿದರಂತೆ. ಪೂಜಾದಿಗಳಿಗೆ ಭೂಮಿಯನ್ನು ದಾನವಾಗಿ ನೀಡಿದರಂತೆ.

ಇಂದೂ ಅದೇ ಅರ್ಚಕರ ವಂಶಸ್ಥರು ಇಲ್ಲಿ ಪೂಜೆ ಮುಂದುವರಿಸಿಕೊಂಡು ಬಂದಿದ್ದಾರೆ. ಈ ಸ್ಥಳದಲ್ಲಿ ಮಹಾರಾಜರಿಗೆ ಹುತ್ತದಲ್ಲಿ ದೊರೆತ ಲಕ್ಷ್ಮೀನರಸಿಂಹ ಸಮೇತ ಸ್ವಾಮಿಯು ನೆಲೆಸಿದ್ದಾನೆ.

ಒಮ್ಮೆ ಆತ ಮಲಗಿದ್ದ ದೇವಸ್ಥಾನದ ಮುಂದಿನ ಆದಿಶೇಷಗ ವಿಗ್ರಹ, ಹಿಂದೆ ಇರುವುದು ಸುಬ್ರಹ್ಮಣ್ಯ ಸ್ವಾಮಿ ದೇವಸ್ಥಾನದ ಗೋಪುರ ಮತ್ತು ಪ್ರವೇಶ ದ್ವಾರ.

**ಪುರಾಣದ ಪ್ರಕಾರ**

ದೇವಸ್ಥಾನದ ಪುರಾಣಗಳ ಪ್ರಕಾರ, ಸುಬ್ರಹ್ಮಣ್ಯಸ್ವಾಮಿ ತಾರಕಾಸುರ ಎಂಬ ರಾಕ್ಷಸನನ್ನು ಕೊಲ್ಲಲು ಸರ್ಪದ ರೂಪದಲ್ಲಿ, ಒಂದು ಗುಹೆಯಲ್ಲಿ ಕೂತು ತಪಸ್ಸನ್ನು ಮಾಡಿದ್ದರು. ಈ ಗುಹೆ, ಈಗ ನೆಲೆಸಿರೋ ಘಾಟಿ ಸುಬ್ರಹ್ಮಣ್ಯ ದೇವಸ್ಥಾನದ ಬೆಟ್ಟದ ಸಾಲಿನಲ್ಲಿತ್ತು. 'ಘಾಟ್' ಎಂದರೆ ಹಿಂದಿ ಮತ್ತು ಪರ್ಶಿಯನ್ ಭಾಷೆಯಲ್ಲಿ "ಬೆಟ್ಟದ ಪ್ರದೇಶ" ಎಂದರ್ಥ ಸುಬ್ರಹ್ಮಣ್ಯ ಸ್ವಾಮಿ ಈ ಬೆಟ್ಟದ ಮಧ್ಯೆದಲ್ಲಿ ಕೂತು ತಪಸ್ಸು ಮಾಡಿ ತಾರಕಾಸುರನನ್ನು ಕೊಂದಿದ್ದಕ್ಕೆ, ಈ ದೇವಸ್ಥಾನಕ್ಕೆ ಘಾಟಿ ಸುಬ್ರಹ್ಮಣ್ಯ ಎಂದು ಹೆಸರು ಬಂದಿದೆ ಎಂಬ ನಂಬಿಕೆ ಇದೆ.

ಸುಬ್ರಹ್ಮಣ್ಯಸ್ವಾಮಿ ದೇವರ ದಿವ್ಯ ಅವತಾರಕ್ಕೆ ಸಂಬಂದಿಸಿದಂತೆ ಮತ್ತೊಂದು ಕತೆ ಈ ರೀತಿಯಲ್ಲಿದೆ,

ತಾರಕಾಸುರ ಎಂಬ ರಾಕ್ಷಸನು ತಪಸ್ಸು ಮಾಡಿ ಒಂದು ವರವನ್ನು ಪಡೆದಿದ್ದ. ಶಿವನ ಮಗನನ್ನು ಬಿಟ್ಟು ತನ್ನನ್ನು ಯಾರೂ ವಧಿಸಲು ಸಾಧ್ಯವಿಲ್ಲವೆಂದು. ಅದಲ್ಲದೆ, ಈ ಶಿವನ ಮಗನು, ಮೂರು ಲೋಕಗಳಿಂದಲೂ ಪೂಜಿಸಲ್ಪಡಬೇಕು ಹಾಗೆ, ಅವನು ಬ್ರಹ್ಮಚಾರಿಯೂ ಹಾಗು ಗೃಹಸ್ಥನೂ ಆಗಿರಬೇಕು ಎಂದು. ಶಿವನು ಮದುವೆ ಮಾಡಿಕೊಳ್ಳುವುದು ಅಸಾಧ್ಯ ಎಂದು ತಿಳಿದು, ತಾರಕಾಸುರನು ಈ ರೀತಿಯಾದ ವರವನ್ನು ಕೇಳಿಕೊಂಡಿರುತ್ತಾನೆ.

ಅಂದಿನಿಂದ, ದೇವತೆಗಳ ಮೇಲೆ, ಮನುಷ್ಯರ ಮೇಲೆ ತಾರಕಾಸುರನ ಹಾವಳಿ ಶುರು ಆಗುತ್ತದೆ. ಇದನ್ನು ತಡೆಯಲು, ಶಿವ ಪಾರ್ವತಿ ಇಬ್ಬರು ಕೂತು ಧ್ಯಾನ ಮಾಡಿ ತಮ್ಮ ಶಕ್ತಿಯಿಂದ ಒಂದು ಬೆಂಕಿಯ ಉಂಡೆಯನ್ನು ಸೃಷ್ಟಿ ಮಾಡುತ್ತಾರೆ. ಆ ಬೆಂಕಿಯ ಉಂಡೆಯನ್ನು ಅಗ್ನಿ ದೇವತೆಗೆ ಅರ್ಪಿಸುತ್ತಾರೆ. ಆಗ್ನಿ ದೇವರಿಗೆ ಆ ಬೆಂಕಿ ಉಂಡೆಯ ತಾಪವನ್ನು ತಡೆಯಲು ಆಗದೆ ಕೈ ಬಿಡುತ್ತಾರೆ. ಆ ಬೆಂಕಿ ಉಂಡೆಯ ತಾಪವನ್ನು ಗಂಗೆಯೂ ತಡೆಯಲು ಸಾಧ್ಯವಾಗುವುದಿಲ್ಲ. ಹಾಗಾಗಿ ಪಾರ್ವತಿ ದೇವಿಯು ಆ ಬೆಂಕಿಯ ಉಂಡೆಯನ್ನು

ಒಂದು ಕಾಡಿನಲ್ಲಿರೋ ಕೊಳದಲ್ಲಿ ಹಾಕುತ್ತಾಳೆ. ನಂತರ ಪಾರ್ವತಿ ದೇವಿಯು ಒಂದು ನದಿಯ ಅವತಾರವನ್ನು ತಾಳುತ್ತಾಳೆ. ಆ ಬೆಂಕಿಯ ಉಂಡೆ ಆರು ಮಕ್ಕಳಾಗಿ ಪರಿವರ್ತನೆಗೊಳ್ಳುತ್ತದೆ. ಆ ಆರು ಜನ ಮಕ್ಕಳಿಗೆ ಆರು ಜನ ತಾಯಂದಿರಾಗಿ ಕೃತಿಕೆಯರನ್ನು ಸೃಷ್ಟಿ ಮಾಡುತ್ತಾರೆ. ಆ ಆರು ಜನ ಮಕ್ಕಳು ಕಾರ್ತಿಕೇಯರೆಂದು ಕರೆಸಿಕೊಳ್ಳುತ್ತಾರೆ. ಪಾರ್ವತಿ ದೇವಿ ಆ ಆರು ಜನ ಮಕ್ಕಳನ್ನು ಒಟ್ಟಿಗೆ ತಬ್ಬಿಕೊಂಡಾಗ, ಆರು ಮುಖ, ಒಂದು ದೇಹ ಆಗುತ್ತದೆ, ಹಾಗಾಗಿ ಸುಬ್ರಹ್ಮಣ್ಯನನ್ನು 'ಶಣ್ಮುಖ' ಎಂದೂ ಕರೆಯುತ್ತಾರೆ. ಆ ಮಗು ದೊಡ್ಡವನಾದ ಮೇಲೆ ತಪಸ್ಸು ಮಾಡಿ ತಾರಕಾಸುರನನ್ನು ಕೊಲ್ಲುತ್ತಾನೆ.

ಶ್ರೀ ಘಾಟಿ ಸುಬ್ರಮಣ್ಯ ಕ್ಷೇತ್ರವು ಪೌರಣಿಕವಾಗಿ ತುಂಬಾ ಮಹತ್ವವಾದ ಪ್ರಮುಖ ಐತಿಹ್ಯವಾಗಿದ್ದು, ಸಾಂಸ್ಕೃತಿಕವಾಗಿ ತುಂಬಾ ಮಹತ್ವವನ್ನು ಪಡೆದಿದೆ. ಇದು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಪ್ರಸಿದ್ದವಾದ ಪುಣ್ಯಕೇತ್ರವಾಗಿದ್ದು, ಇದು ಪುರಾಣ ಮೂಲವಾಗಿದ್ದು ಇಲ್ಲಿ ಅನೇಕ ನಂಬಿಕೆಗಳಿವೆ, ಹಾಗೆ ಇಲ್ಲಿ ಹಲವಾರು ರೀತಿಯ ಆಚರಣೆಗಳು ಮತ್ತು ಜಾತ್ರೆಗಳು ಸಹ ನಡೆಯುತ್ತದೆ. ಘಾಟಿ ಸುಬ್ರಹ್ಮಣ್ಯದ ಸ್ಥಳ ಪುರಾಣದ ಹಿನ್ನೆಲೆಯಲ್ಲಿ ಇಲ್ಲಿನ ಜನರು ಸುಬ್ರಹ್ಮಣ್ಯ ಸ್ವಾಮಿಯು ನೆಲೆಗೊಳ್ಳಲು ಕಾರಣವೇನೆಂದು ಪುರಾಣದ ಕಥೆಯೊಂದನ್ನು ಘಟನೆಯಾಗಿ ಹೇಳುತ್ತಾರೆ.

ಕಥೆಯ ಹಿನ್ನೆಲೆ ಹೀಗಿದೆ, ಶಿವನ ಮಾವನಾದ ದಕ್ಷಬ್ರಹ್ಮನಿಗೆ ಇಪ್ಪತ್ತೇಂಟು ಜನ ಹೆಣ್ಣು ಮಕ್ಕಳು ಅವರಲ್ಲಿ ದ್ರಾಕ್ಷಾಯಿಣಿಯನ್ನು ಶಿವನಿಗೆ ಕೊಟ್ಟು ಮದುವೆ ಮಾಡಿರುತ್ತಾರೆ. ದ್ರಾಕ್ಷಾಯಿಣಿಯ ತಂದೆಗೆ ತ್ರಿಮೂರ್ತಿಗಳಲ್ಲಿ ಬ್ರಹ್ಮ ವಿಷ್ಣುವಿನ ಮೇಲೆ ಮಾತ್ರ ಪ್ರೀತಿ ಇರುತ್ತದೆ. ತನ್ನ ಅಳಿಯನಾದ ಶಿವನ ಮೇಲೆ ಪ್ರೀತಿ ಇಲ್ಲದಾಗುತ್ತದೆ. ಒಮ್ಮೆ ದಕ್ಷ ಬ್ರಹ್ಮನು ಶಿವನಿಗೆ ಆಮಂತ್ರಣವನ್ನು ನೀಡದೆಯೇ ಒಂದು ಯಜ್ಞ ಕಾರ್ಯವನ್ನು ನಡೆಸುತ್ತಾನೆ. ತನ್ನ ಇಪ್ಪತ್ತೇಳು ಜನ ಹೆಣ್ಣು ಮಕ್ಕಳಿಗೆ ಆಮಂತ್ರಣವನ್ನು ನೀಡಿ ಶಿವನ ಮೇಲಿನ ಕೋಪಕ್ಕಾಗಿ ತನ್ನ ಪುತ್ರಿ ದ್ರಾಕ್ಷಾಯಿಣಿ ಮತ್ತು ಶಿವನನ್ನು ಅಹ್ವಾನಿಸುವುದಿಲ್ಲ. ಆದರೆ ದ್ರಾಕ್ಷಾಯಿಣಿಗೆ ತವರಿಗೆ ಹೋಗುವ ಆಸೆಯುಂಟಾಗಿ ಶಿವನಿಗೆ ಹೇಳದೇ ಅವಳು ತವರಿನ ಕಡೆ ಪ್ರಯಾಣ ಮಾಡುತ್ತಾಳೆ. ಇದನ್ನು ಅರಿತು ಶಿವ ತನ್ನ ಹೆಂಡತಿಗೆ ಯಾವುದೇ ತೊಂದರೆಗಳು ಎದುರಾಗಬಾರದೆಂದು ನಂದಿಯನ್ನು ರಕ್ಷಣೆಗಾಗಿ ನೇಮಿಸುತ್ತಾನೆ. ದ್ರಾಕ್ಷಾಯಿಣಿಯು ತನ್ನ ತವರಿನಲ್ಲಿ ನಡೆಯುವ ಎಲ್ಲ ಕಾರ್ಯಗಳನ್ನು ನೆನಸಿಕೊಂಡು ಆಮಂತ್ರಣವಿಲ್ಲದೆ ತವರಿಗೆ ಆಗಮಿಸುತ್ತಿರುವುದರಿಂದ ನನಗೆ ಅದ್ದೂರಿಯಾಗಿ ಸ್ವಾಗತವು ಸಿಗುವುದು ಎಂದು ಕನಸುಗಳನ್ನು ಹೊತ್ತು ಬಂದ ದ್ರಾಕ್ಷಾಯಿಣಿಯನ್ನು ಕಂಡು ಯೋಗ ಕ್ಷೇಮವನ್ನು ಸಹ ವಿಚಾರಿಸುವುದಿಲ್ಲ, ಇದರಿಂದ

ಕುಪಿತಗೊಂಡ ದ್ರಾಕ್ಷಾಯಿಣಿ ಯಜ್ಞ ಕಾರ್ಯಕ್ಕೆ ಸಿದ್ದಪಡಿಸಿದ ಕುಂಡದಲ್ಲಿ ಹಾರಿ ಸಾವನ್ನಪ್ಪುತ್ತಾಳೆ, ಇದನ್ನು ತಿಳಿದ ಶಿವನು ಯಜ್ಞ ಕಾರ್ಯವನ್ನು ನಾಶಗೊಳಿಸುತ್ತಾನೆ. ಶಿವನು ತನ್ನ ಹೆಂಡತಿಯ ಮೂಳೆಯನ್ನು ಆಯ್ದು ತಂದು ಸಮಾಧಿಮಾಡಿ ಆ ಸಮಾಧಿ ಮೇಲೆ ದಕ್ಷಿಣ ಅಭಿಮುಖವಾಗಿ ಯೋಗದಲ್ಲಿ ನಿರತನಾಗಿದ್ದರಿಂದ ಆತನಿಗೆ ದಕ್ಷಿಣಮೂರ್ತಿ ಎಂದು ಹೆಸರು ಬಂದಿತು.

ದ್ರಾಕ್ಷಾಯಿಣಿಯು ಭೂ ಲೋಕದಲ್ಲಿ ಹಿಮವಂತ ಮತ್ತು ಮೇನಾದೇವಿ ಎಂಬ ದಂಪತಿಯ ಮಗಳಾಗಿ ಗಿರಿಜೆಯಾಗಿ ಹುಟ್ಟುತ್ತಾಳೆ. ಗಿರಿಜೆ ದೊಡ್ಡವಳಾದ ಮೇಲೆ ಶಿವನನ್ನು ಮದುವೆಯಾಗಬೇಕೆಂಬ ಆಸೆಯಿಂದ ಘೋರ ತಪಸ್ಸನ್ನು ಮಾಡುತ್ತಾಳೆ. ಶಿವನು ಅವಳ ಭಕ್ತಿಗೆ ಮೆಚ್ಚಿ ಶಿವನು ಗಿರಿಜೆಯನ್ನು ವಿವಾಹವಾಗುತ್ತಾನೆ. ಇಬ್ಬರೂ ಏಕಾಂತದಲ್ಲಿ ಸೇರಿ ಎಷ್ಟೋ ವರ್ಷಗಳ ಕಾಲ ಯಾರ ಕಣ್ಣಿಗೂ ಬೀಳದೆ ಇರಲು ದೇವತೆಗಳಿಗೆ ಚಿಂತೆಗಿಡು ಮಾಡುತ್ತದೆ. ಶಿವನನ್ನು ಎಚ್ಚರಗೊಳಿಸಲು ಅಗ್ನಿಯನ್ನು ವೃದ್ದ ಬ್ರಾಹ್ಮಣನ ವೇಷದಲ್ಲಿ ಅಗ್ನಿಯನ್ನು ಶಿವನ ಏಕಾಂತ ಗೃಹಕ್ಕೆ ಕಳುಹಿಸುತ್ತಾರೆ. ಏಕಾಂತದಲ್ಲಿ ಬೆತ್ತಲೆಯಾಗಿ ಕೂಡಿದ ಶಿವ ಪಾರ್ವತಿಯನ್ನು ಕಂಡು ನಗುತ್ತಾನೆ. ಬೆತ್ತಲೆಯಾಗಿದ್ದ ಗಿರಿಜೆ ವೃದ್ದ ಬ್ರಾಹ್ಮಣನನ್ನು ಕಂಡು ನಾಚಿ ವಸ್ತ್ರಗಳನ್ನು ಸುತ್ತಿಕೊಳ್ಳುತ್ತಾಳೆ.

ಶಿವನಿಗೆ ರತಿ ತೇಜಸ್ಸು ಹೊರಬರುವ ವೇಳೆಯಲ್ಲಿಯೇ ಆಕೆ ಹಿಂದೆ ಸರಿದ ಕಾರಣದಿಂದ ಶಿವನು ಆ ವೀರ್ಯವು ಭೂಮಿಯ ಮೇಲೆ ಬೀಳದಂತೆ ಅದನ್ನು ಕೈಯಲ್ಲಿ ಹಿಡಿದು ಕೋಪೋದ್ರಿಕ್ತನಾಗಿ ತಕ್ಷಣವೇ ಆ ವೃದ್ದ ಬ್ರಾಹ್ಮಣ ರೂಪಿಯಾದ ಅಗ್ನಿದೇವನ ಮೇಲೆ ಚೆಲ್ಲುತ್ತಾನೆ. ಅಗ್ನಿದೇವನು ತನ್ನ ನಿಜರೂಪ ತಾಳಿ ಓಡುವಾಗ ಆ ವೀರ್ಯವು ಅಗ್ನಿಯನ್ನೇ ಸುಡುವಂತೆ ರುದ್ರ ವೀರ್ಯದ ರೂಪದಲ್ಲಿ ಅಟ್ಟಿಸಿಕೊಂಡು ಬರುವಾಗ ಎಲ್ಲಾ ಲೋಕಗಳನ್ನು ಸುತ್ತಿದರು ಬೆಂಬಿಡದೇ ವೀರ್ಯವು ಗಂಗಾನದಿಯಲ್ಲಿ ಪ್ರವೇಶಿಸಿ ನೀರಿನಲ್ಲಿದ್ದ ನೂಜೆ ಹುಲ್ಲಿಗೆ ಆ ವೀರ್ಯವು ತಾಗಿ ಆರು ಭಾಗವಾಗಿ ಬಿದ್ದಿತು.

ತಕ್ಷಣವೇ ಆರು ಭಾಗವೂ ಆರು ಶಿಶುಗಳಾಗಿ ಮಾರ್ಪಡಲು ಅಲ್ಲಿಯೇ ಸ್ನಾನಕ್ಕಾಗಿ ಬಂದಿದ್ದ ಋಷಿ ಪತ್ನಿಯರು ಆ ಮಕ್ಕಳನ್ನು ಎತ್ತಿಕೊಂಡು ಸಾಕಿಕೊಂಡಿರುವ ಸಂಗತಿಯನ್ನು ಬ್ರಹ್ಮನಿಂದ ತಿಳಿದು ಬ್ರಹ್ಮನ ಸಮೇತವಾಗಿ ಗಿರಿಜೆ ಋಷಿ ಪತ್ನಿಯರು ಹತ್ತಿರ ಹೋಗಿ ತಮ್ಮ ಬಳಿ ಇರುವ ಆರು ಮಕ್ಕಳು ತನ್ನವೆಂದು ಕೇಳಿ ಪಡೆದುಕೊಂಡು ಏಕಕಾಲದಲ್ಲಿ ಆರು ಮಕ್ಕಳನ್ನು ತಬ್ಬಿಕೊಳ್ಳಲು ಏಕದೇಹಿಯಾಗಿ ಆರು ಮುಖಗಳಿಂದ ಮಗುವು ಜೀವವನ್ನು ಪಡೆಯಿತು ಅಂದಿನಿಂದ ಸುಬ್ರಹ್ಮಣ್ಯನನ್ನು ಷಣ್ಮುಗನೆಂದು ಕರೆಯುವ ವಾಡಿಕೆ ಬಂದಿತು.

ಸುಬ್ರಹ್ಮಣ್ಯನಿಗೆ ಒಂದು ದಿನ ನಾಲ್ಕು ಮುಖ ಹೊತ್ತ ಬ್ರಹ್ಮನು ಎದುರಾಗುತ್ತಾನೆ. ಬ್ರಹ್ಮನನ್ನು ನೀನು ಯಾರು ಎಂದು ಪ್ರಶ್ನಿಸಲು ಜಗತ್ತಿನ ಸೃಷ್ಟಿಕರ್ತ ಎಂದು ಹೇಳಲು ಓಂಕಾರ ಸ್ವರೂಪಿ ಎಂದು ಹೇಳುತ್ತಾನೆ. ಆಗ ಪ್ರಣವದ ಅರ್ಥವನ್ನು ಹೇಳು ಎಂದು ಸುಬ್ರಹ್ಮಣ್ಯನು ಕೇಳಿದಾಗ ಇದನ್ನು ತಿರಸ್ಕರಿಸಿ ಮುಂದೆ ಹೋದಾಗ ಷಣ್ಮುಗನು ಬ್ರಹ್ಮನನ್ನು ಬಂಧಿಸುತ್ತಾನೆ. ಬಂದನದ ನಂತರ ಸೃಷ್ಟಿಯ ಕೆಲಸವೇ ನಿಂತು ಹೋಗಿದ್ದರಿಂದ ಲೋಕವೆಲ್ಲಾ ಅಲ್ಲೋಲ ಕಲ್ಲೋಲವಾಗತೊಡಗಿತು. ಬಂಧಿತನಾಗಿರುವ ವಿಷಯವು ನಾರದನಿಂದ ತಿಳಿದ ಸರಸ್ವತಿಯು ಕೈಲಾಸಕ್ಕೆ ಬಂದು ಶಿವನನ್ನು ಎಚ್ಚರಿಸಿ ಎಲ್ಲಾ ವಿಚಾರವನ್ನು ವಿವರವಾಗಿ ತಿಳಿದ ಶಿವನು ಮುರುಗಿ ಬ್ರಹ್ಮನನ್ನು ಬಂದನದಿಂದ ಬಿಡಿಸಿ ಬ್ರಹ್ಮನು ಕುಮಾರನಿಗೆ ಪ್ರವಣದ ಅರ್ಥವನ್ನು ಸೂಚಿಸುತ್ತಾನೆ.

ತನ್ನ ತಪ್ಪಿನ ಅರಿವಾಗಿ ಷಣ್ಮುಖನು ಶಿಕ್ಷೆಯನ್ನು ಬೇಡುತ್ತಾನೆ. ಬಾಲಕನಾಗಿದ್ದರಿಂದ ಬ್ರಹ್ಮನು ಶಿಕ್ಷೆಯನ್ನು ನಿರಾಕರಿಸುತ್ತಾನೆ. ಆದರೂ ಅದನ್ನು ಒಪ್ಪದ ಷಣ್ಮುಖನು ತಾನು ಮಾಡಿದ ತಪ್ಪಿಗೆ ಶಿಕ್ಷೆ ಆಗಲೇಬೇಕೆಂದು ತನಗೆ ತಾನೆ ಶಿಕ್ಷೆಯನ್ನು ವಿಧಿಸಿಕೊಳ್ಳುತ್ತಾನೆ. ಈ ವಿಚಾರವನ್ನು ತಿಳಿದು ಪಾರ್ವತಿ ಹಾಗೂ, ಶಿವ, ಬ್ರಹ್ಮ ವಿನಾಯಕರುಗಳಿಗೆ ತುಂಬಾ ದುಃಖವಾಗಿ ಜನರಿಗೆ ನಿನ್ನ ಈ ರೂಪದಿಂದ ಕಷ್ಟ ಕರ್ಪಣ್ಯಗಳು ನಿವಾರಿಸು ಎಂದು ವರವನ್ನು ನೀಡುತ್ತಾರೆ. ಅವರಿಗೆ ನಮಸ್ಕರಿಸಿ ದಕ್ಷಿಣ ವಿಂದ್ಯ ಪರ್ವತದ ಕಡೆಗೆ ಪ್ರಯಾಣ ಬೆಳೆಸಿ ವಲ್ಮೀಕ ಪ್ರದೇಶದಲ್ಲಿ ತಪಸ್ಸನ್ನು ಪ್ರಾರಂಭಿಸಿದನು. ಮನುಷ್ಯ ರೂಪದಲ್ಲಿ ಆಹಾರಾದಿಗಳನ್ನು ನಿಯಂತ್ರಿಸಲು ತುಂಬಾ ಕಷ್ಟ ಹಾಗೂ ತುಂಬಾ ಸಮಯಬೇಕಾಗುತ್ತದೆ ಎಂದು ಸರ್ಪಾದಿಗಳು ಸಾವಿರಾರು ವರ್ಷಗಳ ಕಾಲ ಕೇವಲ ಗಾಳಿಯ ಸೇವನೆಯಿಂದಲೇ ಜೀವಿಸಬಲ್ಲವು, ಆ ಕಾರಣದಿಂದ ಸ್ವಾಮಿಯು ಸರ್ವರೂಪ ಧಾರಣೆ ಮಾಡಿದನು.

ಸುಬ್ರಹ್ಮಣ್ಯನು ಸರ್ವರೂಪವನ್ನು ಧರಿಸಿ ಹಿಮಾಲಯದಲ್ಲಿ ಇರಬಹುದಾಗಿತ್ತು. ಆದರೆ ದಕ್ಷಿಣಕ್ಕೆ ಬಂದದ್ದು ಎಲ್ಲಿ ಗರುಡಬಾದೆ ಉಂಟಾಗುವುದೋ ಸಾಮಾನ್ಯ ಸರ್ಪವೆಂದು ತಿಳಿದು ತನ್ನನ್ನು ಎಲ್ಲಿ ನಾಶಪಡಿಸುವರೋ ಎಂದು ಹೆದರಿ ನಿರ್ಜನ ಪ್ರದೇಶವಾದ ದಕ್ಷಿಣಕ್ಕೆ ಬಂದು ಈ ಕ್ಷೇತ್ರ ಸುಬ್ರಹ್ಮಣ್ಯದಲ್ಲಿ ತನ್ನ ತಪಸ್ಸನ್ನು ಕೈಗೊಳ್ಳುತ್ತಾನೆ.

ಈ ಕಡೆ ಸರ್ಪಕುಲದವರು ಮತ್ತು ಗರುಡನು ಸೋದರ ಸಂಬಂಧದವರು ಇವರ ಜಗಳದಿಂದ ಗರುಡನು ತನ್ನ ಸಹೋದರ ಕುಲದವರಾದ ಸರ್ಪಕುಲದವರನ್ನು ನಾಶಪಡಿಸುತ್ತಿರಲು ಸರ್ಪ ವಂಶದವರು ನಾರದರನ್ನು ಬೇಡಿಕೊಳ್ಳಲು ಸುಬ್ರಹ್ಮಣ್ಯನು ಕ್ಷುದ್ರ ರೂಪದಲ್ಲಿ ತಪಸ್ಸನ್ನು ಆಚರಿಸುತ್ತಿದ್ದು ನೀವು ಅಲ್ಲಿಗೆ ಹೋಗಿ ಆತನನ್ನು ಎಚ್ಚರಗೊಳಿಸಿ

ಅಭಯವನ್ನು ಬೇಡಿ ನಿಮ್ಮ ಬಾಧೆಯು ತಪ್ಪುವುದೆಂದು ಹೇಳಿದಾಗ ಸರ್ಪ ಪ್ರಮುಖರು ಸುಬ್ರಹ್ಮಣ್ಯನು ಸರ್ಪರೂಪದಲ್ಲಿ ತಪಸ್ಸನ್ನು ಆಚರಿಸಲು ಸ್ಥಳಕ್ಕೆ ಬರುತ್ತಾರೆ. ಸರ್ಪರೂಪಿಯಾದ ಕುಮಾರನನ್ನು ಕಂಡು ತನ್ನ ಬಾದೆಯನ್ನು ಹೇಳುಕೊಳ್ಳುವರು ತಾನು ಅಸಹಾಯಕ ಸ್ಥಿತಿಯಲ್ಲಿರುವಾಗ ಗರುಡ ಬಾದೆಯನ್ನು ತಪ್ಪಿಸುವುದು ಹೇಗೆಂದು ಯೋಚಿಸಿ ಲಕ್ಷ್ಮೀಪತಿಯನ್ನು ಧ್ಯಾನಿಸಲು ಅದೇ ಸಮಯದಲ್ಲಿ ತನ್ನ ಪುತ್ರನಿಗೆ ಹಿಂದಿನ ರೂಪವೇ ಬರಲೆಂದು ಸಂಕಲ್ಪಿಸಿ ಷಷ್ಠಿಯ ವ್ರತವನ್ನು ಮಾಡುತ್ತಿರಲು ಕಡೆಯ ೧೦೮ ನೇಯ ದಿನವು ಅದೇ ದಿನವಾಗಲೂ ನಾರಾಯಣನು ವಟು ವೇಷದಾರಿಯಾಗಿ ಬಂದು ತಂಗಿಯ ಆತಿಥ್ಯವನ್ನು ಸ್ವೀಕರಿಸಿ ನಂತರ ಇಲ್ಲಿ ಗುಹೆಯ ಮುಂಭಾಗದಲ್ಲಿ ಪ್ರತ್ಯೇಕವಾಗಿ ಕುಮಾರ ಎಂದು ಕೂಗಲು ಆಗ ಬಾರಿ ಘಟ ಸರ್ಪವೊಂದು ಬಂದು ನಿಲ್ಲಲು ಶ್ರೀ ಲಕ್ಷ್ಮೀಪತಿಯು ಅದನ್ನು ಆಲಂಗಿಸಿಕೊಳ್ಳಲು ಸ್ವಾಮಿಗೆ ಷಣ್ಮುಖನ ರೂಪ ಬರುತ್ತದೆ.

ನಂತರ ವಿಷ್ಣುವು ಗರುಡನನ್ನು ಬರಮಾಡಿಕೊಂಡು ಆತನಿಗೆ ಉಪದೇಶ ಮಾಡಿ ಆತನನ್ನು ತನ್ನ ವಾಹನವಾಗಿ ಮಾಡಿಕೊಂಡನು. ಸರ್ಪಗಳಿಗೆ ಅಭಯ ನೀಡಿ ನೀವಿರುವಲ್ಲಿ ನಾನು ಬೆಂಗಾವಲಾಗಿ ಲಕ್ಷ್ಮೀ ನರಸಿಂಹನ ರೂಪದಿಂದ ಇರುವೆನೆಂದು ಹೇಳಿ ಕಣ್ಮೆರೆಯಾದನು. ಈಗಲೂ ಘಾಟಿ ಸುಬ್ರಮಣ್ಯ ದೇವಾಲಯದಲ್ಲಿ ಲಕ್ಷ್ಮೀ ನರಸಿಂಹ ಸ್ವಾಮಿಯು ಸರ್ಪರೂಪದಲ್ಲಿದ್ದು ಸ್ವಾಮಿಯ ರಕ್ಷಣೆಗಾಗಿ ಸ್ವಾಮಿಯ ಬೆನ್ನ ಹಿಂದೆಯೇ ನೆಲೆಸಿರುವುದು ಸ್ವಾಮಿಯ ಹಿಂಭಾಗಕ್ಕೆ ಇರುವುದರಿಂದ ಯಾರಿಗೂ ಕಾಣಿಸುವುದಿಲ್ಲ. ಆದ ಕಾರಣ ಸ್ವಾಮಿಯ ಹಿಂಭಾಗಕ್ಕಿರುವ ಲಕ್ಷ್ಮೀನರಸಿಂಹಸ್ವಾಮಿಯು ಕಾಣುವಂತೆ ಕನ್ನಡಿಯನ್ನು ಅಳವಡಿಸಲಾಗಿದೆ. ಹೀಗೆ ಘಾಟಿ ಸುಬ್ರಮಣ್ಯವು ವಿಪುಲವಾದಂತಹ ಪುರಾಣದ ಕಥೆಯೊಂದನ್ನು ತನ್ನ ಹಿನ್ನೆಲೆಯಾಗಿ ಬಳಿಸಿಕೊಂಡು ಸಾಂಸ್ಕೃತಿಕವಾಗಿ ಬಹಳ ಮಹತ್ವವನ್ನು ಪಡೆದುಕೊಂಡಿದೆ.

## ದೊಡ್ಡಬಳ್ಳಾಪುರ ತಾಲ್ಲೂಕಿನ ಹುಲುಕುಡಿ ಬೆಟ್ಟದ ಐತಿಹ್ಯ

ಹುಲುಕುಡಿ ಕ್ಷೇತ್ರ ಪೌರಾಣಿಕವಾಗಿ ಹಾಗೂ ಐತಿಹಾಸಿಕವಾಗಿ ಮಹತ್ವ ಪಡೆದಿದ್ದು, ವೀರಭದ್ರಸ್ವಾಮಿ ದೇವಾಲಯದೊಂದಿಗೆ ಬೆಟ್ಟದ ಸುತ್ತಲು ಬರೋಬ್ಬರಿ ಹನ್ನೊಂದು ದೇವಾಲಯಗಳಿವೆ, ಜೊತೆಗೆ ಬಯಲು ಸೀಮೆಯಲ್ಲಿನ ಕಾಡು, ಬೆಟ್ಟಗುಡ್ಡಗಳ ವಾತಾವರಣದಿಂದಾಗಿ ಗಮನ ಸೆಳೆಯುತ್ತಿದೆ. ಸೊಗಸಾದ ಆಕರ್ಷಣೀಯ ಬೆಟ್ಟದಲ್ಲಿ ಹಲವಾರು.

## ಪೌರಾಣಿಕ ಹಿನ್ನೆಲೆ

ಹುಲುಕುಡಿ ಕ್ಷೇತ್ರದಲ್ಲಿ ಪುರಾಣದ ಕಾಲದಲ್ಲಿ ಅಗಸ್ತ್ಯ ಮುನಿಗಳು ಇಲ್ಲಿ ತಪಸ್ಸು ಮಾಡುತ್ತಿದ್ದರು ಎನ್ನುವವರು ಒಬ್ಬರಾದರೆ ಮತ್ತೊಬ್ಬರು ದುರ್ವಾಸಮುನಿಗಳು ತಪಸ್ಸು ಮಾಡಿದರು ಎಂದು ವಾದಿಸುತ್ತಾರೆ ಆದರೆ ಪುರಾಣದಲ್ಲಿ ಅಗಸ್ತ್ಯ ಮಹರ್ಷಿಗಳ ಬಗ್ಗೆಯೇ ನಿಖರ ಮಾಹಿತಿಯಿದೆ. ಅಗಸ್ತ್ಯ ಮಹರ್ಷಿಗಳ ಶಿಷ್ಯರು ಪ್ರತಿನಿತ್ಯ ಒಂದು ಹುಲ್ಲುಕಡ್ಡಿ ತಿಂದು ತಮ್ಮ ದೇಹವನ್ನು ನಿಗ್ರಹಿಸುತ್ತಿದ್ದರು, ಹಾಗಾಗಿ ಈ ಬೆಟ್ಟಕ್ಕೆ ಹುಲ್ಲುಕಡ್ಡಿ ಎಂದು ಅದು ಮುಂದೆ ಹುಲುಕುಡಿ ಎಂಬ ಹೆಸರು ಪಡೆಯಿತೆಂದು ಹೇಳುತ್ತಾರೆ, ಇಲ್ಲಿ ವೀರಭದ್ರಸ್ವಾಮಿ ಜೊತೆಗೆ, ಬಸವಣ್ಣ, ಭದ್ರಕಾಳಮ್ಮ ಮತ್ತು ಸುಂದರವಾದ ನೀರಿನ ಕೊಳವು ಇದೆ. ಬೆಟ್ಟದ ಮೇಲೆ ಶ್ರೀ ವೀರಭದ್ರಸ್ವಾಮಿಯ ದೇವಾಲಯವಿದೆ ಪುರಾಣಗಳ ಪ್ರಕಾರ ಈ ಕ್ಷೇತ್ರದಲ್ಲಿ ವೀರಭದ್ರಸ್ವಾಮಿಯು ತನ್ನ ರುದ್ರರೂಪವನ್ನು ಪ್ರದರ್ಶಿಸಿದ್ದಾನೆ. ದೇವರಾಯನ ದುರ್ಗದಲ್ಲಿನ ಯೋಗ ನರಸಿಂಹ ಈ ರುದ್ರ ಸ್ವರೂಪವನ್ನು ನೋಡಿ ಈ ಕ್ಷೇತ್ರದಲ್ಲಿ ವೀರಭದ್ರಸ್ವಾಮಿಯು ನೆಲೆಸುವಂತೆ ಹೇಳಿ ತಾನು ದೇವರಾಯನ ದುರ್ಗಕ್ಕೆ ತೆರಳುತ್ತಾನೆ. ರುದ್ರ ರೂಪದಲ್ಲಿದ್ದ ವೀರಭದ್ರಸ್ವಾಮಿಯು ಬಂಡೆಗಳನ್ನೇ ಚೆಂಡುಗಳನ್ನಾಗಿಸಿ, ಭೀಕರ ರೂಪ ತಾಳಿ ತಾರಕಾಸುರನ ಮೇಲೆ ಬಂಡೆಗಳ ಬಿಸಾಡಿಕೊಂಡು ಯುದ್ದ ನಡೆದಿದೆ ಎಂದು ಇಲ್ಲಿನ ಹಿರಿಯರು ಮಾಹಿತಿಯನ್ನು ನೀಡಿದ್ದಾರೆ. ಈತನು ಬಿಸುಡಿದ ಬಂಡೆಗಳು, ಬೃಹತ್ ಬೆಟ್ಟದ ಮೇಲೆ ಕೇವಲ ಅರ್ಧ ಅಡಿ ಎತ್ತರದಲ್ಲಿ ನಿಂತಿದ್ದರೂ ಸಹ ಉರಳದೇ ಹಾಗೆಯೇ ಶತಮಾನಗಳಿಂದ ನಿಂತಿವೆ ಎನ್ನುವರು.

ವೀರಭದ್ರಸ್ವಾಮಿ ದೇವಸ್ಥಾನದಲ್ಲಿನ ವೀರಭದ್ರ ಉತ್ತರಕ್ಕೆ ಮುಖಮಾಡಿ ನಿಂತಿರುವುದು ಬಹಳ ಸೊಗಸಾಗಿದ್ದು ಚೋಳರ ಶೈಲಿಯಲ್ಲಿದೆ. ಇದು ಬಹುಶಃ ಹನ್ನೆರಡನೇ ನೇ ಶತಮಾನದಲ್ಲಿ ಪ್ರತಿಷ್ಠಾಪಿಸಿರಬಹುದು ಎನ್ನುವರು ಇತಿಹಾಸ ಸಂಶೋಧಕರು.

ಹುಲುಕುಡಿ ವೀರಭದ್ರಸ್ವಾಮಿ ದೇವಸ್ಥಾನವನ್ನು ಹನ್ನೆರಡನೇ ಶತಮಾನದಲ್ಲಿ ಚೋಳದೊರೆ "ವಿಕ್ರಮ ಚೋಳ" ಎಂಬುವವರು ನಿರ್ಮಾಣ ಮಾಡಿರುವುದು ಎನ್ನುವುದಾದರು ೧೬೦೦ ವರ್ಷಗಳ ಹಿಂದೆ ೪ನೇ ಶತಮಾನದಲ್ಲಿ ರಾಜ ಕೃಷ್ಣವರ್ಮನ ಆಳ್ವಿಕೆಯಲ್ಲಿ ಪುಲುಕುಡಿ ಎಂಬ ಮಂತ್ರಿ ಇಲ್ಲಿನ ದೇವಾಲಯಗಳ ನಿರ್ಮಾಣಕ್ಕೆ ಕಾರಣನಾಗಿದ್ದು, ಈತನ ಹೆಸರೇ ಹುಲುಕುಡಿ ಆಗಿರಬಹುದು ಎಂದು ಶಾಸನವನ್ನು ಪರಿಶೀಲಿಸಿದ ಇತಿಹಾಸ ಸಂಶೋಧಕರು ಅಭಿಪ್ರಾಯಿಸಿದ್ದಾರೆ. ವೀರಭದ್ರಸ್ವಾಮಿ ಮೂರ್ತಿಯನ್ನು ಮಂತ್ರಿ ಪುಲುಕುಡಿ ನಿರ್ಮಿಸಿರಬಹುದು ಆನಂತರ ಇದಕ್ಕೆ ಇತರರು

ದೇವಸ್ಥಾನವನ್ನು ನಿರ್ಮಿಸಿರಬಹುದು ಎನ್ನುವರು ಆದರೂ ಸಹ ಇಂದಿಗೂ ಇದು ಸ್ಪಷ್ಟವಾಗಿ ತಿಳಿದುಬಂದಿಲ್ಲ.

ಇಲ್ಲಿನ ಔಷದಿ ಗುಣವುಳ್ಳ ಹುಲ್ಲು ದನಕರುಗಳ ಆರೋಗ್ಯಕ್ಕೆ ಒಳ್ಳೆಯದು, ಈ ಕಾರಣಗಳಿಂದ ಈ ಕ್ಷೇತ್ರಕ್ಕೆ ಹುಲುಕುಡಿ ಎಂಬ ಹೆಸರು ಬಂದಿದೆ ಎಂದು ಇಲ್ಲಿನ ಸ್ಥಳೀಯರು ವಿವರಿಸುತ್ತಾರೆ. ಹುಲುಕುಡಿ ಬೆಟ್ಟದ ಮೇಲೆ ವಿಸ್ತಾರವಾದ ಪ್ರಸ್ಥಭೂಮಿಯಿದ್ದು ಅದು ಪೂರ್ವಕ್ಕೆ ಇಳಿಜಾರಾಗಿದೆ. ಬೆಟ್ಟದ ಬುಡದಲ್ಲಿ ಬಿಸಿ ವಾತಾವರಣವಿದ್ದರೆ, ಮೇಲಕ್ಕೆ ಹೋದಂತೆಲ್ಲಾ ಹವಾಗುಣ ತಂಪಾಗುವುದನ್ನು ಇಂದಿಗೂ ಅನುಭವಿಸಬಹುದು. ಕಣ್ಮರೆಯಾದ ತೃಣಾನದಿಯ ಮೂಲವು ಈ ಬೆಟ್ಟದ ಪೂರ್ವ ತುದಿಯಲ್ಲಿದೆ ಇದು ಇಲ್ಲಿನ ಬೆಟ್ಟದ ಹೆಬ್ಬಂಡಗಳ ನಡುವೆ ಹುಟ್ಟಿ, ಬಹುತೇಕ ಅಂತರ್ಗಾಮಿಯಾಗಿಯೇ ಪೂರ್ವಾಭಿಮುಖವಾಗಿ ಹರಿಯುತ್ತದೆ. ಮಳೆಗಾಲದಲ್ಲಿ ಬಂಡೆಗಳ ನಡುವೆ ನೀರು ಧಾರಾಕಾರವಾಗಿ ಹರಿಯುವುದನ್ನು ಈಗಲೂ ನೋಡಬಹುದಾಗಿದೆ.

ಬೆಟ್ಟದ ಮೇಲೆ ೫ ರಿಂದ ೬ ಹೆಕ್ಟೇರ್‌ನಷ್ಟು ವಿಸ್ತಾರವಾದ ಭೂಮಿ ಇದ್ದು ಸುತ್ತಲೂ ಕೋಟೆ ಇದೆ. ಈ ಕೋಟೆಯು ನಿಜವಾದ ಅರ್ಥ’ದಲ್ಲಿ ಗಿರಿದುರ್ಗವೆಂದು ಕರೆಯಬಹುದಾದ ಸುಭದ್ರ ಕೋಟೆಯಾಗಿದೆ. ಪೂರ್ವ ಮತ್ತು ಉತ್ತರಕ್ಕೆ ಎರಡು ಮಹಾದ್ವಾರಗಳುಳ್ಳ ಈ ಕೋಟೆಯು ಸಾಮಾನ್ಯ ಶೈಲಿಯಲ್ಲಿದೆ ಅಂದರೆ ಕೋಟೆ ಗೋಡೆಯ ಐದಾರು ಅಡಿಗಳಷ್ಟು ದಪ್ಪನಾಗಿದ್ದು, ಎರಡು ಹಂತಗಳಲ್ಲಿ ನಿರ್ಮಾಣಗೊಂಡಿದೆ ಕೋಟೆಯ ಪೂರ್ವ ದಿಕ್ಕಿಗೆ ಎರಡೂ ಮೂಲೆಗಳಲ್ಲಿ ದೊಡ್ಡದಾದ ಹಾಗೂ ಎತ್ತರವಾದ ಬುರುಜುಗಳಿದ್ದು ಕಾವಲು ಗೋಪುರಗಳಂತೆ ಬಳಸಲು ಯೋಗ್ಯವಾಗಿದೆ. ಅಲ್ಲದೆ ಈ ಬುರುಜುಗಳ ಮೇಲೆ ನಿಂತು ನೋಡಿದರೆ ಬಹು ದೂರದವರೆಗಿನ ಪ್ರದೇಶವೆಲ್ಲ ಸ್ಪಷ್ಟವಾಗಿ ಕಾಣುತ್ತದೆ. ಅಲ್ಲದೆ ಈ ಜಾಗದಲ್ಲಿ ತಂಪಾದ ಗಾಳಿಗೆ ಮೈಯೊಡ್ಡಿ ಆಹ್ಲಾದತೆಯನ್ನು ಅನುಭವಿಸಬಹುದು.

ವೀರಭದ್ರನ ವಾಹನ ಸರ್ಪವನ್ನೂ ಸಹ ಬೆಟ್ಟದ ಮೇಲೆ ಕಾಣಬಹುದು ಬೆಟ್ಟದ ಮೇಲೆ ಅಗಸ್ತ್ಯ ಮುನಿಗಳು ತಪಸ್ಸು ಮಾಡಿದ್ದ ಸ್ಥಳವನ್ನು ಈಗಲೂ ನಾವು ಕಾಣಬಹುದು. ಶ್ರೀ ವೀರಭದ್ರಸ್ವಾಮಿ, ಭದ್ರಕಾಳಮ್ಮ, ಬಸವಣ್ಣನ ದೇವಾಲಯಗಳಿವೆ ಸುಂದರವಾದ ಕೊಳಗಳಿವೆ. ಬೆಟ್ಟವನ್ನು ಹತ್ತಲು ಅಚ್ಚುಕಟ್ಟಾದ ಮೆಟ್ಟಿಲುಗಳಿವೆ ಬೆಟ್ಟದ ಮೇಲಿನ ಗುಹೆಯಿಂದ ಸುರಂಗ ಮಾರ್ಗವೂ ಇದೆ.

**ವೀರಭದ್ರಸ್ವಾಮಿ ದೇವಾಲಯ** ಹುಲುಕುಡಿ ಬೆಟ್ಟದ ಮುಖ್ಯ ದೇವರು ವೀರಭದ್ರ ಬೆಟ್ಟದ ಒಂದು ತುದಿಯಲ್ಲಿ ಗುಹಾಲಯದಂತಿರುವ ವೀರಭದ್ರನ ಗುಡಿಯಲ್ಲಿ ವೀರಭದ್ರನ ಮೂರ್ತಿಯಿದೆ. ಒಂದು ಅಡಿ ಎತ್ತರದ ಪಾಣಿ ಪೀಠದ ಮೇಲೆ ನಿಲ್ಲಿಸಲಾಗಿದೆ. ಸುಮಾರು ನಾಲ್ಕು ಅಡಿ ಎತ್ತರವಾಗಿರುವ ಈ ಮೂರ್ತಿಯು ಸೌಮ್ಯ ಸ್ವರೂಪಿ ಹಾಗೂ ಮಂದಸ್ಮಿತ, ಗರ್ಭಗುಡಿ ಮತ್ತು ನವರಂಗವು ದೊಡ್ಡ ಬಂಡೆಯೊಂದರ ಕೆಳಗಿದೆ.

ಪ್ರವೇಶ ದ್ವಾರದಲ್ಲಿರುವ ಶಿವ ಪಾರ್ವತಿಯರು ಅಕ್ಕಪಕ್ಕಗಳಲ್ಲಿ ನಿಂತಿದ್ದು, ಶಿವನನ್ನು ಸ್ವಲ್ಪ ದೊಡ್ಡದಾಗಿಯೂ, ಪಾರ್ವತಿಯನ್ನು ಸ್ವಲ್ಪ ಚಿಕ್ಕದಾಗಿಯೂ ಕೆತ್ತಲಾಗಿದೆ. ಶಿವನು ಚರ್ತುಭುಜನಾಗಿದ್ದು ಮೇಲಿನ ಎಡಗೈಯಲ್ಲಿ ಢಮರುಗ, ಬಲಗೈಲಿ ಮೃಗ ಸಂಕೇತವನ್ನು ಹಿಡಿದ್ದಾನೆ ಕೆಳಗಿನ ಎಡಗೈ ವರದ ಮುದ್ರೆಯಲ್ಲಿದೆ.

ಬೆಟ್ಟದ ಮೇಲೆ ಚೋಳರ ಕಾಲದಲ್ಲಿ ನಿರ್ಮಾಣವಾಗಿರುವ ವೀರಭದ್ರಸ್ವಾಮಿಯ ಮೂರ್ತಿಗೆ ಸೋಮವಾರ, ಶುಕ್ರವಾರ ಹಾಗೂ ಭಾನುವಾರಗಳಂದು ವಿಶೇಷ ಪೂಜೆ ನಡೆಯಲಿದೆ. ಪ್ರತಿ ವರ್ಷ ರಥಸಪ್ತಮಿ ದಿನದಂದು ವೀರಭದ್ರಸ್ವಾಮಿ ರಥೋತ್ಸವ ನಡೆಯುತ್ತದೆ, ರಥೋತ್ಸವ ಮತ್ತು ಜಾತ್ರೆ ಪ್ರತಿ ವರ್ಷ ಫೆಬ್ರುವರಿಯಲ್ಲಿ ನಡೆಯುತ್ತದೆ, ಇದೇ ಸಂದರ್ಭದಲ್ಲಿ ದೊಡ್ಡ ರಾಸುಗಳ ಜಾತ್ರೆಯು ಸಹ ಇಲ್ಲಿ ನಡೆಯುತ್ತದೆ. ವಾರದ ಆರು ದಿನಗಳು ದುಡಿದು ದಣಿದ ದೇಹ ಮತ್ತು ಮನಸ್ಸಿಗೆ ನೆಮ್ಮದಿಯ ತಾಣವಾಗಿದೆ ಹುಲುಕುಡಿ ಬೆಟ್ಟದ ವೀರಭದ್ರೇಶ್ವರನ ಕ್ಷೇತ್ರ.

## ಬಸವನಹಳ್ಳಿ ಲಕ್ಷ್ಮಿವೆಂಕಟರಮಣ ದೇವಸ್ಥಾನ

ನೆಲಮಂಗಲ ಪಟ್ಟಣದಿಂದ ೩ಕಿ.ಮಿ ದೂರದಲ್ಲಿರುವ ಗರುಡ ದೇವಸ್ಥಾನ ಮತ್ತು ಲಕ್ಷ್ಮಿವೆಂಕಟರಮಣ ದೇವಸ್ಥಾನ ಬಹಳ ಪ್ರಸಿದ್ಧಿ ಪಡೆದಿದ್ದು ರಾಮನವಮಿ ಕಳೆದ ಕೆಲವೆರಡು ದಿನದಲ್ಲಿ ಜಾತ್ರೆ ನಡೆಯುತ್ತದೆ. ತೇರು ಎಳೆಯುವುದು ಜಾತ್ರೆಯಲ್ಲಿ ವಿಶೇಷವಾಗಿದೆ. ನೆಲಮಂಗಲದಿಂದ ದೊಡ್ಡಬಳ್ಳಾಪುರದ ರಸ್ತೆಯಲ್ಲಿ ಹಾದೂ ಹೋದರೆ ರಸ್ತೆಯ ಪಕ್ಕದಲ್ಲಿಯೇ ಇದೆ ಶಕಪುರಿ ಕ್ಷೇತ್ರದ ಲಕ್ಷ್ಮಿವೆಂಕಟರಮಣ ದೇವಸ್ಥಾನ. ನೆಲಮಂಗಲ ರೈಲು ನಿಲ್ದಾಣದಿಂದ ೫೦೦ ಮಿ ದೂರದಲ್ಲಿಯೇ ಇದೆ. ಬಸವನಹಳ್ಳಿ ಗ್ರಾಮವು ಶ್ರೀಲಕ್ಷ್ಮಿ ವೆಂಕಟರಮಣ ಸ್ವಾಮಿ ಮತ್ತು ಗರುಡನಿಗೆ ಸಮರ್ಪಿತವಾದ ಪುರಾತನ ದೇವಸ್ಥಾನ. ಇತಿಹಾಸ ಕೆಣಕಿದಾಗ ಪುರಾಣದ ಪ್ರಕಾರ ಗ್ರಾಮದ ಪುರಾತನ ಹೆಸರು ಕೌಂಟಿನ್ಯಾಪುರ ಎಂಬುದಾಗಿತ್ತು. ಕೌಂಟಿನ್ಯಾ ಮಹರ್ಷಿ ತಪಸ್ಸ'ನ್ನು ಇಲ್ಲಿಯೇ ಮಾಡಿದರು ಎಂಬುದು ಪುರಾಣದಿಂದ ನಂಬಲಾಗಿದೆ.

ಶಂಕಪುಷ್ಕರಣಿ ಎಂಬ ಪವಿತ್ರ ಕೊಳವನ್ನು ನಿರ್ಮಿಸಿದವರು ಸಹ ಕೌಂಟಿನ್ಯ ಮಹರ್ಷಿಗಳು, ಇಲ್ಲಿ ವಿಷ್ಣಾಪುರಿ ಎಂಬ ರಾಕ್ಷಸನಿದ್ದನ್ನು ಆತನು ವೃಷಭ(ಗೂಳಿ) ರೂಪದಲ್ಲಿದ್ದನು ವಿಷ್ಣುವಿನ ಆರಾಧಕರಾದ ಕೌಂಡಿನ್ಯಾ ಮಹರ್ಷಿ ಅವರಿಂದ ಮಾನವನಾಗಿ ಪರಿವರ್ತನೆಗೊಂಡನು. ಆಗ ಸ್ಥಳವನ್ನು ಬಸವಪುರಿ ಎಂದು ಕರೆದರು, ಅಂತಿಮವಾಗಿ ಬಸವನಹಳ್ಳ ಎಂದಾಯಿತು. ಗ್ರಾಮದ ಮುಖ್ಯ ದೇವಸ್ಥಾನ ಶ್ರೀಲಕ್ಷ್ಮಿವೆಂಕಟರಮಣ ಸ್ವಾಮಿ (ವೈಕುಂಠ ಏಕಾದಶಿ) ದಿನದಂದು ಸಾವಿರಾರು ಭಕ್ತರು ಬಂದು ದರ್ಶನ ಪಡೆದು ಪೂಜೆ ಮಾಡಿಸುತ್ತಾರೆ.

ಅರ್ಜುನನ ಮೊಮ್ಮಗ ಜನಮೇಜಯ ರಾಜ ಕಟ್ಟಿಸಿದನೆಂದು ಹೇಳಲಾಗಿದೆ. ಮತ್ತು ನಂತರದಲ್ಲಿ ದೇವಾಲಯವನ್ನು ಆಗಾಗ ಬಂದ ರಾಜರು ನವೀಕರಿಸುತ್ತಾ ಬಂದಿದ್ದಾರೆ. ಚೋಳರ ಶೈಲಿಯನ್ನು ನಾವು ಕಾಣಬಹುದು. ಅಂತಿಮವಾಗಿ ವಿಜಯನಗರ ಶೈಲಿಯಲ್ಲಿ ದೇವಾಲಯವನ್ನು ನವೀಕರಿಸಲಾಗಿದೆ. ಶ್ರೀ ಲಕ್ಷ್ಮಿವೆಂಕಟರಮಣ ಸ್ವಾಮಿ ವಿಗ್ರಹ ಅಭಯ ಮತ್ತು ವರದಾಹಸ್ತ ವೆಂಕಟರಮಣ ಸ್ವಾಮಿಯ ಅಪರೂಪವಾಗಿ ನಿಂತಿರುವ ಭಂಗಿಯಲ್ಲಿದೆ ಮತ್ತು ಗರುಡ ವಿರಾದಾ ಹಸ್ತಗಳು ಎರಡೂ ಅಪರೂಪದ ಗರುಡ ಮೂರ್ತಿಗಳಿವೆ, ಆಕರ್ಷಕ ಸುಧಾ'ಮೂರ್ತಿಯಿದೆ.

ಶಂಕ ಪುಷ್ಕರಣಿ ದೇವಸ್ಥಾನದ ಪ್ರಮುಖ ಆಕರ್ಷಣೆಯಾಗಿದೆ ಇದೊಂದು ಸಣ್ಣ ಕೊಳವಾಗಿದೆ ಮತ್ತು ಮುಖ ಮಂಟಪ, ದೇವಸ್ಥಾನದ ವಿಶೇಷತೆ ಗರುಡ, ಇದನ್ನುಪ್ರಮುಖ ದೇವತೆಯಾಗಿ ಮತ್ತು ಮೆರವಣಿಗೆಯ ದೇವತೆಯಾಗಿ ಪೂಜಿಸಲಾಗುತ್ತದೆ. ಸಾವಿರಾರು ಭಕ್ತರು ಗರುಡವನ್ನು ಪೂಜಿಸುತ್ತಾರೆ. ಇಲ್ಲಿ ವೆಂಕಟರಮಣ ಸ್ವಾಮಿ ಗರುಡನ ಮೂಲಕ ಆಶೀರ್ವಾದಿಸುತ್ತಾನೆ ಎಂಬ ನಂಬಿಕೆಯಿದೆ. ಆದ್ದರಿಂದ ಹೆಚ್ಚಿನ ಜನರು ಗರುಡನನ್ನು ತಮ್ಮ ಮುಖ್ಯ ದೇವತೆಯಾಗಿ ಪೂಜಿಸುತ್ತಾರೆ. ನಾಗ ದೋಷದಿಂದ ಉಂಟಾದ ರೋಗಗಳು ಈ ದೇವರನ್ನು ಆರಾಧಿಸುವುದರ ಮೂಲಕ ಗುಣಪಡಿಸಕೊಳ್ಳಬಹುದು ಎಂಬ ನಂಬಿಕೆ. ಅಲ್ಲದೆ ಜನರು ವಿದ್ಯೆ, ವಿವಾಹ ಭಾಗ್ಯ, ಸಂತಾನ ಭಾಗ್ಯ, ಕರುಣಿಸುವಂತೆ ಬೇಡಿಕೊಳ್ಳುತ್ತಾರೆ. ಆದ್ದರಿಂದ ಗರುಡನು ವರಾಪ್ರದಾ ಗರುಡ ಎಂದು ಜನಪ್ರಿಯವಾಗಿದೆ.

## ನೆಲಮಂಗಲದ ಮಹಿಮರಂಗನಾಥನ ಐತಿಹ್ಯ

ಬೆಂಗಳೂರು–ತುಮಕೂರು ರಾಷ್ಟ್ರೀಯ ಹೆದ್ದಾರಿ ಸಂಖ್ಯೆ ೪ ರಸ್ತೆಯ ಮಧ್ಯೆ ಸಿಗುತ್ತದೆ. ರಸ್ತೆಗೆ ಗೋಚರಿಸಿದರು ಸಹ ಒಂದು ಕಿ.ಮೀ. ಒಳಗೆ ನೀವು ಹೋಗಬೇಕು. ಇದೊಂದು ಪುಟ್ಟ ಬೆಟ್ಟ ಕೇವಲ ೨೫೦ ಮೆಟ್ಟಿಲುಗಳಿರುವ ಗರುಡ ರಂಗನಾಥಸ್ವಾಮಿಯ ಸನ್ನಿಧಿ.

ಹಸಿರಿನಿಂದ ಕಂಗೊಳಿಸುವ ಪುಟ್ಟ ಬೆಟ್ಟವನ್ನು ನೋಡುವುದೆ ಕಣ್ಣಿಗೆ ಹಬ್ಬ, ಬೆಟ್ಟದ ತುದಿಯಲ್ಲಿ ನೀಲಗಿರಿಗಳ ನಡುವೆ ದೇಗುಲದ ಚಿತ್ರವು ಸಹ ಕಾಣುತ್ತದೆ.

ನೀಲಗಿರಿ, ಅರಳಿ ಮತ್ತು ಆಲದ ಮರಗಳು ಹೆಚ್ಚಾಗಿ ಬೆಳೆದಿದೆ. ಶ್ರೀಮಹಿಮ ರಂಗನಾಥಸ್ವಾಮಿ ಬೆಟ್ಟವು ಗರುಡ ಕ್ಷೇತ್ರ ರಂಗನಾಥ, ಗರುಡ ಮತ್ತು ೧೨ ಅಡಿ ಎತ್ತರದ ಅಂಜನೇಯ ಮೂರ್ತಿಯಿದೆ. ಬೆಟ್ಟ ಹತ್ತಲು ಹೆಚ್ಚು ಆಯಾಸವೇನು ಆಗುವುದಿಲ್ಲ ಬೆಟ್ಟ ಹತ್ತಿದರೆ ಚೋಳರ ಕಾಲದ ಶ್ರೀ ಮಹಿಮಾ ರಂಗಸ್ವಾಮಿ ದೇಗುಲದ ದರ್ಶನವಾಗುತ್ತದೆ. ಮಹಿಮ ರಂಗನಾಥನಿಗೆ ಹೆಚ್ಚಾಗಿ ಸಮೀಪದ ಕೆಂಗಲ್ ಕೆಂಪೊಹಳ್ಳಿ ಮತ್ತು ಗೋವಿನಹಳ್ಳಿಗಳ ಜನರು ಆರಾಧ್ಯ ದೈವ ಮತ್ತು ಮನೆದೇವರಾಗಿ ಒಕ್ಕಲಾಗಿದ್ದಾರೆ.

ಮಾಘ ಶುದ್ದ ಪೂರ್ಣಮಿಯ ಮಘ ನಕ್ಷತ್ರದಲ್ಲಿ ಗರುಡನ ಶಾಪ ವಿಮೋಚನೆಗೆಂದು ಉದ್ಭವ ಮೂರ್ತಿಯಾಗಿ ಮಹಾವಿಷ್ಣುವು ಮಹಿಮ ರಂಗನಾಥಸ್ವಾಮಿಯಾಗಿ ದರ್ಶನ ನೀಡಿದ ಪವಿತ್ರ ಸ್ಥಳ, ಮಹಿಮ ರಂಗನಾಥನ ಬೆಟ್ಟದ ತಪ್ಪಲು ಹಿಂದೆ ಗಂಗರು ನೆಲಮಂಗಲವನ್ನು ಆಳುತ್ತಿದ್ದರು ಇದಕ್ಕೆ ಸಾಕ್ಷಿಯಾಗಿ ತ್ಯಾಮಗೊಂಡ್ಲು ಹೋಬಳಿಯ ಮಣ್ಣೆ(ಮಾನ್ಯಪುರ)ಯನ್ನು ಕ್ರಿ.ಶ.೯೦೦ರಲ್ಲಿ ಉಪ ರಾಜಧಾನಿಯನ್ನಾಗಿ ಆಳ್ವಿಕೆ ನಡೆಸಿದರು. ಇವರನ್ನು ಮಣಿಸಿ ನೆಲಮಂಗಲವನ್ನು ಚೋಳರು ವಶಪಡಿಸಿಕೊಂಡರು ಈ ಅವಧಿಯಲ್ಲಿ ಈ ಗರುಡ ಸಹಿತ ರಂಗನಾಥನ ಕ್ಷೇತ್ರವನ್ನು ನಿರ್ಮಿಸಿದರು.

ಈ ದೇವಸ್ಥಾನದ ಗೋಪುರದ ಮೇಲಿನ ಸಿಂಹದ ಲಾಂಛನದಿಂದ ಇತಿಹಾಸಕಾರರು ಈ ದೇವಾಲಯವನ್ನು ಚೋಳರಿಂದ ನಿರ್ಮಾಣವಾಗಿದೆ ಎಂಬುದನ್ನು ಗುರುತಿಸಿದ್ದಾರೆ ಪುರಾತನ ಕಂಬಗಳಿಂದ ಆವೃತವಾಗಿರುವ ದೇಗುಲದ ಪ್ರಾಂಗ'ಣದ ಕಂಬಗಳಲ್ಲಿ ವಿಷ್ಣು ಲಕ್ಷ್ಮಿಯರೊಳಗೊಂಡಂತೆ ಹಲವು ದೇವರುಗಳ ಕೆತ್ತನೆಯನ್ನು ಕಾಣಬಹುದು.

**ಈ ಸ್ಥಳವನ್ನು ಕುರಿತಂತೆ ಜನಪದರ ಐತಿಹ್ಯ ಹೀಗಿದೆ**

ಹಿಂದೊಮ್ಮೆ ಗರುಡ ಮಾತೆ ವಿನುತೆಗೆ ಮಕ್ಕಳಿರಲಿಲ್ಲ ಸೂರ್ಯದೇವನನ್ನು ಕುರಿತು ತಪಸ್ಸು ಮಾಡುತ್ತಾಳೆ. ಆಕೆಯ ತಪಸ್ಸಿಗೆ ಮೆಚ್ಚಿದ ಸೂರ್ಯನು ಎರಡು ಮೊಟ್ಟೆಗಳನ್ನು ನೀಡಿ ಇದನ್ನು ಸಲಹು ಎಂದು ಹೇಳುತ್ತಾನೆ, ಆದರೆ ವಿನುತೆಗೆ ಕೂತುಹಲ ತಾಳಲಾರದೆ ಒಂದು ಮೊಟ್ಟೆಯನ್ನು ಒಡೆದು ನೋಡುತ್ತಾಳೆ ಇದರಿಂದ ಸರ್ಪವೊಂದು ಹೊರಬರುತ್ತದೆ. ಗಾಬರಿಯಾದ ವಿನುತೆ ಮತ್ತೊಂದು ಮೊಟ್ಟೆ ಒಡೆಯುತ್ತಾಳೆ ಆಗ ಎರಡನೇಯ ಮೊಟ್ಟೆಯಲ್ಲಿ ಪಕ್ಷಿಯೊಂದು ಹೊರಬರುತ್ತದೆ. ಆ ಪಕ್ಷಿಯನ್ನು ಸೂರ್ಯನ ಆದೇಶದಂತೆ ಸಲಹುತ್ತಿರುತ್ತಾಳೆ.

ಪಕ್ಷಿಯು ಆಹಾರಕ್ಕಾಗಿ ಪರಿತಪಿಸುತ್ತದೆ ಆಗ ವಿನುತೆಯು ಅಲ್ಲಿದ್ದ ಒಬ್ಬ ರಾಕ್ಷಸಿಯನ್ನು ಕೊಂದು ಹೊಟ್ಟೆ ತುಂಬಿಸಿಕೊ ಎಂದು ಅಜ್ಞಾಪಿಸುತ್ತಾಳೆ, ನಂತರ ಗರುಡನು ಹೆಣ್ಣು ರಾಕ್ಷಸಿಯನ್ನು ಕೊಂದು ತಿನ್ನುತ್ತದೆ. ಸ್ತ್ರೀಹತ್ಯೆ ಮಾಡಿದೆ ಎಂಬ ಪ್ರಾಯಶ್ಚಿತ್ತಕ್ಕಾಗಿ ಈ ಕ್ಷೇತ್ರಕ್ಕೆ ಬಂದು ವಿಷ್ಣುವನ್ನು ಕುರಿತು ತಪಸ್ಸನ್ನು ಆಚರಿಸುತ್ತಾನೆ. ಅವರ ಭಕ್ತಿಗೆ ಮೆಚ್ಚಿದ ಶ್ರೀನಾರಾಯಣನು ಬೆಲ್ಲದ ಅಚ್ಚಿನ ರೂಪದಲ್ಲಿ ದರ್ಶನ ಕೊಟ್ಟು ಅವನ ಪಾಪವನ್ನು ಪರಿಹರಿಸುತ್ತಾನೆ. ಅಂದಿನಿಂದ ಈ ಕ್ಷೇತ್ರವನ್ನು ಗರುಡ ಕ್ಷೇತ್ರವಾಗಿ ಸಹ ಕರೆಯುತ್ತಾರೆ.

## ಕೊಂಡ್ರಹಳ್ಳಿ ಶ್ರೀ ಧರ್ಮೇಶ್ವರಸ್ವಾಮಿಯ ಐತಿಹ್ಯ

ಹೊಸಕೋಟೆ ತಾಲ್ಲುಕು ನಂದಗುಡಿಯ ಸಮೀಪದ ಇನ್ನೊಂದು ಪ್ರಮುಖ ಐತಿಹ್ಯ ಎಂದರೆ ಕೊಂಡ್ರಹಳ್ಳಿಯ ಶ್ರೀ ಧರ್ಮೆಶ್ವರ ದೇವಾಲಯ ಇದು ಹೊಸಕೋಟೆಯಿಂದ ೨೪ ಕಿ.ಮಿ.ಗಳಷ್ಟು ದೂರವಿದ್ದು ಮೂರು ಹಳ್ಳಿಗಳಿಗೆ ಸಂಬಂಧಪಟ್ಟ ಧಾರ್ಮಿಕ ಕ್ಷೇತ್ರವಾಗಿದ್ದು, ಈ ಮೂರು ಹಳ್ಳಿಗಳಾದ ಕೊಂಡ್ರಹಳ್ಳಿ, ನಡುವಿನಪುರ, ಎನ್.ಹೊಸಹಳ್ಳಿ ಇಲ್ಲಿನ ವಾಸಿಗಳು ಪ್ರತಿನಿತ್ಯ ಧ'ರ್ಮೇಶ್ವರನಿಗೆ ಒಂದೊಂದು ಕುಟುಂಬ ಒಂದು ದಿನದಂತೆ ಸರದಿ ಪ್ರಕಾರ ಜಾತಿ ಬೇಧವಿಲ್ಲದೆ ಎಲ್ಲಾ ವರ್ಗದ ಜನರು ಪೂಜೆ ಸಲ್ಲಿಸುತ್ತಿರುವುದು ಸಾಂಸ್ಕೃತಿಕ ಒಗ್ಗಟ್ಟನ್ನು ತೋರಿಸುತ್ತಿರುವ ಪ್ರಮುಖವಾದ ಧಾರ್ಮಿಕ ಕ್ಷೇತ್ರವಾಗಿದೆ. ಇಲ್ಲಿ ಪ್ರಮುಖವಾದ ಒಕ್ಕಲಿಗ, ಕುರುಬ, ದಲಿತ, ನಾಯಕ, ಜನಾಂಗಗಳು ಇವೆ. ಈ ದೇವಾಲಯಕ್ಕೆ ಸಂಬಂಧ ಪಟ್ಟಂತೆ ಮೂಲ ದಾಖಲೆಗಳು ತಾಮ್ರ ಶಾಸನ, ಕಲ್ಲಿನ ಶಾಸನ, ಶಿಲಾ ಶಾಸನಗಳನ್ನು ಕಾಣಬಹುದು. ಧರ್ಮೆಶ್ವರ ದೇವಾಲಯವು ದ್ವಾಪರ ಯುಗಕ್ಕೆ ಸಂಬಂಧಿಸಿದ ಐತಿಹ್ಯವಾಗಿದೆ ಇಲ್ಲಿ ನಡೆದಿರುವ ಯಕ್ಷ ಪ್ರಶ್ನೆಯ ಮಹತ್ವ ಅದಕ್ಕೆ ಸಂಬಂಧಿಸಿದಂತೆ ಪುರಾಣ ಕೃತಿಗಳ ಪುರಾವೆ ಮತ್ತು ಈ ದೇವಾಲಯಕ್ಕೆ ಸಂಬಂಧಿಸಿದಂತೆ ವಿವಿಧ ರಾಜ ಮನೆತನಗಳು ಕೊಟ್ಟಿರುವ ದಾನ ದತ್ತಿಗಳು ಅದಕ್ಕೆ ಸಂಬಂಧಿಸಿದಂತೆ ದೇವಾಲಯ ಮುಂಭಾಗ ಇರುವ ಶಾಸನಗಳು ಮತ್ತು ನಿಷದಿ ಕಲ್ಲುಗಳ ಮೇಲೆ ಇರುವ ಕೆತ್ತನೆಯನ್ನು ನೋಡಬಹುದು.

ಸ್ಕಂದ ಪುರಾಣದಲ್ಲಿಗಿ–IIರಲ್ಲಿ ಧರ್ಮೆಶ್ವರನಿಗೆ ಧರ್ಮರಾಯ ಲಿಂಗ ಸ್ಥಾಪಿಸಿದ ಯವ ಪೂಜಿಸದ ಮಾಹಿತಿಯನ್ನು ಸ್ಕಂದ ಪುರಾಣದ V-II ಪುಟ ಸಂಖ್ಯೆ ೨೮೧ ರಲ್ಲಿ ಕಾಣಸಿಗುತ್ತದೆ ಇದಕ್ಕೆ ಸಂಬಂಧಿಸಿದಂತೆ ಒಂದು ಕಥೆಯನ್ನು ಹೇಳಲಾಗುತ್ತದೆ. ದ್ವಾಪರ ಯುಗದಲ್ಲಿ ಪಾಂಡವರನ್ನು ನಾಶ ಮಾಡುವುದಕ್ಕೆ ದುರ್ಯೋಧನ ವಿಷದ ಕೊಳ ನಿರ್ಮಿಸಿದ ಯಕ್ಷ' ಪ್ರಸಂಗದ ಕಥೆಯನ್ನು ಹೇಳುತ್ತಾರೆ ಯಕ್ಷ ಪ್ರಶ್ನೆಯ ಹಿನ್ನೆಲೆ ಕಟಪ ದ್ಯೂತವಾದ

ನಂತರ ವನವಾಸದ ಅಂತ್ಯದ ವೇಳೆಗೆ ದ್ವೈತ ವನದಲ್ಲಿದ್ದ ಪಾಂಡವರ ಹಿರಿಯ ಧರ್ಮ ನಂದನನದ ವಿವೇಕ, ನೀತಿ ಪ್ರಜ್ಞೆ ಪರೀಕ್ಷಿಸಿ ಅದನ್ನು ಸಮಾಜಮುಖಿಯಾಗಿಸಲು ನಡೆದ ಪ್ರಸಂಗ. ಯಕ್ಷ ಪ್ರಶ್ನೆ ಧರ್ಮಜನ ಪರೀಕ್ಷೆಗಾಗಿ ಸ್ವತಃ ಧರ್ಮ ಸ್ವರೂಪನಾದ ಯಮನು ಜಿಂಕೆಯ ವೇಷದಲ್ಲಿ ಬಂದು ಬ್ರಾಹ್ಮಣನೊಬ್ಬನ ಆರಣಿ ಮಂಥನ ದಂಡ ತೆಗೆದುಕೊಂಡು ಹೋಗುತ್ತಾನೆ. ಅದನ್ನು ಬೆಂಬಟ್ಟಿದ ಪಾಂಡವರಿಗೆ ಆಯಾಸ ಪರಿಹಾರರ್ಥವಾಗಿ ಕಂಡ ಕೊಳದಲ್ಲಿ ನೀರು ಕುಡಿಯಲು ಹೋದಾಗ ಯಕ್ಷ ರೂಪದಲ್ಲಿ ಕೇಳಿದ ಪ್ರಶ್ನೆಗೆ ಉತ್ತರಿಸಿ ನಂತರ ನೀರು ಕುಡಿಯಲು ಹೇಳುತ್ತಾನೆ ಇದನ್ನು ಲೆಕ್ಕಿಸದೆ ಭೀಮ, ಅರ್ಜುನ, ನಕುಲ, ಸಹದೇವ ನೀರು ಕುಡಿಯಲು ಹೋಗಿ ಪ್ರಜ್ಞೆ ಕಳೆದುಕೊಳ್ಳುವ'ರು,

ಲಕ್ಷ್ಯ ನೀಡದ ಆಹಾಂಕಾರಕ್ಕೆ ದುಷ್ಪರಿಣಾಮ ಅನಿವಾರ್ಯ ಎಂಬ ನಿದರ್ಶನವಿದು ನಂತರ ಬಂದ ಯಮ ಸುತನು ಕೇಳಿದ ಯಕ್ಷ ಪ್ರಶ್ನೆಗೆ ಧರ್ಮರಾಜ ನೀಡಿದ ಉತ್ತರಗಳು.

**ಪ್ರಶ್ನೆಗಳು ಮತ್ತು ಉತ್ತರಗಳು:**

೧. ಭೂಮಿಗಿಂತ ದೊಡ್ಡವರು ಯಾರು?

ಉತ್ತರ: ತಾಯಿ

೨. ಗಾಳಿಗಿಂತ ವೇಗವುಳ್ಳದ್ದು ಯಾವುದು?

ಉತ್ತರ: ಮನಸ್ಸು

೩. ಹುಲ್ಲಿಗಿಂತ ಹೆಚ್ಚಾಗಿ ಬೆಳೆಯುವುದು ಯಾವುದು?

ಉತ್ತರ: ಚಿಂತೆ

೪. ಉತ್ತಮವಾದ ಧನ ಯಾವುದು?

ಉತ್ತರ: ವಿದ್ಯೆ

೫. ಗಂಡನ ನಿಜವಾದ ಗೆಳತಿ ಯಾರು?

ಉತ್ತರ: ಹೆಂಡತಿ

೬. ರೋಗಿಯ ನಿಜವಾದ ಮಿತ್ರ ಯಾರು?

ಉತ್ತರ: ವೈದ್ಯ

೭. ಅತ್ಯುತ್ತಮವಾದ ಸುಖ ಯಾವುದು?

ಉತ್ತರ: ಸಂತೃಪ್ತಿ

೮. ಅತ್ಯುತ್ತಮವಾದ ಲಾಭ ಯಾವುದು?

ಉತ್ತರ: ಆರೋಗ್ಯ

೯. ಮಾನವನಿಗೆ ನಿಜವಾದ ಶತ್ರು ಯಾವುದು?

ಉತ್ತರ: ಕೋಪ

೧೦.ವಾಸಿಯಾಗದ ರೋಗ ಯಾವುದು?

ಉತ್ತರ: ದುರಾಸೆ

೧೧. ನಿಜವಾದ ಸಾಧು ಯಾರು?

ಉತ್ತರ: ಸರ್ವರ ಹಿತ ಭಯಸುವನು

೧೨. ನಿಜವಾದ ಅಮೃತ ಯಾವುದು?

ಉತ್ತರ : ಹಸುವಿನ ಹಾಲು

೧೩. ಪರಿಪೂರ್ಣ ಸುಖ ದೊರೆಯುವುದು ಯಾವಾಗ?

ಉತ್ತರ: ಸದಾಚಾರದಿಂದ

೧೪. ಸ್ವರ್ಗ ಸಿಗುವುದು ಹೇಗೆ?

ಉತ್ತರ: ಸತ್ಯದಿಂದ ಇದ್ದಾಗ

೧೫. ನಾವು ಬಿಡಲೇ ಬೇಕಾದುದ್ದು ಏನು?

ಉತ್ತರ: ದುರಾಭಿಮಾನ, ಲೋಭ, ದುರಾಸೆ,

೧೬. ವಿಶ್ವದ ಅತಿ ದೊಡ್ಡ ಆಚ್ಚರಿ ಯಾವುದು?

ಉತ್ತರ: ನಾವು ಶಾಶ್ವತ ಎಂಬ ಭಾವನೆ.

ಯಕ್ಷನ ಎಲ್ಲಾ ಪ್ರಶ್ನೆಗಳಿಗೆ ತರ್ಕ ಬದ್ದನಾದ ನೀತಿಯುಕ್ತ, ವಿವೇಚನಾಬದ್ದ ಉತ್ತರ ನೀಡಿ ಯಕ್ಷನನ್ನು ಒಪ್ಪಿಸುತ್ತಾನೆ. ಯಕ್ಷ ಸಹೋದರರಲ್ಲಿ ಒಬ್ಬನನ್ನು ನೀಡುವನೆಂದಾಗ ಮಾದ್ರಿ ತನಯರಲ್ಲಿ ಒಬ್ಬನನ್ನು ನೀಡುವೆನೆಂದಾಗ ಮಾದ್ರಿ ತನಯರಲ್ಲಿ ಒಬ್ಬನನ್ನು ನೀಡೆಂದು ಹೇಳಿ ನೀತಿ ನ್ಯಾಯ ನಿಷ್ಠುರತೆ ಮೆರೆಯುತ್ತಾನೆ. ಮೆಚ್ಚಿದ ಯಮ ಎಲ್ಲಾರನ್ನು ಬದುಕಿಸಿ ಮುಂದೆ ಅಜ್ಞಾತವಾಸಕ್ಕೆ ವಿರಾಟರಾಯನ ನಗರಿಗೆ ಮುನ್ನಡೆಯಲು ಸೂಚಿಸುತ್ತಾನೆ.

ನಂತರ ಅಲ್ಲಿ ಧರ್ಮರಾಯರನ್ನು ದ್ವಾಪರ ಯುಗದಲ್ಲಿಯೇ ವಿಷದ ಕೊಳವನ್ನು ಮುಚ್ಚಿ ಅದರ ಮೇಲೆ ಶಿವಲಿಂಗವನ್ನು ಸ್ಥಾಪಿಸಿ ದೇವಾಲಯವನು ಕಟ್ಟಿಸಿದ ಇದನ್ನು ಸಮರ್ಥಿಸುವುದಕ್ಕೆ ಶಾಸನಾಧಾರವನ್ನು ಉಲ್ಲೇಖಿಸಬಹುದು ಈ ಶಾಸನದಲ್ಲಿ ನಂಜು ಕೊಳ

ಎಂಬುದಾಗಿ ಶಾಸನದಲ್ಲಿ ಉಲ್ಲೇಖಿಸಲಾಗಿದೆ ನಂಜು+ಕುಳಿ=ಎಂದರೆ ವಿಷದ ಕೊಳ ಎಂದು ವಿವರ ಕೊಟ್ಟಿದ್ದಾರೆ.

ಶಿವಲಿಂಗದ ಕೆಳಗಡೆ ಇರುವ ಕೊಳವನ್ನು ಯಾರು ಪರೀಕ್ಷಿಸಿಲ್ಲ ಆದರೂ ಅದರ ಕೆಳಗೆ ವಿಷದ ಕೊಳವಿದೆ ಎಂದು ನಂಬಿದ್ದಾರೆ, ದೈವ ನಂಬಿಕೆಗಳನ್ನು ಪರೀಕ್ಷಿಸುವ ಸಾಹಸವನ್ನು ಯಾರು ಮಾಡುವುದಿಲ್ಲ ಅಲ್ಲಿನ ಅರ್ಚಕರು ಲಿಂಗದ ಪಕ್ಕ ಒಂದು ಸಣ್ಣ ರಂದ್ರವಿದೆ ಅದರಲ್ಲಿ ಬೆರಳಿಟ್ಟರೆ ಕೊಳದ ನೀರು ಕೈಗೆ ತಾಗುತ್ತದೆಂದು ತಿಳಿಸುತ್ತಾನೆ, ಈ ದೇವಾಲಯವು ಐತಿಹಾಸಿಕವಾಗಿ ಚೋಳರ ಕಾಲದಲ್ಲಿ ನಿರ್ಮಾಣವಾಗಿದೆ ಇದು ದ್ರಾವಿಡ ಶೈಲಿಯಲ್ಲಿದೆ, ಕ್ರಿ.ಶ ೧೦೬೫ ರಲ್ಲಿ ನೊಳಂಬರಾಜ ಮಹೇಂದ್ರನ ಕಾಲದ ತಮಿಳು ಶಾಸನವು ದೊರೆಕಿದ್ದು ಈ ಶಾಸನದಲ್ಲಿ ಸೋಮೆಶ್ವರ ದೇವಾಲಯ ಎಂದು ಹೆಸರಿಸಲಾಗಿದೆ ಈ ದೇವಾಲಯ ಶಿಲ್ಪಗಳಲ್ಲಿ ಮಹಾಭಾರತದ ಯಕ್ಷ ಪ್ರಸಂಗ ಕಥೆಯನ್ನು ವಿವರಿಸಲಾಗಿದೆ, ಈ ಕಥೆಯನ್ನು ಇಲ್ಲಿನ ಐತಿಹ್ಯವಾಗಿ ಹೇಳುವುದನ್ನು ಈಗಾಗಲೇ ಪ್ರಸ್ತಾಪಿಸಲಾಗಿದೆ.

ವಿಜಯನಗರದ ಅರಸರ ಕಾಲದಲ್ಲಿ ಈ ದೇವಾಲಯವನ್ನು ದುರಸ್ಥಿ ಮಾಡಿ ಧರ್ಮೆಶ್ವರ ಕ್ಷೇತ್ರವೆಂದು ಕರೆದು ಅನೇಕ ಕೊಡುಗೆಗಳನ್ನು ಕೊಟ್ಟು ತೆರಿಗೆ ವಿನಾಯಿತಿ ಮಾಡಿರುವುದು ಶಾಸನದಿಂದ ತಿಳಿದು ಬರುತ್ತದೆ. ಇದರಿಂದಾಗಿ ಬಹುಶಃ ಈ ದೇವಾಲಯ ನವರಂಗ ಮಂಟಪವನ್ನು ವಿಜಯನಗರ ಕಾಲದಲ್ಲಿ ನಿರ್ಮಿಸಿರಬೇಕೆಂದು ತೋರುತ್ತದೆ, ಇಲ್ಲಿ ಒಂದು ತಾಮ್ರ ಶಾಸನ ಇದ್ದು ಕ್ರಿ.ಶ ಸುಮಾರು ೧೪೧೦ ಕ್ಕೆ ಸೇರಿದ್ದಾಗಿದೆ. ಇದರಲ್ಲಿ ಶಿವಲಿಂಗವನ್ನು ಪಾಂಡವರಾಜ ಧರ್ಮರಾಜರು ಪ್ರತಿಷ್ಠಾಪಿಸಿದ್ದಾರೆ ಎಂದು ಬರೆಯಲಾಗಿದೆ. ಈ ದೇವಾಲಯ ನವರಂಗದಲ್ಲಿ ನಾಲ್ಕೂ ಕಂಭಗಳಿಗೆ ಹೊಂದಿಕೊಂಡು ಒಂದು ಮುಗ್ಗುಲಿಗೆ ಗೋಡೆ ಗಂಭದಲ್ಲಿ ಸಿಂಹವೊಂದು ಮತ್ತೊಂದು ಸಿಂಹದ ತಲೆಯ ಮೇಲೆ ಪಾದವನ್ನಿಟ್ಟ ಹಾಲ್ ಇದೆ.

ಆಗ್ನೇಯ ಮತ್ತು ನೈರುತ್ಯದ ದಿಕ್ಕಿನ ಕಂಬಗಳಲ್ಲಿ ಧರ್ಮರಾಜನ ಯಕ್ಷಪ್ರಸಂಗದ ಕಥೆಗೆ ಸಂಬಂಧಿಸಿದ ಶಿಲ್ಪಿಗಳಿಗೆ ಆಗ್ನೇಯ ದಿಕ್ಕಿನ ಕಂಬದಲ್ಲಿ ಧರ್ಮರಾಜ ಮರದ ಮೇಲೆ ಕುಳಿತುಕೊಂಡು ಯಕ್ಷನ ಪ್ರಶ್ನೆಗಳಿಗೆ ಉತ್ತರಿಸುವ ದೃಶ್ಯವಿದೆ, ಕಂಬದ ಮದ್ಯದಲ್ಲಿ ಭೀಮಾರ್ಜುನರು ಮೇಲ್ಭಾಗದಲ್ಲಿ ಕೆಳಭಾಗದಲ್ಲಿ ನಕುಲ ಸಹದೇವರು ವಿಷದ ನೀರು ಕುಡಿದು ಸತ್ತು ಬಿದ್ದಿದ್ದಾರೆ. ಮತ್ತೊಂದು ದಿಕ್ಕಿನಲ್ಲಿ ಹೆಡೆಯೆತ್ತಿ ನಿಂತಿರುವ ಸರ್ಪದಿಂದ ರಕ್ಷಿತವಾಗಿರುವ ಲಿಂಗದ ಎದುರು ಧರ್ಮರಾಜ ನಿಂತಿದ್ದಾನೆ. ಈ ಶಿಲ್ಪವು ಧರ್ಮರಾಜನ ದೇವಾಲಯದಲ್ಲಿ ಲಿಂಗವನ್ನು ಸ್ಥಾಪಿಸಿರುವುದಕ್ಕೆ ವಿವರಣೆ ನೀಡಿದವರು ದೇವಾಲಯದ ಅರ್ಚಕರಾದ

ಲೋಕನಾಥ್, ನೈರುತ್ಯ ದಿಕ್ಕಿನಲ್ಲಿರುವ ಕಂಭದಲ್ಲಿ ಇಬ್ಬರು ಋಷಿಗಳ ಮಧ್ಯೆ ಆಗ್ನಿ ಕುಂಡವಿದ್ದು ಮಧ್ಯದಲ್ಲಿ ಧರ್ಮರಾಯ ಕುಳಿತಿರುವಂತೆ ಮುಂಭಾಗಕ್ಕೆ ಋಷಿ ಜಿಂಕೆಯ ಹತ್ತಿರ ನಿಂತಿರುವ ಚಿತ್ರ ಮತ್ತು ಋಷಿ ಅಗ್ನಿಕುಂಡಕ್ಕೆ ಕಟ್ಟಿಗೆ ಹಾಕಿತ್ತಿರುವ ದೃಶ್ಯವಿದೆ ಮತ್ತೊಂದು ಕಡೆಗೆ ಇಬ್ಬರು ಬಿಲ್ಲುಗಾರರು, ಒಬ್ಬ ವ್ಯಕ್ತಿ ಮೊಸಳೆಗೆ ಬಾಣ ಬಿಡುತ್ತಿರುವುದು ಗೋಚರವಾಗುತ್ತದೆ. ಈ ಶಿಲ್ಪಗಳು ಮಹಾಭಾರತದಲ್ಲಿ ಹರಣಿಯನ್ನು ಅಪಹರಿಸುವ ಕಥೆಯನ್ನು ನೆನಪಿಸುತ್ತವೆ.

ಈಶಾನ್ಯ ಕಂಭದಲ್ಲಿ ಮಾರ್ಕಂಡಯ್ಯನಿಗೆ ಸಂಬಂಧಿಸಿದ ದೃಶ್ಯ ಬೇಡರ ಕಣ್ಣಪ್ಪ ಬೇಟೆಯಾಡುತ್ತಿರುವುದು ಮತ್ತು ಆನೆಯು ಶಿವಲಿಂಗಕ್ಕೆ ಪೂಜೆ ಮಾಡುತ್ತಿರುವ ದೃಶ್ಯಗಳಿವೆ ನವರಂಗದ ಭಾವಣಿ ಏಳು ಅಡಿಗಳಷ್ಟು ಎತ್ತರವಾಗಿದ್ದು ಮಧ್ಯ ಭಾಗದಲ್ಲಿ ತಾವರೆಯ ಸುತ್ತಲೂ ಅಷ್ಟದಿಕ್ಪಾಲಕರ ಶಿಲ್ಪಗಳಿವೆ, ಮುಖ ಮಂಟಪದ ಕಂಬವೊಂದರ ಮನುಷ್ಯನೊಬ್ಬನು ಮರದ ಮೇಲಿಂದ ಕೊಂಬೆಯನ್ನು ಶಿವಲಿಂಗದ ಮೇಲೆ ಬಾಗಿಸುತ್ತಿದ್ದಾನೆ. ಕೆಳಗಡೆಯಿಂದ ಸಿಂಹವು ಮರದ ಮೇಲೆ ಹತ್ತುವುದಕ್ಕೆ ಪ್ರಯತ್ನಿಸುತ್ತಿರುವ ದೃಶ್ಯವಿದೆ. ಈ ಶಿಲ್ಪವು ಬೇರಾವುದೋ ಪುರಾಣ ಪ್ರಸಂಗಕ್ಕೆ ಸಂಬಂಧಿಸಿದ ಕಥೆಯನ್ನು ಹೊಂದಿರಬಹುದಾಗಿದೆ.

## ಚಿಕ್ಕ ಮದುರೆಯ ಶ್ರೀ ಶನಿಮಹಾತ್ಮಸ್ವಾಮಿ ಐತಿಹ್ಯ

ದೊಡ್ಡಬಳ್ಳಾಪುರ ತಾಲ್ಲೂಕಿನ ಕನಸವಾಡಿ ಎಂಬ ಸಣ್ಣ ಹಳ್ಳಿಯಲ್ಲಿ ನೆಲೆಸಿರುವ ಶನಿ ಮಹಾತ್ಮಾ ಸ್ವಾಮಿಯಿಂದ ಇಂದು ಈ ಸಣ್ಣ ಗ್ರಾಮ ಕರ್ನಾಟಕದಾದ್ಯಂತ ಚಿರಪರಿಚಿತವಾಗಿದೆ. ಶನೇಶ್ವರನ ಕೃಪೆಯಿಂದ ಬೇಡಿದ ವರವನ್ನು ಈಡೇರಿಸಿಕೊಳ್ಳುವ ಭಕ್ತರ ಸಂಖ್ಯೆ ದಿನದಿನಕ್ಕೆ ಹೆಚ್ಚುತ್ತಿದೆ. ಪ್ರತಿನಿತ್ಯ ಸಾವಿರಾರು ಭಕ್ತರು ಬಂದರೆ ವಾರಾಂತರದಲ್ಲಿ, ಅಂದರೆ ಶನಿವಾರ ಮತ್ತು ಭಾನುವಾರದಂದು ಲಕ್ಷಗಳ ಲೆಕ್ಕದಲ್ಲಿ ಭಕ್ತರು ಬಂದು ಭಗವಂತನ ದರ್ಶನ ಪಡೆದುಕೊಂಡು ಪಾವನವಾಗುತ್ತಾರೆ. ಗಂಗಹನುಮಯ್ಯ ಎಂಬ ಒಕ್ಕಲು ಮನೆತನದ ಕೃಷಿಕರಿಂದ ಕನಸವಾಡಿಯಲ್ಲಿ ನೆಲೆಗೊಂಡ ಶನಿಮಹಾತ್ಮ ಸ್ವಾಮಿ ಇಂದು ಜಗತ್ಪ್ರಸಿದ್ಧವಾಗಿದೆ.

ಕನಸವಾಡಿ ಗ್ರಾಮದ ಕೃಷಿಕರಾಗಿದ್ದ ಗಂಗಹನುಮಯ್ಯ ಎಂಬುವವರಿಂದ ಸುಮಾರು ೮೦ ವರ್ಷಗಳ ಹಿಂದೆ ಸ್ಥಾಪಿತವಾದ ಚಿಕ್ಕ ಮಧುರೆ ಶನಿ ಮಹಾತ್ಮ ದೇವಸ್ಥಾನ. ವೆಂಕಟಪ್ಪ ಎಂಬ ಒಕ್ಕಲಿಗ ಕುಟುಂಬದ ಇದೇ ಕನಸವಾಡಿ ಗ್ರಾಮದ ರೈತ ಯಾರ ತಂಟೆತಕರಾರಿಗೂ ಹೋಗದೆ ತಾವಾಯಿತು ತನ್ನ ಕುಟುಂಬವಾಯಿತು ಎಂದು ಬದುಕುತ್ತಿದ್ದವರು. ಇವರ ಮಗನೇ ಗಂಗಹನುಮಯ್ಯ ಎಂಬುವರು ಸುಂದರವಾದ ರಾಜ ಗೋಪುರ, ಕಲ್ಲು ಮಂಟಪದ

ಆವರಣವಿರುವ ಈ ದೇವಾಲಯದಲ್ಲಿನ ಗರ್ಭಗುಡಿಯಲ್ಲಿ ಮೂಲ ವಿಗ್ರಹದೊಂದಿಗೆ ಶನಿಮಹಾತ್ಮ ಮೂರ್ತಿಯನ್ನು ಪ್ರತಿಷ್ಠಾಪಿಸಿದ್ದಾರೆ.

ದೇವಾಲಯದ ಮುಂಭಾಗದಲ್ಲಿ ಶನಿ ಮಹಾತ್ಮನ ಉತ್ಸವ ಮೂರ್ತಿಯಿದೆ. ಈ ಮಂಟಪದಲ್ಲಿನ ಉತ್ಸವ ಮೂರ್ತಿಗೂ ಸಹ ವಿಶೇಷ ಪೂಜೆಗಳು ಜರುಗುತ್ತವೆ. ದೇವಾಲಯದ ಆವರಣದಲ್ಲಿ ಗಣಪತಿ ದೇವಾಲಯವಿದೆ. ಇತ್ತೀಚಿನ ವರ್ಷಗಳಲ್ಲಿ ದೇವಾಲಯದ ಹಿಂದೆ ಜೇಷ್ಠಾದೇವಿಯ ದೇವಾಲಯ ನಿರ್ಮಿಸಲಾಗಿದ್ದು, ಶನಿಮಹಾತ್ಮ ಹಾಗೂ ಜೇಷ್ಠಾದೇವಿಯ ಎರಡೂ ದೇವಾಲಯಗಳಿರುವ ಅಪರೂಪದ ಸ್ಥಳ ಇದಾಗಿದೆ. ಜೇಷ್ಠಾದೇವಿಯ ಪಕ್ಕದಲ್ಲಿ ಕಲ್ಯಾಣ ಶನೈಶ್ಚರ ಎಂಬ ಮತ್ತೊಂದು ಶನಿ ದೇವರ ದೇವಸ್ಥಾನ ನಿರ್ಮಾಣ ಮಾಡಲಾಗಿದೆ. ಮದುವೆ ಆಗದವರು ಇಲ್ಲಿ ಹರಕೆಯ ರೂಪದ ಸಂಕಲ್ಪ ಮಾಡಿಕೊಂಡರೆ ಮದುವೆ ಆಗುತ್ತದೆ ಎಂಬ ನಂಬಿಕೆ ಬೆಳೆಯುತ್ತಿದೆ. ಪ್ರತಿವರ್ಷ ಶಿವರಾತ್ರಿ ದಶಮಿಯಲ್ಲಿ ಉತ್ಸವ ಶನಿಮಹಾತ್ಮ ಸ್ವಾಮಿ ಮೂರ್ತಿಗೆ ಬ್ರಹ್ಮರಥೋತ್ಸವ ವಿಜೃಂಭಣೆಯಿಂದ ನಡೆಯುತ್ತದೆ. ಈ ಸಂದರ್ಭದಲ್ಲಿ ರಾತ್ರಿ ಪೂರ್ತಿ ಪೌರಾಣಿಕ ನಾಟಕ ನಡೆಯುತ್ತದೆ.

ಒಮ್ಮೆ ವೆಂಕಟಪ್ಪನವರು ಮನೆಯಲ್ಲಿ ಸತ್ಯನಾರಾಯಣ ಪೂಜೆ ಮಾಡಿಸಲು ನಿರ್ಧರಿಸಿ ಪೂಜೆ ಮಾಡಿಸುತ್ತಿರುತ್ತಾರೆ. ಆಗ ದಿಡಿರನೇ ವೆಂಕಟಪ್ಪ ನವರಿಗೆ ಹೃದಯಘಾತವಾಗಿ ಸಾವನ್ನಾಪ್ಪುತ್ತಾರೆ. ಇದರಿಂದ ಚಿಂತೆಗೀಡಾದ ಗಂಗಹನುಮಯ್ಯನವರು ಅರಳಿ ಮರದ ಕೆಳಗೆ ಕುಳಿತು ಚಿಂತಾಕ್ರಾಂತರಾಗಿರುತ್ತಾರೆ. ಅಲ್ಲಿ ಇದ್ದಕ್ಕಿದ್ದಂತೆ ಒಂದು ಬೆಳಕು ಮೂಡುತ್ತದೆ, ಮೊದಲಿಗೆ ಗಾಬರಿಗೊಂಡ ಗಂಗಹನುಮಯ್ಯನವರು ನಂತರ ಧೈರ್ಯಮಾಡಿ ಸ್ವಲ್ಪ ಹತ್ತಿರ ಹೋಗಿ ನೋಡುತ್ತಾರೆ. ಉದ್ದ ಕೂದಲು ಮುಖದ ತುಂಬಾ ತೇಜಸ್ಸು ಇರುವ ಒಂದು ಅಸ್ಪಷ್ಟ ಆಕಾರ ಕಾಣುತ್ತದೆ. ಗಂಗಹನುಮಯ್ಯನವರು ಅಯ್ಯ ನೀನ್ಯಾರು ಎಂದು ಕೇಳುತ್ತಾರೆ. ಆಗ ಆ ಬೆಳಕು ನಾನು ಶನೈಶ್ಚರ ನಿನ್ನ ಪೂರ್ಣ ಜನ್ಮದ ಫಲವಾಗಿ ನಿನ್ನ ಬಳಿ ಬಂದಿದ್ದೇನೆ, ಚಿಂತಿಸಬೇಡ ಬಾ ಎಂದು ಊರಿನ ಹೊರಗಿನ ಗುಂಡು ತೋಪಿಗೆ ಕರೆದುಕೊಂಡು ಹೋಗಿ ಒಂದು ಕಪ್ಪು ಬಣ್ಣದ ಕಲ್ಲನ್ನು ತೋರಿಸಿ ಇದನ್ನು ಎತ್ತಿಕೊಂಡು ಬಾ ಎನ್ನುತ್ತದೆ. ಗಂಗಹನುಮಯ್ಯನವರಿಂದ ಎತ್ತಲು ಸಾಧ್ಯವಾಗದೆ ಹೆಣಗಾಡುತ್ತಾರೆ.

ಆಗ ಓಂ ಶನೈಶ್ಚರಾಯ ನಮಃ ಎಂದು ಜಪಿಸಿ ಕಲ್ಲನ್ನು ಪುನಃ ಎತ್ತುತ್ತಾರೆ ಆಶ್ಚರ್ಯಕರ ರೀತಿಯಲ್ಲಿ ಕಲ್ಲನ್ನು ಹೂವಿನ ಹಾಗೆ ಸರಾಗವಾಗಿ ಮೇಲೆ ಎತ್ತುತ್ತಾರೆ ಇದನ್ನು ಶನೈಶ್ಚರ ಸ್ವಾಮಿ (ಈಗ ಶನಿ ಮಹಾತ್ಮ ದೇವಸ್ಥಾನ ನೆಲೆಗೊಂಡಿರುವ ಸ್ಥಳಕ್ಕೆ) ಕರೆತಂದು ಇಲ್ಲಿ ಇದನ್ನು ಪ್ರತಿಷ್ಠಾಪಿಸು ನಾನು ಇದರಲ್ಲಿ ನೆಲೆಗೊಳ್ಳುತ್ತೇನೆ ಎಂದು ಹೇಳುತ್ತದೆ.

ಗಂಗಹನುಮಯ್ಯನವರು ದೇವರ ಆಜ್ಞೆಯಂತೆ ಅಲ್ಲಿ ಪ್ರತಿಷ್ಠಾಪಿಸಿ ಒಂದು ತೆಂಗಿನ ಗರಿಯಿಂದ ಗುಡಿಸಲು ಕಟ್ಟುತ್ತಾರೆ. ನಿತ್ಯ ತಾವೇ ಖುದ್ದಾಗಿ ಪೂಜಾ ಕೈಂಕರ್ಯಗಳನ್ನೂ ನೆರವೇರಿಸುತ್ತಾರೆ. ದಿನದಿಂದ ದಿನಕ್ಕೆ ಭಕ್ತ ಸಮೂಹ ಹೆಚ್ಚುತ್ತಾ ನೋಡ ನೋಡುತ್ತಲೆ ಗುಡಿಸಲು ಸಣ್ಣ ದೇವಸ್ಥಾನವಾಗಿ ಬೆರಳಣಿಕೆಯ ಸಂಖ್ಯೆಯಲ್ಲಿದ್ದ ಜನರು ಸಾಗರೋಪಧಾರಿಯಾಗಿ ಬರಲಾರಂಭಿಸುತ್ತಾರೆ. ನಂತರ ಇದಕ್ಕೂ ಮುಂಚಿತವಾಗಿದ್ದ ಮಂಟಪವನ್ನು ಒಡೆದುಹಾಕಿ ಕಲ್ಲಿನ ಸುಸಜ್ಜಿತವಾದ ಈಗಿರುವ ದೇವಸ್ಥಾನವೂ ಭಕ್ತರ ದಾನದಿಂದ ನಿರ್ಮಿಸುತ್ತಾರೆ. ಇಂದಿಗೂ ಗಂಗಹನುಮಯ್ಯನವರ ಮನೆತನದವರೇ ಪೂಜೆ ಮಾಡುತ್ತಾ ಅರ್ಚಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

## ಚೌಡಪ್ಪನಹಳ್ಳಿ ಶ್ರೀ ತಬ್ಬುಲಿಂಗೇಶ್ವರಸ್ವಾಮಿ

ದೇವನಹಳ್ಳಿ ತಾಲ್ಲೂಕು, ಚನ್ನರಾಯಪಟ್ಟಣ ಹೋಬಳಿ, ಗಂಗವಾರ ಮತ್ತು ಚೌಡಪ್ಪನಹಳ್ಳಿ ಗ್ರಾಮಗಳ ಮಧ್ಯೆ ನಿರ್ಮಿಸಲಾಗಿರುವ ಶ್ರೀ ತಬ್ಬುಲಿಂಗೇಶ್ವರಸ್ವಾಮಿ ದೇವಾಲಯವು ದಕ್ಷಿಣಕಾಶಿಯೆಂದೇ ಭಕ್ತರಿಂದ ಪೂಜೆಗೊಳ್ಳುತ್ತಿರುವ ಪುಣ್ಯಕ್ಷೇತ್ರ ಇಲ್ಲಿ ತಬ್ಬುಲಿಂಗೇಶ್ವರನೆಂದೇ ಕರೆಸಿಕೊಳ್ಳುತ್ತಿರುವ ಮೂಲ ದೇವರಾದ ನೀಲಕಂಠೇಶ್ವರನು ಭಕ್ತರ ಪಾಲಿಗೆ ಸುಂದರೇಶ್ವರ, ಪಶುಪತೇಶ್ವರ, ಮಲ್ಲಿಕಾರ್ಜುನ, ಪಾತೇಳೇಶ್ವರ, ವೈದ್ಯನಾಥೇಶ್ವರ, ಗಂಗಾಧರೇಶ್ವರ, ಕಾಶಿ ವಿಶ್ವನಾಥ ಮತ್ತು ಮಂಜುನಾಥೇಶ್ವರ ಎಂಬ ಅಭಿದಾನದಿಂದಲೂ ಅಷ್ಟಲಿಂಗಗಳ ರೂಪದಲ್ಲಿ ಸಾಕ್ಷಾತ್ಕಾರಗೊಂಡಿರುವುದೊಂದು ವಿಶೇಷ. ಈ ಅಷ್ಟಲಿಂಗಗಳು ಅವುಗಳ ಅಭಿದಾನಕ್ಕೆ ಅನುಗುಣವಾಗಿ ವಿಭಿನ್ನವಾಗಿ ರೂಪಗೊಂಡಿದ್ದು ದೇವಾಲಯದ ಮುಖ ಮಂಟಪದ ಸುತ್ತಲು ಪ್ರತ್ಯೇಕ ಗರ್ಭಗುಡಿಗಳಲ್ಲಿ ಪ್ರತಿಷ್ಠಾಪಿಸಲಾಗಿದೆ.

ನೀಲಕಂಠೇಶ್ವರ ಲಿಂಗವು ನಂದಿಯ ಭೋಗನಂದೀಶ್ವರನಿಗಿಂತ ಆಕಾರದಲ್ಲಿ ದೊಡ್ಡದ್ದು, ಎರಡು ಕೈಗಳಿಂದ ಬಳಸಬಹುದಾದಷ್ಟು ಗಾತ್ರದಿಂದಾಗಿಯೇ ಏನೋ ತಬ್ಬುಲಿಂಗೇಶ್ವರಸ್ವಾಮಿ ಎಂದೇ ಜನಮಾನಸದಲ್ಲಿ ನೆಲೆಗೊಂಡಿದ್ದಾನೆ.

ಪ್ರಧಾನ ಗರ್ಭಗುಡಿಯ ಮುಂದಿರುವ ಸುಖಸನಿಯ ಇಕ್ಕೆಲಗಳ ಗರ್ಭಗುಡಿಗಳಲ್ಲಿ ಎಡಗಡೆಗೆ ಪಾರ್ವತಿಯನ್ನು ಬಲಭಾಗದಲ್ಲಿ ವಿಘ್ನೇಶ್ವರನನ್ನು ಪ್ರತಿಷ್ಠಾಪಿಸಲಾಗಿದೆ. ನೀಲಕಂಠೇಶ್ವರನ ಎದುರಿಗೆ ಸ್ಥಾಪಿಸಲಾಗಿರುವ ನಂದಿ ಮೂರ್ತಿ ಚಿಕ್ಕದಾಗಿದ್ದರೂ ಅದರ ಕುಸುರಿ ಕೆಲಸದ ಅಲಂಕಾರ ಬೆರಗು ಎಂಥವರಿಗೂ ಮೂಡಿಸುತ್ತದೆ. ಗರ್ಭಗುಡಿಯ

ದ್ವಾರದಲ್ಲಿ ಶೃಂಗಿ ಮತ್ತು ಭೃಂಗಿ ದ್ವಾರಪಾಲಕರಾಗಿ ಶೋಭಿಸುತ್ತಿದ್ದರೆ ಕೋಲಾಟದಲ್ಲಿ ಗಣಪತಿ ಅಭಯಾ ಅಸ್ತ'ನಾಗಿದ್ದಾನೆ.

ಬಹಳ ಹಿಂದೆ ಈ ಲಿಂಗಗಳು ಬಯಲಿನಲ್ಲೇ ಪ್ರತಿಷ್ಠಾಪನೆಗೊಂಡಿದ್ದು, ಕಾಲಾನಂತರ ಈಗಿರುವ ದೇವಾಲಯಕ್ಕೆ ಸ್ಥಾನಾಂತರಗೊಂಡಿದ್ದು ಈ ಕಾರಣದಿಂದಾಗಿಯೇ ದೇವಾಲಯ ವಿವಿಧ ಹಂತಗಳಲ್ಲಿ ವಿಸ್ತರಣೆಗೊಂಡಿರುತ್ತದೆ. ಬೃಹದಾಕಾರವಾಗಿರುವ ಈ ದೇವಾಲಯದ ಸಮ್ಮುಚ್ಚಯಕ್ಕೆ ಕಳಶಪ್ರಾಯವಾಗಿ ಸುಂದರ ಮಹಾದ್ವಾರ ಮತ್ತು ರಾಜಗೋಪುರವನ್ನು ಇತ್ತಿಚೆಗಷ್ಟೆ ಭಕ್ತರು ಸಮರ್ಪಿಸಿದ್ದಾರೆ. ದೇವಾಲಯದ ದಕ್ಷಿಣ ದಿಕ್ಕಿನ ಹೊರಭಿತ್ತಿಯ ಗೂಡಿನಲ್ಲಿ ದಕ್ಷಿಣಾಮೂರ್ತಿ ಆಸೀನನಾಗಿದ್ದು ಇದೊಂದು ಅಪರೂಪದ ವಿಗ್ರಹವಾಗಿ ಭಕ್ತರನ್ನು ವಿಶೇಷವಾಗಿ ಆಕರ್ಷಿಸುತ್ತದೆ.

ಸ್ವಾಮಿಯನ್ನು ಆರಾಧಿಸುತ್ತಿದ್ದರು, ಕಾಲಾನಂತರ ಈ ಕುಟುಂಬಗಳೆಲ್ಲ ಸ್ಥಿತಿವಂತರಾಗಿ ಸುಖ ಜೀವನ ಸಾಗಿಸುವಂತಾಗಿದ್ದಿತು.

ಇದೇ ಗ್ರಾಮದಲ್ಲಿ ಸತ್ಯಶಾಸ್ತ್ರಿ ಮತ್ತು ಪವಿತ್ರದೇವಿ ಎಂಬ ದಂಪತಿಗಳು ವಾಸವಾಗಿದ್ದರು. ಪತಿ ಪರಾಯಣೆಯಾದ ಪವಿತ್ರದೇವಿ ಪತಿಗೆ ತಕ್ಕ ಸತಿಯಾಗಿ ಲಿಂಗೇಶ್ವರನಿಗೆ ಪರಮಭಕ್ತಳಾಗಿ ಜೀವನ ಸಾಗಿಸುತ್ತಿದ್ದರೂ ಸಂತಾನವಿಲ್ಲದ ಕಾರಣ ಬಹಳ ದುಃಖಿತಳಾಗಿದ್ದಳು. ಆಗ ಸತ್ಯಶಾಸ್ತ್ರಿಯಾದರೂ ಸತಿಯನ್ನು ಮನೆಯಲ್ಲಿ ಬಿಟ್ಟು ದೇವರ ಅನುಗ್ರಹಕ್ಕಾಗಿ ಕಾತರಿಸಿ ಕಾಶೀ ರಾಮೇಶ್ವರಕ್ಕೆ ತೀರ್ಥ'ಯಾತ್ರೆ ಹೊರಡುತ್ತಾನೆ.

ಇತ್ತ ಪವಿತ್ರದೇವಿಗೆ ದೈನಂದಿನ ಜೀವನ ಕಷ್ಟವಾಗಿ ಶೂದ್ರನಾದ ಚೌಡಪ್ಪನ ಮನೆಯಿಂದ ಭಿಕ್ಷೆ ಬೇಡಿ ತುರತ್ತಾಳೆ. ಅದನ್ನೇ ದೊಡ್ಡ ದೋಷ'ವೆಂದು ಪರಿಗಣಿಸಿ ಉಳಿದ ಬ್ರಾಹ್ಮಣ ಕುಟುಂಬಗಳ ಸ್ತ್ರೀಯರು ಅವಳನ್ನು ದೂಷಿಸುವುದರ ಜೊತೆಗೆ ಬಹಿಷ್ಕಾರ ಶಿಕ್ಷೆಗೆ ಒಳಪಡಿಸುತ್ತಾರೆ.

ತೀರ್ಥಯಾತ್ರೆಯಿಂದ ಸತ್ಯಶಾಸ್ತ್ರಿ ಹಿಂದಿರುಗಿ ಬಂದಗಲಂತೂ ಅವನ ಸತಿಯ ಮೇಲೆ ಇಲ್ಲಸಲ್ಲದ ನಿಂದೆಗಳನ್ನು ಕಟ್ಟಿ ಅವಳ ನಡತೆ ಸರಿಯಿಲ್ಲವೆಂದು ದೂರುತ್ತಾರೆ. ಅವರ ನಿಂದನೆಯನ್ನು ನಿಜವೆಂದೆ ನಂಬಿದ ಸತ್ಯಶಾಸ್ತ್ರಿ ತನ್ನ ಪತ್ನಿಯನ್ನು ಸತ್ಯ ಪರೀಕ್ಷೆಗೆ ಒಡ್ಡುತ್ತಾನೆ. ಆಗಲಾದರೂ ಪವಿತ್ರದೇವಿ "ನಾನು ಪತಿವ್ರತೆಯಾಗಿದ್ದರೆ ನನ್ನ ಮೇಲೆ ನಿಂದೆ ಹೊರಿಸಿದವರ ವಂಶ ನಾಶವಾಗಿ ಈ ಗ್ರಾಮವು ಸುಟ್ಟು ಬೂದಿಯಾಗಲಿ" ಎಂದು ಶಾಪನೀಡುತ್ತಾಳೆ.

ಆಗ ಮಧ್ಯಾಹ್ನ ಸುಡು ಬಿಸಿಲಿನಲ್ಲಿ ಅಗ್ರಹಾರವು ಇದ್ದಕ್ಕಿದ್ದಂತೆ ಬೆಂಕಿ ಹತ್ತಿಕೊಂಡು ಉರಿಯಲು ಆರಂಭಿಸಿತು. ಇದೇ ಊರು ಸುಟ್ಟು ಬೂದಿಯಾಯಿತು, ಮನೆಗಳಲ್ಲಿ

ಪ್ರತಿಷ್ಠಾಪಿಸಿದ್ದ ಲಿಂಗಗಳೆಲ್ಲವು ನಿರಾಧಾರವಾಗಿ ನಿಂತಿದ್ದವು, ಉರಿಯುತ್ತಿದ್ದ ಬೆಂಕಿ ಜ್ವಾಲೆಯನ್ನು ಕಂಡ ದಂಪತಿಗಳು ದೇವೇಂದ್ರನನ್ನು ಪ್ರಾರ್ಥಿಸಿಕೊಂಡಾಗ ಘೋರವಾದ ಮಳೆಯು ಧಾರಕಾರವಾಗಿ ಸುರಿಯಿತು. ಊರು ಸುಟ್ಟು ಬೂದಿಯು ದಕ್ಷಿಣ ಪಿನಾಕಿನಿ ನದಿಗೆ ಹರಿದುಕೊಂಡು ಹೋಯಿತು. ಆಗ ಸತ್ಯಶಾಸ್ತ್ರಿ ಮತ್ತು ಪವಿತ್ರದೇವಿ ಪರಮೇಶ್ವರನನ್ನು ಪ್ರಾರ್ಥಿಸಲು ಆಗ ಪ್ರತ್ಯಕ್ಷನಾದ ಈಶ್ವರನು ಸುಟ್ಟುಹೋದ ಅಗ್ರಹಾರದ ಪೂರ್ವದಲ್ಲಿ ದೇವಾಲಯವನ್ನು ನಿರ್ಮಿಸಿರಿ ಎಂದು ಅಣತಿ ಮಾಡಿ ಅಂತರ್ದಾನನಾದನು.

ಆಗ ಸತಿ ಪತಿಗಳಿಬ್ಬರು ಅಲ್ಲಿದ್ದ ಲಿಂಗಗಳನ್ನು ಪಾರ್ವತಿದೇವಿ, ವಿನಾಯಕಮೂರ್ತಿ ಮತ್ತು ಚಂಡಿಕೇಶ್ವರ ಸ್ವಾಮಿಯ ವಿಗ್ರಹಗಳನ್ನು ತಬ್ಬಿಕೊಂಡು ತಂದು ದೇವಾಲಯದಲ್ಲಿಟ್ಟರು. ಹೀಗೆ ತಬ್ಬಿಕೊಂಡು ಹೊತ್ತು ತಂದುದರಿಂದ ಈ ಸ್ವಾಮಿ ತಬ್ಬುಲಿಂಗೇಶ್ವರನೆಂದೇ ಮನೆ ಮಾತಾದನು. ಈ ಲಿಂಗವನ್ನು ಮಕ್ಕಳು ತಬ್ಬಿದರೂ ದೊಡ್ಡವರು ತಬ್ಬಿದರೂ ಅವರವರ ಕೈ ಅಳತೆಗೆ ತಕ್ಕಾಗಿ ಹೊಂದಿಕೊಳ್ಳುತ್ತೆ ಎಂಬ ಪ್ರತೀತಿ ಇದೆ.

ಈ ಆಲಯದಲ್ಲಿ ಸ್ವಾಮಿಗೆ ನಿತ್ಯ ಪೂಜೆ ಜರುಗುತ್ತದೆ. ಭಕ್ತರು ಸಮರ್ಪಣೆ ಇಲ್ಲದಾಗ ಜಲಾಭಿಷೇಕ ಮತ್ತು ಕ್ಷೀರಾಭಿಷೇಕ ಕೈಂಕರ್ಯವಿದ್ದು, ಬೇರೆ ಬೇಳೆ ಭಕ್ತರ ಅಪೇಕ್ಷೆಯಂತೆ ಪೂಜಾ ವಿಧಾನ ಜರುಗುತ್ತದೆ. ತಮ್ಮ ಮನೋಭಿಷ್ಟಗಳು ಈಡೇರಿಕೆಗಾಗಿ ಭಕ್ತರು ಸದಾ ಇಲ್ಲಿ ನೆರೆದಿರುತ್ತಾರೆ.

## ಚಪ್ಪರದಕಲ್ಲು ಏಕಶಿಲಾ ಪಾಂಡವರ ಗುಡಿ ಐತಿಹ್ಯ

ಈ ಐತಿಹ್ಯವು ದೇವನಹಳ್ಳಿಯಿಂದ ದೊಡ್ಡಬಳ್ಳಾಪುರ ಮಾರ್ಗದಲ್ಲಿ ಸಿಗುವ ಒಂದು ಐತಿಹ್ಯ, ಗತಕಾಲದ ಇತಿಹಾಸದ ಬಗ್ಗೆ, ಐತಿಹಾಸಿಕ ಸ್ಥಳಗಳ ಬಗ್ಗೆ ನಮ್ಮೆಲ್ಲರಿಗೂ ಒಂದು ರೀತಿಯ ಅಸಡ್ಡೆ ಮನೆ ಮಾಡಿರುವುದು ಇತ್ತೀಚೆಗೆ ಸರ್ವೆ ಸಾಮಾನ್ಯವಾಗಿದೆ. ನಮ್ಮ ಸುತ್ತಮುತ್ತಲು ಇರುವ ಎಷ್ಟೋ ಐತಿಹಾಸಿಕ(ಪಾರಂಪರಿಕ) ಮಹತ್ವವುಳ್ಳ ಪ್ರಾಚೀನ ಸ್ಥಳಗಳು ನಮಗೆ ಪರಿಚಯವೇ ಇರುವುದಿಲ್ಲ,

ಈಗಿನ ಕಾಲದ ಮಕ್ಕಳಿಗೆ ಅದರಲ್ಲೂ ಕಾನ್ವೆಂಟ್ ಸಂಸ್ಕೃತಿಗೆ ಒಗ್ಗಿ ಹೋಗಿರುವವರಿಗೆ ತಮ್ಮದೇ ವಂಶಾವಳಿಯನ್ನು ಕೇಳಿದರೆ ತಂದೆ, ತಾತ, ಅಜ್ಜಿ, ಇವರ ಹೆಸರುಗಳನ್ನು ಬಿಟ್ಟರೆ ಅವರ ಹಿಂದಿನ ತಲೆಮಾರಿನವರ ಹೆಸರು ಹೇಳುವುದು ತೀರ ವಿರಳ. ಅಂತಹದರಲ್ಲಿ ಕೃತಯುಗ, ತ್ರೇತಾಯುಗ, ದ್ವಾಪರಯುಗದ ಕಾಲದಲ್ಲಿ ನಡೆದಿರಬಹುದಾದ ಘಟನೆಗಳನ್ನು ಯಾರು ತಾನೆ ಕೇಳಿರಲು ಸಾದ್ಯ? ದ್ವಾಪರ ಯುಗದಲ್ಲಿ ನಡೆದಿರುವ ಒಂದು ಘಟನೆಯ

ಸಾಕ್ಷಿಯಾಗಿ ಬೆಳಕಿಗೆ ಬಾರದ ಪ್ರಸಿದ್ದ ಸ್ಥಳವೊಂದು ದೇವನಹಳ್ಳಿ ತಾಲ್ಲೂಕಿನಿಂದ ಎಂಟು ಕಿ.ಮೀ. ದೂರದಲ್ಲಿರುವ ಐ.ವಿ.ಸಿ ರಸ್ತೆಯಲ್ಲಿರುವ ಅಂಚಿನ ಉಗನವಾಡಿ ಗ್ರಾಮದ ಸಂತೆ ಸರ್ಕಲ್ ಆವರಣದಲ್ಲಿ ಇದೆ. ಇದು ಏಕಶಿಲಾ ಚಪ್ಪರದಿಂದ ಕೂಡಿದ್ದು ಇದರ ಉದ್ದ ಸುಮಾರು ೩೦ ಅಡಿಗಳು, ಅಗಲ 25 ಅಡಿಗಳಷ್ಟಿದೆ. ಬಂಡೆಗ'ಲ್ಲಿನ ಮೇಲೆ ಅಧಾರ ರಹಿತ ಕಂಬಗಳ ಮೇಲೆ ನಿಂತಿರುವ ಈ ಶಿಲಾ ಚಪ್ಪರವು "ಪಾಂಡವರ ಗುಡಿ" ಎಂಬ ಹೆಸರಿನಿಂದ ಕರೆಯಲ್ಪಡುತ್ತದೆ ಎಂದು ಸ್ಥಳೀಯ ಇತಿಹಾಸವು ತಿಳಿಸುತ್ತದೆ.

ಇಲ್ಲಿನ ಸ್ಥಳ ಪುರಾಣದ ಪ್ರಕಾರ ಪಾಂಡವರು ಅಜ್ಞಾತವಾಸದಲ್ಲಿ ಇದ್ದಾಗ ಈ ಪ್ರದೇಶವು ದಟ್ಟವಾದ ಅರಣ್ಯದಿಂದ ಕೂಡಿದ್ದಾಗಿರುತ್ತದೆ. ಇದೇ ಮಾರ್ಗವಾಗಿ ಪಾಂಡವರು ಸಂಚರಿಸುತ್ತಿದ್ದಾಗ ಇರುಳಿನ ವೇಳೆ ಇಲ್ಲಿಯೇ ಕಳೆಯಬೇಕಾದ ಪ್ರಸಂಗ ಒದಗಿ ಬರುತ್ತದೆ. ಆಗ ಅರಣ್ಯ ಮಧ್ಯೆ ಎತ್ತರವಾದ ಹಾಗೂ ವಿಶಾಲವಾದ ಮೇಲ್ಮೈನಿಂದ ಕೂಡಿದ ಒಂದು ಬಂಡೆಯ ಸಮೀಪ ಬರುತ್ತಾರೆ. ಅದೇ ಸಮಯದಲ್ಲಿ ವರುಣ ದೇವನ ಆರ್ಭಟದಿಂದ ಧಾರಾಕಾರವಾದ ಮಳೆ ಪ್ರಾರಂಭವಾಗುತ್ತದೆ. ಆಗ ಆಶ್ರಯಕ್ಕಾಗಿ ದ್ರೌಪದಿ ಮತ್ತು ಪಾಂಡವರು ಕಂಗಾಲಾಗುತ್ತಾರೆ. ದ್ರೌಪದಿಯ ಮೊರೆಯನ್ನು ಕೇಳಿದ ಭೀಮಸೇನನು ತನ್ನ ಕಿರು ಬೆರಳಿನಿಂದ ಈ ವಿಶಾಲವಾದ ಶಿಲೆಯನ್ನು (ಶಿಲಾ ಚಪ್ಪರವನ್ನು) ನಾಲ್ಕು ಒರಟು ಕಂಬಗಳ ಮೇಲೆ ಎತ್ತಿ ಇಡುತ್ತಾನೆ. ಇದರಿಂದ ಅವರು ನಿರಾತಂಕವಾಗಿ ಆಶ್ರಯ ಪಡೆಯುತ್ತಾರೆ. ಮರುದಿನ ಏಕಚಕ್ರ ನಗರ (ಈಗಿನ ಕೈವಾರ)ದ ಕಡೆಗೆ ಪ್ರ'ಯಾಣ ಬೆಳಸಿದರು ಎಂಬ ನಂಬಿಕೆ ಸ್ಥಳೀಯರಲ್ಲಿ ಇದೆ.

## ವಾಗಟದ ವರದರಾಜ ಸ್ವಾಮಿಯ ಐತಿಹ್ಯ

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಹೊಸಕೋಟೆ ತಾಲ್ಲೂಕಿನಲ್ಲಿ ವಾಗಟ ಗ್ರಾಮವಿದೆ. ಹೊಸಕೋಟೆಯಿಂದ ಆಗ್ನೇಯ ದಿಕ್ಕಿಗೆ ಹತ್ತು ಕಿ.ಮೀ ದೂರದಲ್ಲಿ ವಾಗಟ ಗ್ರಾಮಕ್ಕೆ ಬೆಂಗಳೂರುನಿಂದ ವೈಟ್ ಫೀಲ್ಡ್ ಮಾಕನಹಳ್ಳಿ ಮಾರ್ಗವಾಗಿ ಅಥವಾ ಹೊಸಕೋಟೆಯಿಂದಲೂ ಹೋಗಬಹುದು. "ಶಾಸನಗಳಲ್ಲಿ ವಾಗಟ ಗ್ರಾಮವನ್ನು ಓವಟ್ಟಂ, ವಟ್ಟಂ, ಇವಟ್ಟಂ, ಉಗಟ್ಟ ಎಂದು ಕರೆಯಲಾಗಿದೆ. ಈ ಸ್ಥಳವು ಅಗ್ರಹಾರವಾಗಿ 'ವರದರಾಜ ಚತುರ್ವೇದಿ ಮಂಗಲಂ' ಎಂದೂ ಪ್ರಸಿದ್ಧಿಯಾಗಿತ್ತು. ಬ್ರಹ್ಮದೇವನ'ಹಳ್ಳಿ ವಾಗಟದಲ್ಲಿ ವರದರಾಜಸ್ವಾಮಿ ದೇವಸ್ಥಾನಕ್ಕೆ ಹೊಂದಿಕೊಂಡಂತೆ ಚತುರ್ವೇದ ಪರಿಣಿತಿ ಪಡೆದಿರುವ ಮಹಾಜನರು ಇದ್ದಿರುವುದರಿಂದ 'ವರದರಾಜ ಚತುರ್ವೇದ ಮಂಗಲಂ' ಎನಿಸಿದೆ."[೬]

ಮಂಗಲ ಎಂಬ ಶಬ್ದ ಕೆಲವು ಊರುಗಳ ಹೆಸರಿನ ಕೊನೆಯಲ್ಲಿ ಸೇರುವ ಪದವಾಗಿದೆ ಉದಾಹರಣೆ : ಕನ್ನಮಂಗಲ, ಚಿನ್ನಮಂಗಲ, ಸಾದರ ಮಂಗಲ ಇತ್ಯಾದಿ.

ನಂತರದ ಸಾಹಿತ್ಯಿಕ ಕೃತಿಗಳಲ್ಲಿ ಭಗೀರಥಪುರ, ಯೋಗಪಥ ಪುರಿ ಅಥವಾ ಯೋಗಪುರಿ ಎಂದು ಸಂಬೋದಿಸಲ್ಪಟ್ಟಿರುವುದು ದೃಡಪಟ್ಟಿದೆ. ವಾಗಟದ ಶ್ರೀ ವರದರಾಜ ಸ್ವಾಮಿ ದೇವಾಲಯವು ಪ್ರಸಿದ್ದವಾಗಿದ್ದು, ದ್ವಾಪರಯುಗದ ಶ್ರೀ ಜನಮೇಜಯ ರಾಜನಿಂದ ಆರಂಭಿಸಿದ ನಂತರ ಶ್ರೀ ಕುಲಶೇಖರ ಆಳ್ವಾರ್ ಅವರಿಂದ ಶಾಸ್ತ್ರೋಕ್ತವಾಗಿ ಪುನಃ ಸ್ಥಾಪಿಸಲ್ಪಟ್ಟ ಮಧ್ಯೆ, ನಾಸ್ತಿಕ ಅಘಾತಕ್ಕೆ ಒಳಗಾಗಿ ಆಗಲೂ ಮೂಲಬಿಂಬಕ್ಕೆ ಆಘಾತವಿಲ್ಲದೆ ರಕ್ಷಿಸಲ್ಪಟ್ಟಿದೆ ಎಂಬುದು ಇಲ್ಲಿನ ಸ್ಥಳ ಪುರಾಣದ ಐತಿಹ್ಯ. ಹೊಯ್ಸಳ– ದ್ರಾವಿಡ ಶೈಲಿಯಲ್ಲಿರುವ ವರದರಾಜ ಸ್ವಾಮಿದೇವಾಲಯವು ಗರ್ಭಗೃಹ, ಅಂತರಾಳ, ಸಭಾಮಂಟಪಗಳನ್ನು ಒಳಗೊಂಡಿದೆ. ಹದಿನಾರು ಕಲ್ಲುಕಂಬಗಳ ವಿಶಾಲ ಮಂಟಪವು ನಂತರದ ಸೇರ್ಪಡೆಯಾಗಿದೆ. ಪಶ್ಚಿಮಾಭಿಮುಖವಾಗಿರುವ ದೇವಸ್ಥಾನಕ್ಕೆ ಕ್ರಮವಾಗಿ ಪಶ್ಚಿಮ, ದಕ್ಷಿಣ ದಿಕ್ಕುಗಳಿಂದ ಪ್ರವೇಶ ದ್ವಾರಗಳಿರುತ್ತವೆ. ನೆಲಮಟ್ಟದಿಂದ ಎತ್ತರದ ಕಟ್ಟೆಯ ಮೇಲೆ ಮೂರು ಮೆಟ್ಟಿಲುಗಳನ್ನೇರಿ ಸಭಾಮಂಟಪವನ್ನು ಪ್ರವೇಶಿಸಬೇಕಾಗುತ್ತದೆ. ಮೆಟ್ಟಿಲುಗಳ ಇಕ್ಕೆಲಗಳಲ್ಲಿ ಅಳಿಶಿಲ್ಪಗಳಿರುತ್ತವೆ. ಇಪ್ಪತ್ತೂರು ಅಡಿ ಅಳತೆಯ ಸಭಾ ಮಂಟಪದ ಮಧ್ಯಭಾಗದಲ್ಲಿ ಆರು ಅಡಿ ಎತ್ತರದ ನಾಲ್ಕು ಕಂಬಗಳಿರುತ್ತವೆ. ಈ ಕಂಬಗಳ ಮೇಲೆ ಸರಳಗೋಹಗೆ, ತೊಲೆ ಅದರ ಮೇಲೆ ಕಲ್ಲು ಚಪ್ಪಡಿಗಳನ್ನು ಹೊದ್ದಿಸಲಾಗಿದೆ. ಸಭಾಮಂಟಪದ ಕಂಬಗಳ ಅಡಿಭಾಗದಲ್ಲಿ ಸಿಂಹ ಶಿಲ್ಪಗಳಿದ್ದು ಅವು ಹಿಂಗಾಲುಗಳ ಮೇಲೆ ಕುಳಿತು ಮಂಗಾಲುಗಳನ್ನು ಜೋಡಿಸಿಟ್ಟುಕೊಂಡಿರುತ್ತದೆ.

ಮುಂದುವರೆದ ಫಲಕಗಳಲ್ಲಿ ಮೊಸಳೆ ಆನೆಕಾಲು ಹಿಡಿದಿರುವ ಗಜೇಂದ್ರ ಮೋಕ್ಷಶಿಲ್ಪ, ಪಾಂಡುರಂಗ ವಿಠಲ, ಕೃಷ್ಣರಾಧೆ, ಗರುಡನ ಮೇಲೆ ಕುಳಿತಿರುವ ನಾರಾಯಣ, ಕೆತ್ತಲಾಗಿದೆ, ಇನ್ನೊಂದು ಕಂಬದ ಹಿಂದೆ ಭಾಗದಲ್ಲಿ ಸಿಂಹಗಳ ಬದಲಿಗೆ ನಾಲ್ಕು ದಳಗಳ ಚಕ್ರ ಹಿರಣ್ಯಕಶಿಪು ಸಂಹಾರ, ಡೋಲು ಬಾರಿಸುವ ನೃತ್ಯಗಾರ್ತಿ, ಕಂಬದ ನರಸಿಂಹ ಹಾಗೂ ನರಸಿಂಹ ಸ್ವಾಮಿ ಹಿರಣ್ಯಕಶಿಪುವನ್ನು ಬೆನ್ನಟ್ಟಿರುವ ದೃಶ್ಯಗಳಿವೆ.

ಮೂರನೇ ಕಂಬದ ಮೇಲೆ ಶ್ರೀ ರಾಮನ ಪಾದಸ್ಪರ್ಶ ಮಾಡಿದ ಆಂಜನೇಯ ವಿನೀತ ಭಾವದಲ್ಲಿ ಕೈಮುಗಿದು ನಿಂತಿರುವ ಲಕ್ಷ್ಮಣ ಹಾಗೂ ಉಗ್ರನರಸಿಂಹರಿದ್ದಾರೆ. ಹಿಂದಿನ ಬಲಗೈಯಲ್ಲಿ ಚಕ್ರ ಎಡಗೈಯಲ್ಲಿ ಶಂಖ ತೋರಿಸಿಲಾಗಿದೆ. ಬಾಲಕೃಷ್ಣ ಹಾಗೂ ಕೊಳಲನೂದುವ ಕೃಷ್ಣನ ಶಿಲ್ಪಗಳು ಸುಂದರವಾಗಿವೆ, ನಾಲ್ಕನೇ ಕಂಬದ ಪಿಂಡಿ ಭಾಗದಲ್ಲಿ

ಅಷ್ಟದಳ ಚಕ್ರ ವಾಲಿ ಸುಗ್ರೀವರು, ಆಮೆ ಹಾಗೂ ಬಲಗೈಯಲ್ಲಿ ದಂಡ ಹಾಗೂ ಎಡಗೈಯಲ್ಲಿ ಕಮಂಡಲ ಹಿಡಿದಿರುವ ಮಹರ್ಷಿಯ ಶಿಲ್ಪಗಳಿರುತ್ತದೆ.

ಗರ್ಭಗೃಹದ ನೇರವಾಗಿ ಸಭಾಮಂಟಪವು ಸಮತಟ್ಟಾಗಿದ್ದು ಎಡ ಬಲ ಪಾರ್ಶ್ವಭಾಗದಲ್ಲಿ ಇಳಿಜಾರಾಗಿರುತ್ತದೆ. ಸಭಾಮಂಟಪದ ಗೋಡೆಗಳು ಮೂರು ಅಡಿ ಅಗಲವಾಗಿವೆ, ಅಂತರಾಳ ಹಾಗೂ ಗರ್ಭಗೃಹದ ವಿಸ್ತೀರ್ಣ ಹೆಚ್ಚೂ ಕಡಿಮೆ ಒಂದೇ ಆಗಿರುತ್ತದೆ.

ಗರ್ಭಗೃಹದಲ್ಲಿ ಮೂರು ಅಡಿ ಎತ್ತರದ ವರದರಾಜ ಸ್ವಾಮಿ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ ಸಭಾಮಂಟಪದ ಪ್ರವೇಶದ್ವಾರದ ಬಲಭಾಗದ ಭಿತ್ತಿಯ ಮೇಲೆ ಸ್ತ್ರೀಯೊಬ್ಬಳು ತನ್ನ ಎರಡೂ ಕೈ ಮುಗಿದು ನಿಂತ ಶಿಲ್ಪವಿದೆ. ಅವಳ ಬಗಲಲ್ಲಿ ಮೀನು ತೋರಿಸಲಾಗಿದೆ. ಎಡಭಾಗದ ಭಿತ್ತಿಯಲ್ಲಿ ಮರದ ಕೊಂಬೆಯ ಕೆಳಗೆ ಅಂಬೆಗಾಲಲ್ಲಿ ಸಾಗುತ್ತಿರುವ ಶಿಲ್ಪವಿದೆ. ಭುಜ ಹಾಗೂ ಬೆನ್ನಿನ ಮೇಲೆ ಕೇಶರಾಶಿ ಹರಡಿದ್ದು ಸೊಂಟಕ್ಕೆ ಡಾಬು, ಕೊರಳಲ್ಲಿ ಕಂಠಹಾರ ಧರಿಸಿದ್ದಾಳೆ.

ಹೊರಭಿತ್ತಿಯಲ್ಲಿ ದಿಗಂಬರ ಪುರುಷ ದ್ವಿಭಂಗಿಯಲ್ಲಿ ನಿಂತಿದ್ದು, ಬಲಗೈಯಲ್ಲಿ ಛತ್ರಿಯಾಕಾರದ ಪುಟ್ಟ ವಸ್ತುವೊಂದನ್ನು ಹಿಡಿದಿದ್ದಾನೆ. ಎಡಗೈ ಬಾಣವನ್ನು ಮೇಲ್ಮುಖವಾಗಿ ಹಿಡಿದಿರುವ ಸಾಂಕೇತಿಕ ಅಭಿವ್ಯಕ್ತಿ ವಿಮರ್ಶಾರ್ಹವಾಗಿದೆ. ಭಿತ್ತಿಯಲ್ಲಿರುವ ಕಂಭ ಮಾದರಿಗಳಲ್ಲಿ ಕಾಂಡ, ಎಡಕಟ್ಟು, ಕುಂಭ, ಕಂಠ, ಮುಚ್ಚಳ, ಕಂಠ ಮತ್ತು ಗೋಧಿಗೆಗಳನ್ನು ಕಂಡಿರಿಸಲಾಗಿದೆ. ಈ ದೇವಸ್ಥಾನವು ಪಾದ, ಬಂಧ, ಅಭಿಸ್ಥಾನವನ್ನು ಹೊಂದಿದ್ದು ಇದರಲ್ಲಿ ಉಪಾನ, ಜಗತಿ, ತ್ರಿಪಟ ಕುಮುದ, ಕಂಪ, ದಳ, ಕಂಡ ಅದರ ಮೇಲೆ ನಾಲ್ಕು ಕಂಬ ಮಾದರಿಗಳು ಮೂಡಿ ಬಂದಿರುತ್ತವೆ. ಇಡೀ ದೇವಾಲಯಕ್ಕೆ ಒಂದು ಮಾತ್ರ ನಕ್ಷತ್ರಾಕಾರದ ಜಾಲಂಧ್ರವಿರುತ್ತದೆ. ಅದರ ಸುತ್ತಲೂ ದೇವಕೋಷ್ಠ ಇರುವುದನ್ನು ತೋರಿಸಲಾಗಿದೆ.

ಗರ್ಭಗೃಹ ಹಾಗೂ ಅಂತರಾಳದ ಹೊರಭಿತ್ತಿ ಭಾಗಗಳು ದುರಸ್ತಿ ಹೊಂದಿ ನವೀಕರಣಗೊಂಡಿರುತ್ತವೆ. ಅದಾಗ್ಯೂ ಅಭಿಸ್ಥಾನದಲ್ಲಿ ಕಂಡುಬರುವ ಕಂಬ ಮಾದರಿಗಳ ಗುರುತುಗಳನ್ನಾಧರಿಸಿ ಹೇಳುವುದಾದರೆ ಗರ್ಭಗೃಹದ ಭಿ'ತ್ತಿಯಲ್ಲಿರಬಹುದಾದ ಕಂಬ ಮಾದರಿಗಳು ಹನ್ನೆರಡು, ಇದರಲ್ಲಿ ಎರಡು ಮೂಲೆಗಂಬ ಮಾದರಿಗಳು, ನಾಲ್ಕು ಕಂಬ ಮಾದರಿಗಳಂತೆ ಕೆಲಸ ಮಾಡಿವೆ. ಮೂರು ದೇವಕೋಷ್ಠಗಳು ಇದ್ದಿರಬಹುದಾದ ಸಾದ್ಯತೆ ಇದೆ. ಅಂತರಾಳದ ಭಿತ್ತಿಯಲ್ಲಿರುಬಹುದಾದ ಕಂಬ ಮಾದರಿಗಳು ನಾಲ್ಕು ಸಭಾಮಂಟಪದ

ದಕ್ಷಿಣ ದಿಕ್ಕಿನಲ್ಲಿರುವ ಪ್ರವೇಶ ದ್ವಾರವು ಐದು ಅಡಿ ಎತ್ತರವಾಗಿದ್ದು, ಅಲಂಕಾರ ರಹಿತ ದ್ವಾರ ಶಾಖೆಗಳನ್ನು ಹೊಂದಿವೆ.

ಈ ದ್ವಾರದ ಬಲಭಾಗದ ಭಿತ್ತಿಯ ಮೇಲೆ ತೂಗಾಡುತ್ತಿರುವ ಸ್ತ್ರೀಶಿಲ್ಪ, ಎಡಭಿತ್ತಿಯಲ್ಲಿ ಬಲಗೈಯಿಂದ ಡೋಲು ಬಡಿಯುತ್ತ ತನ್ನ ಎಡಗೈ ಮೇಲೆತ್ತಿರುವ ಪುರುಷನ ಶಿಲ್ಪವಿದೆ. ಪ್ರತಿ ಸಂವತ್ಸರ ಚಾಂದ್ರಮಾನ ಯುಗಾದಿಯಿಂದ ಪ್ರಾರಂಭವಾಗಿ ಸಪ್ತದಿನ ಸಂಕಲ್ಪದಲ್ಲಿ ಶ್ರೀ ವರದರಾಜ ಸ್ವಾಮಿಯ ವಿಶೇಷ ಪೂಜೆಗಳು ನಡೆಯುತ್ತದೆ ಎಂದು ಸ್ವಾಮಿಬ್ರಹ್ಮರಥೋತ್ಸವವನ್ನು ಶ್ರೀ ಪಾಂಚರಾತ್ಯ ಆಗಮ ರೀತಿಯಲ್ಲಿ ನೆರವೇರಿಸಲಾಗಿದೆ.

ಈ ಸಂದರ್ಭದಲ್ಲಿ ರಥದ ಭಾಗಗಳಾಗಿ ಬಳಸುವ ಕಾಷ್ಠ ಶಿಲ್ಪಗಳು ದೇವಸ್ಥಾನದಲ್ಲಿ ಸಂರಕ್ಷಿಸಿ ಇಡಲಾಗಿದೆ. ಇವುಗಳಲ್ಲಿ ಪ್ರಮುಖವಾದವುಗಳೆಂದರೆ ಮೂರೂವರೆ ಅಡಿ ಎತ್ತರದ ಚತುರ್ಮುಖ ಬ್ರಹ್ಮ ತನ್ನ ಎಡಗೈಯಲ್ಲಿ ಅಶ್ವಗಳೆರಡರ ಹಗ್ಗ ಹಿಡಿದು ಬಲಗೈಯಿಂದ ಛಾಟಿ ಮೇಲೆ ಎತ್ತಿರುವುದು. ಅಶ್ವಗಳು ಮುಂಗಾಲುಗಳನ್ನು ಮೇಲೆತ್ತಿ ಓಡುತ್ತಿರುವುದು. ಎಡ–ಬಲಕ್ಕೆ ಸೇವಕರನ್ನು ನಿಲ್ಲಿಸಿರುವುದು. ರಥದ ನಾಲ್ಕು ದಿಕ್ಕುಗಳಲ್ಲಿ ನಿಲ್ಲಿಸಲು ಆರು ಅಡಿ ಎತ್ತರದ ಸಿಂಹಗಳು ಹಿಂದಿನ ಎರಡು ಕಾಲುಗಳ ಮೇಲೆ ನಿಂತು ಮುಂದಿನ ಎರಡು ಕಾಲುಗಳನ್ನು ಎತ್ತಿ ಹಿಡಿದಿರುವ ಕಾಷ್ಠಶಿಲ್ಪಗಳು ಅತ್ಯಾಕರ್ಷಕವಾಗಿವೆ. ಇವುಗಳಿಗೆ ಅನುಗುಣವಾಗಿ ಬಣ್ಣ ಹಚ್ಚಿ ಪ್ರತಿಷ್ಠಾಪಿಸಲಾದ ಪೂರ್ವಚಾರ್ಯರಾದ ಶ್ರೀಮೈಳ್ಳಾರ್‌ದ್, ಶ್ರೀ ರಾಮಾನುಜಾಚಾರ್, ಶ್ರೀ ಮಳವಾಳಮಾಮುನಿಯವರ ವಿಗ್ರಹಗಳಿರುತ್ತವೆ.

ಸಾಮಾನ್ಯವಾಗಿ ಹೊಯ್ಸಳರ ದೇವಾಲಯವೆಂದೊಡನೆ ನಮ್ಮ ಮನಸ್ಸಿಗೆ ಬರುವುದು ಬಳಪದ ಕಲ್ಲಿನ ಮಧ್ಯಮ, ನಕ್ಷತ್ರಾಕಾರದ ತಳವಿನ್ಯಾಸ, ಮದನಿಕೆಯರ ಹೊರತಾದ, ಸೂಕ್ಷ್ಮ ಕೆತ್ತನೆ ಮತ್ತು ಅಧಿಕ ಅಲಂಕಾರದ ಹೊರಭಿತ್ತಿ ಇರುತ್ತದೆ. ಆದರೆ ಅದರ ಹೊರತಾಗಿ ಕೆಲವು ಹೊಯ್ಸಳ ಶಿಲ್ಪಗಳಿರುತ್ತವೆ ಎಂಬುದಕ್ಕೆ ವರದರಾಜ ಸ್ವಾಮಿ ದೇವಸ್ಥಾನವು ಉದಾಹರಣೆಯಾಗಿರುತ್ತದೆ. ರಮನಹಳ್ಳಿ ಕೆ'ರೆಯ ಉತ್ತರ ದಿಕ್ಕಿನಲ್ಲಿರುವ "ಕ್ರಿ.ಶ.೧೨೯೭ ಶಾಸನವು ಹೊಯ್ಸಳರ ರವಿಶ್ವನಾಥದೇವರ ನಾಲ್ಕನೇ ವರ್ಷದಲ್ಲಿ ಬರೆಸಲಾಗಿದ್ದು, ಇದರಲ್ಲಿ ಇವಟ್ಟಂನ 'ವರದರಾಜ ಚತುರ್ವೇದಿ ಮಂಗಲಂ'ನ ಮಹಾರಾಜರಿಗೆ ನಾಲ್ಕು ಪುಲಿ ಭೂಮಿ ದಾನಬಿಟ್ಟ ಬಗ್ಗೆ ಹೇಳಲಾಗಿದೆ. 'ಪುಲಿಯೂರ ನಾಡು'ನ್ನು 'ಕುರವಂಜಿ ನಾಡು"[೮] ಎಂದು ಕರೆಯಲಾಗಿದೆ. ವಾಗಟ ಗ್ರಾಮದ ಅಂಜಿನೇಯ ದೇವಾಲಯದ ಪೂರ್ವ ಹಳ್ಳದಲ್ಲಿ ನೆಟ್ಟ ಕ್ರಿ.ಶ.೧೩೩೮ರ ಶಾಸನವು ಹೊಯ್ಸಳರ ವೀರಬಲ್ಲಾಳನ ಪರಾಕ್ರಮವನ್ನು ಸೂಚಿಸುತ್ತದಲ್ಲದೆ ಸಿಂಗೇಯ ದಣ್ಣಾಯಕನ ಕಿರಿಯ ಸಹೋದರ ವಲ್ಲಪ್ಪದಣ್ಣಾಯಕನು ಪುಲಿಯೂರನಾಡಿನ

‘ವರದರಾಜ ಚತುರ್ವೇದ ಮಂಗಲಂ’ನ ಎಲ್ಲಾ ಜನರಿಗೆ ತೆರಿಗೆ ರಹಿತ ಭೂಮಿ ಬಿಟ್ಟಿರುವುದನ್ನು ಸೂಚಿಸುತ್ತದೆ.

ಇದು ವಾಗಟದ ಮೇಲ್ಪಂಕ್ತಿ ಜನಾಂಗವಾದ ಬ್ರಾಹ್ಮಣರ ಅಗ್ರಹಾರದಲ್ಲಿ ಈ ವರದರಾಜ ಸ್ವಾಮಿ ದೇವಾಲಯದಲ್ಲಿ ಮೂರ್ತಿಯನ್ನು ಭೃಗು ಮಹರ್ಷಿಗಳು ಪ್ರತಿಷ್ಠಪಿಸಿದರೆಂಬುದಾಗಿ ಪುರಾಣ ಮೂಲ ಐತಿಹ್ಯದ ಬಗ್ಗೆ ಹೇಳುತ್ತಾರೆ ವರದರಾಜ ಸ್ವಾಮಿ ದೇವಾಲಯ ಒಡೆತನ ಹೊಯ್ಸಳ ಕಾಲದಲ್ಲಿ ಅಗ್ರಾಹಾರದ ಬ್ರಾಹ್ಮಣರಿಗೆ ಕೊಟ್ಟು, ಅನೇಕ ಕೊಡುಗೆಗಳನ್ನು ಕೊಟ್ಟಿರುವುದು ಶಾಸನಾಧಾರಗಳಿಂದ ತಿಳಿಯುತ್ತದೆ. ಆದರೆ ಇದಕ್ಕೆ ಸಂಬಂಧಿಸಿದ ಐತಿಹ್ಯವು ದ್ವಾಪರಯುಗಕ್ಕೆ ಕೊಂಡೊಯ್ಯುತ್ತದೆ, ಕೇವಲ ಇಷ್ಟಕ್ಕೆ ಮುಗಿಯುವುದಿಲ್ಲ ಹಿಂದೂಧರ್ಮ ಮತ್ತು ಶ್ರೀ ವೈಷ್ಣವ ಪಂಥದ ಹೆಗ್ಗಳಿಕೆಯನ್ನು ಕುರಿತು ಕತೆಯೊಂದು ಹೇಳಲಾಗುತ್ತದೆ.

ಪ್ರಾಚೀನವಾದ ಈ ದೇವಾಲಯ ಮಧ್ಯಯುಗದಲ್ಲಿ ಮಹಮದೀಯರು ಹಿಂದೂ ದೇವಾಲಯಗಳನ್ನು ಧ್ವಂಸ ಮಾಡುತ್ತಾರೆಂಬ ಭೀತಿಯಿಂದ ಮರಳಿನಿಂದ ವರದರಾಜ ದೇವಾಲಯಗಳನ್ನು ಮುಚ್ಚಲಾಗಿತ್ತು. ಹೀಗೆ ಮುಚ್ಚಲ್ಪಟ್ಟ ದೇವಾಲಯ ಶತಮಾನಗಳ ಕಾಲ ಯಾರ ಕಣ್ಣಿಗೂ ಬೀಳದಂತೆ ಮರೆಯಾಗಿ ಮರೆತು ಹೋದ ಅಧ್ಯಾಯವಾಗಿತ್ತು. ಒಮ್ಮೆ ಗಾಳಿ ಬಂದು ಮರಳಿನ ಕಣಗಳು ದೂರ ಸರಿದು ಶಿಖರ ಕಳಶ ಥಳಥಳನೆ ಹೊಳೆಯುತ್ತಿತ್ತು. ಆಗ ಮರಳಿನ ರಾಶಿಯನ್ನೆಲ್ಲ ಪಕ್ಕಕ್ಕೆ ಸರಿಸಿದಾಗ ಪ್ರಾಚೀನ ದೇವಾಲಯದ ಸ್ವರೂಪದರ್ಶನವಾಯಿತು. ಈ ದೇವಾಲಯವನ್ನು ದುರಸ್ಥಿ ಮಾಡಿ ವರದರಾಜ ಮತ್ತು ಶ್ರೀದೇವಿ–ಭೂದೇವಿ ಮೂರ್ತಿಗಳನ್ನು ಕುಲಶೇಕರ ಆಳ್ವಾರರು ಪ್ರತಿಷ್ಠಾಪಿಸಿದರೆಂಬ ಕತೆಯನ್ನು ಈ ದೇವಾಲಯದ ಧರ್ಮದರ್ಶಿಗಳಾದ ರಾಮಾನುಜ ಎಂಬವರು ಹೇಳಿದರು.

ಕಡೆಯಲ್ಲಿನ ಅಂಶಗಳನ್ನು ಗಮನಿಸಿದರೆ ಸ್ಪಷ್ಟವಾಗುವುದೇನೆಂದರೆ ಶ್ರೀ ವೈಷ್ಣವ ಧರ್ಮಕ್ಕೆ ಅನುಗುಣವಾಗಿ ಕತೆಯನ್ನು ಉದ್ದೇಶ ಪೂರ್ವಕವಾಗಿಯೇ ಹರಿಯ ಬಿಟ್ಟಂತೆ ತೋರುತ್ತದೆ. ಮರಳಿನಲ್ಲಿ ಹೂತು ಹೋದ ದೇವಾಲಯ ಘಟನೆ ಧರ್ಮ ಸಂಘರ್ಷದ ಚಾರಿತ್ರಿಕ’ಗಳನ್ನು ವಿವೇಚಿಸಿಯೇ ಕತೆಯನ್ನು ಕಟ್ಟಲಾಗಿದೆಯೆಂಬುದು ಸ್ಪಷ್ಟವಾಗಿಲ್ಲ. ಏಕೆಂದರೆ ಆಳ್ವಾರರು ಕನ್ನಡದ ವಚನಕಾರರಿಗಿಂತಲು ಪೂರ್ವಿಕರಾಗಿರುವುದರಿಂದ ಮಧ್ಯಕಾಲೀನ ಚರಿತ್ರೆಯ ಸಂದರ್ಭದಲ್ಲಿ ಕುಲಶೇಖರ ಆಳ್ವರರ ವಾಗಟಕ್ಕೆ ಹೇಗೆ ಬರುವುದಕ್ಕೆ ಸಾಧ್ಯ? ಇದು ಕತೆಯ ಹಿಂದಿರುವ ಉದ್ದೇಶ ಸ್ಪಷ್ಟವಾಗಿ ಅರ್ಥವಾಗುತ್ತವೆ.ಶ್ರೀವೈಷ್ಣವ ಬ್ರಾಹ್ಮಣರ ಅಗ್ರಹಾರವಾದ ವಾಗಟದ ವರದರಾಜನ ದೇವಾಲಯದ ಮಹಿಮೆಯನ್ನು

ಹೇಳುವುದಕ್ಕಾಗಿಯೇ ಇಂಥ ಕಥೆಗಳನ್ನು ಕಟ್ಟಲಾಗಿದೆಯೆಂಬುದು ತಿಳಿಯುತ್ತದೆ ಅದುದರಿಂದ ಇದು ಶಿಷ್ಟ ರೂಪದ ಐತಿಹ್ಯವಾಗಿದೆ. ಈ ಐತಿಹ್ಯಕ್ಕೆ ಸಂಬಂಧಿಸಿದಂತೆ ಪ್ರತಿವರ್ಷ ಏಪ್ರಿಲ್ ತಿಂಗಳಿನಲ್ಲಿ ಹೊಸಕೋಟೆ ಭಾಗದಲ್ಲಿ ಮೊದಲು ನಡೆಯುವುದು ಇಲ್ಲಿ ಕರಗ ಮಹೋತ್ಸವ ಮೂರು ದಿನಗಳ ಕಾಲ ನಡೆಯುವ ಪದ್ಧತಿಯನ್ನು ಪ್ರಾಚೀನ ಕಾಲದಿಂದ ನಡೆದುಕೊಂಡು ಬಂದ ಪದ್ಧತಿಯಾಗಿದೆ ಎಂದು ತಿಳಿಸುತ್ತಾರೆ.

## ಹೊಸಕೋಟೆ ದ್ರೌಪದಮ್ಮನ ಐತಿಹ್ಯ

ಹೊಸಕೋಟೆ ಕರಗ ನೂರಾರು ವರ್ಷಗಳಿಂದ ತನ್ನ ಛಾಪು ಉಳಿಸಿಕೊಂಡು ನಿರಂತರವಾಗಿ ಸಾಗಿ ಬರುತ್ತಿರುವ ಒಂದು ಸಾಂಸ್ಕೃತಿಕ ದೈವಿಕ ಆಚರಣೆ. ನೂರಾರು ಕಡೆಗಳಲ್ಲಿ ಕರಗದ ಆಚರಣೆಗಳು ಕಂಡು ಬಂದರೂ ಆಚರಣೆಯಲ್ಲಿ ತನ್ನದೇ ಆದ ವಿಶಿಷ್ಟತೆಯನ್ನು ಹೊಂದಿರುವ ಈ ಕರಗದ ಉತ್ಸವ, ಮೂಲತಃ ವಹ್ನಿಕುಲ ಕ್ಷತ್ರಿಯರೆಂದು ಹೇಳಿಕೊಳ್ಳುವ ತಿಗಳರ ಒಂದು ಮುಖ್ಯ ಆಚರಣೆ, ಕರಗದಲ್ಲಿ ಪೂಜೆಗೊಳ್ಳುವ ದೇವತೆಯೇ ಹೊಸಕೋಟೆಯ ಗ್ರಾಮದೇವತೆ ದ್ರೌಪದಮ್ಮ. ಈಕೆಯ ಬಗೆಗಿನ ಪುರಾಣದ ಹಿನ್ನೆಲೆ ಹೀಗಿದೆ. ದ್ರೌಪದಿಯು ಪಾಂಡವರ ಪತ್ನಿಯಾಗಿ ಸದಾ ಪಾಂಡವರಲ್ಲಿ ಅವರ ಹೃದಯದಲ್ಲಡಗಿರುವ ಕ್ಷಾತ್ರ ತೇಜಸ್ಸನ್ನು ಉದ್ದೀಪನಗೊಳಿಸುತ್ತಾ, ಅವರನ್ನು ಕ್ರೀಯಾಶೀಲರನ್ನಾಗಿಸುತ್ತಾ, ಕುರುಕ್ಷೇತ್ರದ ಮಹಾಯುದ್ದಕ್ಕೆ ನಾಂದಿ ಮಾಡಿ ಅನ್ಯಾಯ ಅಧರ್ಮಗಳನ್ನು ಸದೆಬಡಿದು ಧರ್ಮವನ್ನು ಪುನರ್‌ಸ್ಥಾಪನೆ ಮಾಡಲು ರೂಪುಗೊಂಡ ಶಕ್ತಿ ಸ್ವರೂಪಿಣಿ.

ಈಕೆಯ ಜನ್ಮ ವೃತ್ತಾಂತವನ್ನು ಅರಿಯುವುದು ಅಷ್ಟೇ ಮುಖ್ಯ. ಪುರಾಣ ಕಾಲಗಳಲ್ಲಿ ಆದಿ ಶಕ್ತಿಯು ತ್ರಿಮೂರ್ತಿಗಳ ಸೃಷ್ಟಿ, ಸ್ಥಿತಿ, ಲಯ ಈ ಕಾರ್ಯಗಳಲ್ಲಿ ಸಹಕಾರಿಯಾಗಿ ನಿಲ್ಲುತ್ತಾಳೆ. 'ಹೀಗಿರುವಲ್ಲಿ ಒಂದು ದಿನ ಪಾರ್ವತಿ ರೂಪಳಾದ ಆದಿಶಕ್ತಿಯು ಲಯ ಕಾರ್ಯದಲ್ಲಿ ಮಗ್ನನಾಗಿದ್ದ ಶಿವನಿಗಾಗಿ ಬ್ರಹ್ಮನನ್ನು ಕುರಿತು ತಪಸ್ಸನ್ನಾಚರಿಸುತ್ತಾಳೆ.

ತಪಸ್ಸಿಗೆ ಮೆಚ್ಚಿ ಬ್ರಹ್ಮ ಪ್ರತ್ಯಕ್ಷನಾಗುತ್ತಾನೆ. ಪಾರ್ವತಿಯು ಬ್ರಹ್ಮದೇವನನ್ನು 'ಪತಿಭಿಕ್ಷಾಂದೇಹಿ' ಎಂದು ಕೇಳುತ್ತಾಳೆ. ಆದಿಶಕ್ತಿಯ ದಿವ್ಯ ದರ್ಶನದಿಂದ ಬೆರಗಾಗಿ ಸುಮ್ಮನೆ ನಿಂತಿದ್ದ ಬ್ರಹ್ಮನನ್ನು ಕಂಡು ಮತ್ತೊಮ್ಮೆ 'ಪತಿಭಿಕ್ಷಾಂದೇಹಿ' ಎನ್ನುತ್ತಾಳೆ.ತಪಸ್ಸಿನಿಂದ ಶಕ್ತಿ ಸಂಪನ್ನಳಾಗಿ ಸುವರ್ಣ ಕಿರಣಗಳಂತೆ ಪ್ರಜ್ವಲ್ಯಮಾನಳಾಗಿ ಕಾಣುತ್ತಿದ್ದ ಆದಿ ಶಕ್ತಿಯನ್ನು ನೋಡಿ ಏನು ಹೇಳಬೇಕೆನ್ನುವಷ್ಟರಲ್ಲಿ ಮತ್ತೆ ಮೂರು ಬಾರಿ 'ಪತಿ ಭಿಕ್ಷಾಂದೇಹಿ' ಎಂದು ಬೇಡುತ್ತಾಳೆ.

ಅಷ್ಟರಲ್ಲಿ ಬ್ರಹ್ಮನು ಹಿಂದೆ ಮುಂದೆ ನೋಡದೆ ನಿನ್ನ ಬೇಡಿಕೆಗಳಿಗೆಲ್ಲ ಅಸ್ತು ಎನ್ನುತ್ತಾನೆ. ಆಗ ಪಾರ್ವತಿಯು ಬ್ರಹ್ಮನನ್ನು ಕುರಿತು ಮಹಾಸ್ವಾಮಿ ನಾನು ಕೇಳಿದ್ದು ಒಂದೇ ವರ, ಪತೀಭಿಕ್ಷೆಯನ್ನು, ಆದರೆ ನೀವು ನಿನ್ನ ಎಲ್ಲಾ ಬೇಡಿಕೆಗಳು ಎಂದು ಹೇಳಿದ್ದೀರಲ್ಲ ಎಂದು ಕೇಳಿದಾಗ, ತಾಯಿ ನೀನು ಐದು ಬಾರಿ ಕೇಳಿರುವೆ ಜ್ಞಾಪಿಸಿಕೋ ಎಂದು ಹೇಳುತ್ತಾನೆ. ಈ ಉತ್ತರದಿಂದ ಹೌಹಾರಿದ ಪಾರ್ವತಿ ಬ್ರಹ್ಮನನ್ನೆ ಇದಕ್ಕೆ ಪರಿಹಾರ ಕೇಳುತ್ತಾಳೆ. ಆಗ ಬ್ರಹ್ಮನು ಪತಿ ಪತ್ನಿಯರ ಸಂಬಂಧ ಬದುಕು ಭೂಲೋಕಕ್ಕೆ ಸೀಮಿತವಾದದ್ದು. ನಾನು ವರನವನ್ನು ಕೊಟ್ಟಾಯ್ತು' ನೀನು ಐದು ಜನ್ಮಗಳನ್ನು ಎತ್ತಿ ಐದು ಜನ ಗಂಡಂದಿರೊಂದಿಗೆ ಹೆಂಡತಿಯಾಗಿ ಬಾಳಿ ದೇವಲೋಕಕ್ಕೆ ಬರುವೆಯಾ ಅಥವಾ ಐದು ಜನರನ್ನು ಪತಿಯರನ್ನಾಗಿ ಪಡೆದು ಒಂದೇ ಜನ್ಮದಲ್ಲಿ ಎಲ್ಲಾ ಕಷ್ಟಗಳನ್ನು ಅನುಭವಿಸಿ ದೇವಲೋಕಕ್ಕೆ ಬರುವೆಯೋ ನೀನೇ ತೀರ್ಮಾನ ಮಾಡಿಕೋ ಎಂದು ಹೇಳುತ್ತಾನೆ. ಆಗ ಪಾರ್ವತಿಯು ಐದು ಜನ್ಮದಲ್ಲಿ ದೈವಾಂಶ ಸಂಭೂತರಾದಐವರು ಪತಿಗಳನ್ನು ಪಡೆದು ಧರ್ಮ ಕಾರ್ಯ ಸಾಧಿಸುವುದನ್ನು ಒಂದೇ ಜನ್ಮದಲ್ಲಿ ಅನುಗ್ರಹಿಸು ಎಂದು ಬೇಡುತ್ತಾಳೆ. ಬ್ರಹ್ಮನು ಅಸ್ತು ಎನ್ನುತ್ತಾನೆ.

ಕಾಲಾನಂತರದಲ್ಲಿ ದ್ರುಪದ ರಾಜನು ಮಾಡಿದ ಯಾಗದ ಹವಿಸ್ಸು ಅಗ್ನಿಯನ್ನು ಸೇರಿದಾಗ, ಆ ಅಗ್ನಿಯಿಂದ ಆದಿ 'ಶಕ್ತಿ'ಯು ಒಂದು ಹೆಣ್ಣು ಮಗುವಾಗಿ ಜನ್ಮ ತಾಳುತ್ತಾಳೆ. ಮುಂದೆ ಕೃಷ್ಣೆಯೆಂದು, ದ್ರೌಪದಿಯೆಂದು ಪ್ರಸಿದ್ದಾಳಾಗುತ್ತಾಳೆ. ಹೀಗಾಗಿ ಆದಿಶಕ್ತಿ ಸ್ವರೂಪಳಾದ ದ್ರೌಪದಿಯು ಯಮಧರ್ಮನ ಅಂಶದಿಂದ ಜನಿಸಿದ ಧರ್ಮರಾಯನನ್ನು, ವಾಯುವಿನ ಅಂಶದಿಂದ ಜನಿಸಿದ ಬೀಮಸೇನನನ್ನು, ಇಂದ್ರನ ಅಂಶದಿಂದ ಜನಿಸಿದ ಅರ್ಜುನನನ್ನು, ಅಶ್ವಿನಿ ದೇವತೆಗಳ ಅಂಶದಿಂದ ಜನಿಸಿದ ನಕುಲ ಸಹದೇವರನ್ನು ಹೀಗೆ ಐದು ಜನರನ್ನು ಪತಿಗಳನ್ನಾಗಿ ಪಡೆದು ಮಹಾಭಾರತದ ಸೂತ್ರಧಾರಿಣಿಯಾಗಿ ಭಗವದ್ಗೀತೆಗೂ ಕಾರಣೀಭೂತಳಾದ ಸ್ತ್ರೀ ಶಕ್ತಿಯಾಗಿದ್ದಾಳೆ. ಮಹಾಭಾರತದ ಹತ್ತನೆಯ ಪರ್ವದಲ್ಲಿ ಸೂಚಿಸಿರುವಂತೆ ಪಂಚಪಾಂಡವರು ವನವಾಸದಲ್ಲಿರುತ್ತಾರೆ.

ಈ ಸಂದರ್ಭದಲ್ಲಿ ಶ್ರೀಕೃಷ್ಣನ ಸಲಹೆಯಂತೆ ಪಂಚಪಾಂಡವರು ತಮ್ಮ ವೃದ್ದಿಗಾಗಿ ಅಸ್ತ್ರ ಶಸ್ತ್ರಗಳ ಸಾಧನೆಯಲ್ಲಿ ತೊಡಗಿರುತ್ತಾರೆ. ಈ ಸಂದರ್ಭದಲ್ಲಿ ದುರ್ಲಾಭ ಪಡೆಯಲು ತಿಮಿರಾಸುರನೆಂಬ ರಾಕ್ಷಸನು ದ್ರೌಪದಿಯನ್ನು ಕಾಡತೊಡಗುತ್ತಾನೆ. ದ್ರುಪದನಂದನೆಯು ಶ್ರೀ ಕೃಷ್ಣನ ಮೊರೆಹೊಕ್ಕರೂ ಆದಿ ಶಕ್ತಿಯ ಅಂಶವೇ ದ್ರೌಪದಿ ಎಂದರಿತ ಭಗವಂತನು ನಿನಗಿರುವ ಶಕ್ತಿಯಲ್ಲಿಯೇ ನಿನ್ನನ್ನು ರಕ್ಷಿಸಿಕೋ ಎಂದು ಥೇಡಿಸುತ್ತಾನೆ. ಗೋಪಿ ನಂದನ ಸಹಾಯವಿಲ್ಲದಂತಾಗಿಯೂ ತಿಮಿರಾಸುರನ ಉಪಟಳವನ್ನು ತಾಳಲಾರದೆಯೂ

ಕುಪಿತಗೊಂಡ ಪಾಂಚಾಲಿಯು ವಿಶ್ವರೂಪ ತಳೆದು ಈ ರಕ್ಕಸ ಪಡೆಯ ದ್ವಂಸಕ್ಕಾಗಿ ತನ್ನ ತಲೆಯಿಂದ ಯಜಮಾನನ್ನು, ಹಣೆಯಿಂದ ಗಣಾಚಾರಿಯನ್ನು, ಕಿವಿಗಳಿಂದ ಗೌಡರುಗಳನ್ನು, ಬಾಯಿಂದ ಘಂಟೆ ಪೂಜಾರಿಯನ್ನು, ತನ್ನ ತೋಳುಗಳಿಂದ ವೀರಕುಮಾರರನ್ನು ಸೃಷ್ಟಿಸಿ ಸೈನ್ಯವನ್ನು ಸಜ್ಜುಗೊಳಿಸಿ ರಕ್ಕಸರ ಪಡೆಯನ್ನೇ ನಾಶ ಮಾಡುತ್ತಾಳೆ.'

ಹೀಗೆ ಎಲ್ಲ ರಾಕ್ಷಸರನ್ನು ನಿರ್ನಾಮ ಮಾಡಿದನಂತರ ತಾನು ದೇವಲೋಕಕ್ಕೆ ಹಿಂತಿರುಗಲು ಸಜ್ಜಾಗುತ್ತಾಳೆ. ಇದನ್ನರಿತ ಶ್ರೀಕೃಷ್ಣನು ಅಲ್ಲಿಗೆ ಧಾವಿಸಿ ಆದಿಶಕ್ತಿಯ ವಿಶ್ವರೂಪದ ದರ್ಶನ ಪಡೆದು ಪುಳಕಿತನಾಗಿ ಗಣಾಚಾರಾದಿಯಾಗಿ ವೀರ ಕುಮಾರರನ್ನು ಕುರಿತ ಈ ನಿಮ್ಮ ತಾಯಿಯನ್ನು ಉಳಿಸಿಕೊಳ್ಳಬೇಕಾದರೆ ನೀವಲ್ಲದೆ ಮತ್ಯಾವರಿಂದಲೂ ಸಾಧ್ಯವಾಗುವುದಿಲ್ಲ ಎಂಬುದಾಗಿ ತಿಳಿಸುತ್ತಾನೆ. ಈ ಸೂಕ್ಷ್ಮವರಿತ ವೀರಕುಮಾರರು ಅಮ್ಮಾ ನಮಗೆ ದಿಕ್ಕು ತೋರು. ಅಮ್ಮ ದಿಕ್ಕು ತೋರು ಎಂದು ಕೂಗಿಕೊಳ್ಳುತ್ತಾ ತಮ್ಮ ವೀರ ಖಡ್ಗದಿಂದ ಎದೆಯ ಮೇಲೆ ಬಡಿದುಕೊಳ್ಳುತ್ತಾ ಆತ್ಮಾಹುತಿಗೆ ಸಿದ್ದರಾಗತ್ತಾರೆ. ಈ ಬೇಡಿಕೆಯಿಂದ ಮನಃ ಕರಗಿದ ಆದಿಶಕ್ತಿಯು ತನ್ನ ಕುಮಾರರನ್ನು ಸಂತೈಸುತ್ತಾ ನೀವು ಈ ದೇಶದಲ್ಲಿ ಸತ್ಯಧರ್ಮಗಳ ರಕ್ಷಣೆಗಾಗಿ ಬಾಳು ಮುಂದುವರೆಸಿ, ನಾನು ವರ್ಷದಲ್ಲಿ ಮೂರು ದಿನ ನಿಮ್ಮೊಂದಿಗಿರುತ್ತೇನೆ ಎಂದು ತಿಳಿಸಿ ಶಾಂತಚಿತ್ತಳಾಗಿ ಮತ್ತೆ ದ್ರೌಪದಿಯ ರೂಪಕ್ಕೆ ಮರಳುತ್ತಾಳೆ. ಇದರ ಆಚರಣೆಯ ಅಂಗವೇ ಕರಗ ಶಕ್ತಿ ಉತ್ಸವ.

ಇನ್ನೊಂದು ಪುರಾಣ ಕಥನದಂತೆ ಪಾಂಡವರು ದ್ರೌಪದಿ ಸಮೇತಳಾಗಿ ಕೈಲಾಸಕ್ಕೆ ನಡೆದು ಹೋಗುತ್ತಿರಬೇಕಾದರೆ ದ್ರೌಪದಿಯು ಸ್ವಾಭಾವಿಕ ಸ್ತ್ರೀತನದಿಂದ ಶಕ್ತಿ ಕ್ಷೀಣಿಸಿ ಹಿಂದಾಗುತ್ತಾಳೆ. ಹೀಗಿರುವಲ್ಲಿ ಪಾಂಡವರೈವರು ಬಹಳ ಮುಂದೆ ಸಾಗಿರುತ್ತಾರೆ. ಇದನ್ನರಿತ ತಿಮಿರಾಸುರನು ದ್ರೌಪದಿಗೆ ಉಪದ್ರವ ಕೊಡಲು ಪ್ರಾರಂಭಿಸುತ್ತಾನೆ. ಆಗ ದ್ರೌಪದಿಯು ವಿಶ್ವರೂಪ ತಳೆದು ಗೌಡ, ಗಣಾಚಾರಿ, ಘಂಟೆ ಪೂಜಾರಿ, ವೀರಕುಮಾರರನ್ನು ಸೃಷ್ಟಿಸಿ ರಾಕ್ಷಸರನ್ನು ನಿರ್ನಾಮ ಮಾಡಿದಳು. ಇದರ ಪ್ರತೀಕವೇ ಕರಗ ಎಂಬುದಾಗಿ ತಿಳಿಸುತ್ತದೆ. ಒಟ್ಟಾರೆ ಹೇಳುವುದಾದರೆ ನಮ್ಮ ಸಮಾಜದಲ್ಲಿರುವ ಯಜಮಾನರು ಗೌಡರು, ಗಣಾಚಾರಿಗಳು, ಘಂಟೆ ಪೂಜಾರಿಗಳು, ವೀರಕುಮಾರರು, ಇವರು ಅಗ್ನಿಸಂಭೂತಳಾದ ಆದಿಶಕ್ತಿಯ ವರಪುತ್ರರೆಂತಲೂ ಈ ಜನಾಂಗದ 'ಹಿರಿಯರು ಪುರಾಣ ಕಾಲಗಳಿಂದಲೂ ಉಲ್ಲೇಖಿಸಲ್ಪಟ್ಟು, ಅನಾದಿಕಾಲದಿಂದಲೂ ಅನೂಚಾನವಾಗಿ ಬಂದಿರುವ ವ್ಯವಸ್ಥೆಯ ಪ್ರಮುಖರೆಂತಲು ತಿಳಿದುಬಂದಿರುತ್ತದೆ.

ಹೀಗೆ 'ತಿಗಳ'ರು ಆಚರಿಸುವ ಕರಗದಾಚರಣೆಗೂ ಮಹಾಭಾರತಕ್ಕೂ ಸಂಬಂಧ ಕಲ್ಪಿಸಿ ಕೊಟ್ಟು ತಮ್ಮ ಆಚರಣೆಯನ್ನು ಇವರು ನಿರೂಪಿಸುತ್ತಾರೆ. ಪ್ರತಿ ವರ್ಷವೂ ಹೊಸಕೋಟೆಯಲ್ಲಿ ಆಚರಿಸಲ್ಪಡುವ ಈ ಕರಗಕ್ಕೆ ನೂರಾರು ಮೈಲಿಗಳಿಂದ ಜನರು ಆಗಮಿಸಿ ಬಹಳ ನಿಷ್ಠೆ, ಶ್ರದ್ಧೆಗಳಿಂದ ನಡೆದುಕೊಳ್ಳುತ್ತಾರೆ. ಹೀಗೆ ಕರಗದ ಆಚರಣೆ ತಿಗಳರ ನೇತೃತ್ವದಲ್ಲಿಯೇ ನೆರಬೇರುತ್ತದೆ.

ಸೂರ್ಯ, ಚಂದ್ರ, ಅಗ್ನಿ, ದೇವತೆಗಳನ್ನು ತ್ರಿಕಾಲದಲ್ಲಿ ಆರಾಧಿಸುವುದರಿಂದ ಇವರನ್ನು ತಿಗಳರು ಎಂದು ಕರೆದಿರಬಹುದೆಂದು ಭಾವಿಸಲಾಗಿದೆ. ಶೈವ ಸಂಪ್ರದಾಯ, ವೈಷ್ಣವ ಸಂಪ್ರದಾಯ ಮತ್ತು ಬ್ರಹ್ಮ ಜ್ಞಾನವಾದ ಆತ್ಮ ಸಿದ್ಧಾಂತದ ಬಗ್ಗೆ ಅರಿವು, ಇವೆಲ್ಲವುಗಳ ಮಿಶ್ರಿತವಾದ 'ಸಂಸ್ಕೃತಿ' ಇವರದಾಗಿದ್ದರಿಂದ ಇವರನ್ನು ತ್ರಿಗಣರು ಎಂದೂ ಇದು ರೂಢಿಯಲ್ಲಿ ತಿಗಳರು ಎಂಬುದಾಗಿ ಬಂದಿರಬಹುದೇ ಎಂಬ ಶಂಕೆ ಈ ಹಿಂದೆ ಕಂಡುಬಂದಿತ್ತು. ಆನಂತರ ಅಧ್ಯಯನ ಮತ್ತು ಚರ್ಚೆಗಳಿಂದ ತಿಳಿದುಬಂದಿರುವ ಅರ್ಥವೆಂದರೆ ತಿಗಳರೆಂದು ಗುರುತಿಸುವ ಜನಾಂಗದ ಪ್ರಮುಖ ಕುಲಗಳಾದ ವಹ್ನಿಕುಲ, ಆಗ್ನಿಕುಲ ಮತ್ತು ಶಂಭುಕುಲ ಇವುಗಳೆಲ್ಲವು ಆದಿಶಕ್ತಿಯನ್ನು ಪೂಜಿಸುತ್ತಿರುವುದರಿಂದಲೂ ತಮ್ಮ ಮೂಲ ಪುರುಷನು, "[9]ಯಜ್ಞಕುಂಡದ ಅಗ್ನಿಜ್ವಾಲೆಯಲ್ಲಿ ಜನಿಸಿದ ಮಹಾಪುರಷನೆಂದು ನಂಬಿರುವುದರಿಂದ ದ್ರಾವಿಡ ಭಾಷೆಯಲ್ಲಿ 'ತಿ' ಅಂದರೆ 'ಅಗ್ನಿ' ಎಂಬರ್ಥವು ಇರುವುದರಿಂದ 'ತಿ'ಗಣರು (ಬೆಂಕಿಯ ಪಂಗಡದವರು) ಎಂದು ಸಂಬೋಧಿಸುವುದು ಕಂಡುಬರುತ್ತದೆ.

ಇದು ಮುಂದಿನ ರೂಢಿ ಭಾಷೆಯಲ್ಲಿ ತಿಗಳರು ಎಂಬುದಾಗಿ ಆಗಿದೆ. ಇವರ ಭಾಷೆ 'ಅರವು' ಇವರನ್ನು ಅರಸು ಪಳ್ಳಿಗರು ಎಂದು ಇವರ ಭಾಷೆ 'ಪಳ್ಳಿಭಾಷೆ' ಎಂದು ಮಿ॥ ಅಬರಟ್ ತಿಳಿಸಿದ್ದಾರೆ. ಇವರು ಆಳುವ ರಾಜ್ಯಕ್ಕೆ ಪಳ್ಳಿಸ್ಥಾನ ಎಂಬುದಾಗಿಯೂ, ಪಳ್ಳೀಪುತ್ರರೆಂಬುದನ್ನು ರಾಜ ಪುತ್ರರೆಂಬುದಾಗಿಯೂ, ಪಳ್ಳಿಭಾಷೆ ಎಂಬುದು ಪಾಲಿ ಭಾಷೆ ಎಂದು ಹೇಳುತ್ತಾರೆ. ಪಳ್ಳಿ ಕುಂಡಾ ಎಂದರೆ ಶಾಲೆ, ಉತ್ತಮ ವಿಚಾರಗಳನ್ನು ತಿಳಿಯುವ ಸ್ಥಾನ, ಮಠ ಎಂಬುದಾಗಿದೆ. ತಿಗಳಾರಿ ಭಾಷೆ ಬಗ್ಗೆ ಇತ್ತೀಚೆಗೆ ತಾಳೆಗರಿಗಳು ಶಿವಮೊಗ್ಗ ಜಿಲ್ಲೆಯಲ್ಲಿ ದೊರೆತಿದ್ದರೂ, ಈ ವಂಶಜರೂ ದಕ್ಷಿಣ ಭಾರತದ ಎಲ್ಲಾ ರಾಜ್ಯಗಳಲ್ಲಿ ಬೆರೆತಿವುದರಿಂದ ಅಯಾ ಪ್ರದೇಶ ಭಾಷೆಗಳಲ್ಲಿಯೇ ತಮ್ಮ ನೆಲೆಗಟ್ಟನ್ನು ಕಂಡುಕೊಂಡಿರುವುದು ಕಾಣಬಹುದಾಗಿದೆ.[9]" ಉದಾಹರಣೆಗೆ ಆಂದ್ರದ ಧರ್ಮರಾಜ ಕಾಪು ತೆಲುಗು ಭಾಷೆಯವರಾದರೆ ಕರ್ನಾಟಕದ ಅಗ್ನಿಕುಲದವರು ಕನ್ನಡಕ್ಕೆ ತಾಯಿನುಡಿಯಾಗಿ ನಂಬಿದ್ದಾರೆ.'

"ವಹ್ನಿ ಮತ್ತು ಗೌಂಡರ್ ಮೊದಲಾದವರೂ ತಮಿಳನ್ನೇ ತಾಯಿ ನುಡಿಯನ್ನಾಗಿ ಮೆರೆಸಿದ್ದಾರೆ. ಚೇರಾ, ತೀಯ, ಉಪಕುಲಗಳನ್ನು ಮಲೆಯಾಳಿಗಳಲ್ಲಿ ಕಾಣಬಹುದು. ಕರ್ನಾಟಕದಲ್ಲಿ ಕಂಡುಬರುವ ಇವರ ಉಪಜಾತಿಗಳು ವಹ್ನಿಕುಲ ಕ್ಷತ್ರಿಯ ಅಗ್ನಿಕುಲ ಕ್ಷತ್ರಿಯ, ಶಂಭುಕುಲ ಕ್ಷತ್ರಿಯ ಮತ್ತಿ ತಿಗಳ ಎಂದೂ, ತಮಿಳುನಾಡು ರಾಜ್ಯದಲ್ಲಿ ವಹ್ನಿಯಾರ್, ವಹ್ನಿ, ಪಳ್ಳಿ, ಗೌಂಡರ್ ಪಡೆಯಾಚಿ, ನಾಯಕರ್, ಕುರುವನ್, ಪುಲಿಕುತ್ತಿಯನ್, ವಡನಾಯಕರ್ ಮುಂತಾದ ಉಪಜಾತಿಗಳು, ಕೇರಳ ರಾಜ್ಯದಲ್ಲಿ ತೀಯಾ ಎಂದೂ, ಆಂಧ್ರ ಪ್ರದೇಶದಲ್ಲಿ ಧರ್ಮರಾಜ ಕಾಪು, ತೋಟರೆಡ್ಡಿ, ವಹ್ನಿರೆಡ್ಡಿ ಎಂದೂ, ಗುಜರಾತ್‌ನಲ್ಲಿ ದೀಪಕುಲ ಕ್ಷತ್ರಿಯ ಎಂದೂ, ಬಿಹಾರ್‌ನಲ್ಲಿ ಇಂದ್ರಕುಲ ಎಂದೂ, ಉತ್ತರ ಪ್ರದೇಶ ಮತ್ತು ರಾಜಸ್ಥಾನಗಳಲ್ಲಿ ಸೂರ್ಯಕುಲ ಕ್ಷತ್ರಿಯ ಎಂದು ಹೀಗೆ ಅನೇಕ ಉಪಜಾತಿಗಳು ಭಾರತದ ರಾಜ್ಯಗಳಲ್ಲಿ ಪ್ರಚಲಿತವಾಗಿರುವ ಮೂಲಜನಾಂಗವಾಗಿರುತ್ತದೆ."[೧೦]

ಹೀಗೆ ಕರಗದಮ್ಮ ಅಥವಾ ದ್ರೌಪದಮ್ಮನನ್ನು ಪೂಜಿಸುವ ತಿಗಳ ಜನಾಂಗದವರು ದೇಶದ ನಾನಾ ಭಾಗಗಳಲ್ಲಿ ನೆಲೆನಿಂತಿದ್ದಾರೆ. ಹೊಸಕೋಟೆಯಲ್ಲಿ ಅನೇಕ ದೇವಾಲಯಗಳು ಚೋಳರು ನಿರ್ಮಿಸಿದ ದೇವಾಲಯಗಳಾಗಿವೆ. ಭಾರತವನ್ನು ಆಳಿದವರಲ್ಲಿ ಚೋಳರನ್ನು ಒಳಗೊಂಡಂತೆ ಪಾಂಡ್ಯ, ಪಲ್ಲವ, ಚಾಲುಕ್ಯರೂ ಆಳ್ವಿಕೆ ನಡೆಸಿದರು.

ಅವರಲ್ಲಿ ಚಾಳುಕ್ಯನ ವಂಶಸ್ಥರೇ 'ವಹ್ನಿ' ಕುಲದವರು. ಗಂಗರ ಕಾಲದಲ್ಲಿನ ಕೆಲವು ಆಧಾರಗಳ ಪ್ರಕಾರ ಆಗಿನ ಕಾಲದ ಪಾಳೆಗಾರರು ಹಾಗು ಊರ ಮುಖ್ಯಸ್ಥರು ತಿಗಳರೇ ಆಗಿದ್ದರು. ಗಂಗರೇ ಇವರ ಮೂಲ ಪುರುಷರೆಂದು ಹೇಳಲಾಗಿದೆ. ಅನೇಕ ಧಾರ್ಮಿಕ ಕಾರ್ಯಗಳು ಗಂಗೆಯ ಸನಿಹದಲ್ಲಿಯೇ ನಡೆಯುವುದನ್ನು ಇಲ್ಲಿ ನೋಡಬಹುದು. ಉದಾಹರಣೆಗೆ: ಕರಗ, ಹಸಿಕರಗ, ಅಲುಗು ಸೇವೆ, ಏಳು ಸುತ್ತಿನ ಕೋಟೆ, ವೀರ ಕುಮಾರರ ಸೇವೆ ಮುಂತಾದವುಗಳನ್ನು ಕಾಣಬಹುದು. "ಈಗಲೂ ತಿಗಳರು ನದಿದಡ ಹಾಗು ಕೆರೆ ಕೋಡಿಗಳ ಬಳಿ ವಾಸವಾಗಿರುವುದನ್ನು ಕಾಣಬಹುದು. ಈ ಗಂಗ ದೊರೆಗಳ ಜೀವನ ಶೈಲಿ ಮತ್ತು ತಿಗಳ ಜನಾಂಗದ ಜೀವನ ಶೈಲಿಯ ಬಹಳಷ್ಟು ಪದ್ಧತಿಗಳಲ್ಲಿ ಹೋಲಿಕೆಗಳನ್ನು ಕಾಣಬಹುದಾಗಿದೆ. 'ಈ ಹಿಂದೆ ಚರಿತ್ರಕಾರರು ಶ್ರೀ ಪುರುಷ'ನನ್ನು ಕ್ರಿ.ಶ.೩೦೦ ರಲ್ಲಿ ಆಳಿದ ಗಂಗರ ಮೊದಲ ದೊರೆ ಎಂದು ಗುರುತಿಸಿದ್ದಾರೆ."[೧೧] ಇಂದಿಗೂ ತಿಗಳ ಜನಾಂಗದವರು ಬಹುಸಂಖ್ಯಾತರಾದ ಈ ಗ್ರಾಮ ಈ ಜನಾಂಗದ ನೇತೃತ್ವದಲ್ಲೆ ಇದೆ. ತಿಗಳರ ಅನೇಕ ಪದ್ಧತಿಗಳು ಗಂಗ ಮತ್ತು ಚೋಳರ ಆಡಳಿತ ಪದ್ಧತಿಗೆ ಹತ್ತಿರವಾಗಿದೆ. ತಿಗಳರ ಶೈವ ಆರಾಧಕರೇ. ಶಿವನ ದೇವಾಲಯ ಹೊಸಕೋಟೆಯ ಸುತ್ತಮುತ್ತ ಕಾಣಬಹುದಾಗಿದೆ. ಇವರಲ್ಲಿ

ವ್ಯವಸಾಯ ಹೂವಿನ ವ್ಯಾಪಾರ ಹೆಚ್ಚು ವಿದ್ಯಾಭ್ಯಾಸ ಕಡಿಮೆ. ಕ್ಷೇತ್ರಕಲೆಗಳಾದ ಕುಸ್ತಿ, ಕತ್ತಿವರಸೆಗಳಲ್ಲಿ ಪರಿಣಿತರು. ಗರಡಿ ಮನೆಗಳಲ್ಲಿ ಪಳಗುವ ಇವರು ಉತ್ತಮ ಕಲಾವಿದರು ಕೋಲಾಟದಲ್ಲಿ ಪ್ರವೀಣರು.

ಮೈಸೂರು ಪ್ರದೇಶದಲ್ಲಿ ತಮಿಳು ಭಾಷೆಯನ್ನು ತಿಗಳ ಎಂದು ಕರೆಯಲಾಗಿದೆ. ತಮಿಳು ಮಾದ್ಯ ಬ್ರಾಹ್ಮಣರನ್ನು ಮತ್ತು ಸ್ಮಾರ್ತ ಬ್ರಾಹ್ಮಣರನ್ನು ತಿಗಳ ಎಂದೂ ತಿಳಿಯುವ ವಾಡಿಕೆ ಇತ್ತು. ಮೈಸೂರು ಪ್ರದೇಶದಲ್ಲಿ ನೆಲೆಸಿರುವ ಕೆಲವು ತಿಗಳರ ತಮಿಳನ್ನು ಪೂರ್ತಿಯಾಗಿ ಮರೆತು ಕನ್ನಡವನ್ನೇ ಮಾತನಾಡುತ್ತಾರೆ. ಅಲ್ಲದೆ ಬೆಂಗಳೂರು ಸುತ್ತಮುತ್ತಲಿನವರು ತಮಿಳು ಭಾಷೆಯನ್ನು ಮಾತನಾಡುತ್ತಾರೆ.' ತಾಲ್ಲೂಕಿನಲ್ಲಿ ಕನ್ನಡ ಮಿಶ್ರಿತ ತಮಿಳು ಭಾಷೆ ಮಾತನಾಡುವ ತಿಗಳರಿಂದ ಆಚರಿಸಲ್ಪಡುವ ಕರಗದ ಆಚರಣೆ ಒಂಬತ್ತು ದಿನಗಳ ಮುಂಚೆಯೇ ಸಾಟಿ ಹಾಕುವುದರ ಮೂಲಕ ಪ್ರಾರಂಭವಾಗುತ್ತದೆ. ಹೊಸಕೋಟೆಯಲ್ಲಿ ಸಾಟಿ ಹಾಕುವ ಮೊದಲು ಜಾತ್ರೆಗೆಂದೇ ನೇಮಿಸಲ್ಪಟ್ಟ ಮುಖ್ಯಸ್ಥರಿಂದ ಸಭೆ ನಡೆಯುತ್ತದೆ.

ಇದಕ್ಕೆ ಸರ್ಕಾರದ ಸಹಯೋಗವೂ ಇದ್ದು ನಿರ್ಣಯಗಳನ್ನು ಕೈಗೊಳ್ಳಲಾಗುತ್ತದೆ. ಖರ್ಚು-ವೆಚ್ಚಗಳ ನಿರ್ಣಯವನ್ನು ಇಲ್ಲಿತೆಗೆದುಕೊಳ್ಳಲಾಗುತ್ತದೆ. ತಿಗಳ ಜನಾಂಗದಲ್ಲಿ ಕೆಲವು ಪ್ರಮುಖರು ಕೆಲವು ಖರ್ಚು-ವೆಚ್ಚಗಳನ್ನು ನೋಡಿಕೊಂಡರೆ ಸರ್ಕಾರ ಕೆಲವು ಖರ್ಚು-ವೆಚ್ಚಗಳನ್ನು ಭರಿಸುತ್ತದೆ. ಕರಗ ನಡೆಯುವ ಹದುನೈದು ದಿನಗಳಿಗೂ ಮುಂಚೆಯೇ ಈ ಸಭೆ ಸೇರುತ್ತದೆ. ಸುಮಾರು 6.00ಗಂಟೆಗೆ ಪ್ರಮುಖರೆಲ್ಲ ಸೇರಿ ಕೈಗೊಳ್ಳುವ ನಿರ್ಧಾರಕ್ಕೆ ಎಲ್ಲರ ಸಮ್ಮತಿಯಿರುತ್ತದೆ. ಕರಗ ನಡೆಯುವ ಒಂಭತ್ತು ದಿನಗಳಿಗೂ ಮುಂಚೆ ಈ ಸಭೆಯಲ್ಲಿ ಕೈಗೊಳ್ಳಲಾದ ನಿರ್ಣಯಗಳನ್ನು ಹಾಗೂ ಊರ ಇತರರು ಅನುಸರಿಸಬೇಕಾದ ನಿಧಿ ನಿಷೇಧಗಳನ್ನು ಒಬ್ಬ ಕೆಳಜಾತಿಯ ವ್ಯಕ್ತಿ ಪೋತುರಾಜನೊಂದಿಗೆ ಸೇರಿ ಸಾರುತ್ತಾನೆ. ಹೀಗೆ ಸಾರುವಾಗ ನಿಧಿ ಸಂಗ್ರಹಣಾ ಕಾರ್ಯವೂ ನಡೆಯುತ್ತದೆ. ಇನ್ನೇನು ಜಾತ್ರೆಗೆ ಏಳು ದಿನಗಳಿವೆ ಎನ್ನುವಾಗ 'ಅಂಕುರಾರ್ಪಣ' ಆಚರಣೆ ನೆರವೇರುತ್ತದೆ. ಹಾಗೆಂದರೆ ವಿಷ್ಣು, ಆಂಜನೇಯ, ಗರುಡಾದಿ ದೇವತೆಗಳಿಗೆ ನವಧಾನ್ಯಗಳನ್ನು ಇಟ್ಟು ಪೂಜೆ ಸಲ್ಲಿಸಿ ಮುಂದೆ ನಡೆಸುವ ಜಾತ್ರೆಗೆ ಏನೂ ಅಡ್ಡಿಯಾಗದ ಹಾಗೆ ನೋಡಿಕೊಳ್ಳಲು ದೇವತೆಗಳನ್ನು ಬೇಡುವುದು, ಇದನ್ನು ದ್ವಜಾರೋಹಣ ಸಂದರ್ಭದಲ್ಲಿ ನೆರವೇರಿಸಲಾಗುತ್ತದೆ.

ಹೀಗೆ ಜಾತ್ರೆ ಪ್ರಾರಂಭವಾದ ಮೊದಲದಿನ ಹೊಸಕೋಟೆಯಲ್ಲಿ ನವಗ್ರಹ ಪೂಜೆ, ಹೋಮಗಳನ್ನು ಮಾಡಿ ಎಲ್ಲ ದೇವಾನುದೇವತೆಗಳನ್ನು ಜಾತ್ರೆಗೆ ಆಮಂತ್ರಿಸಲಾಗುತ್ತದೆ.

ಇದನ್ನು 'ಅವಾಹನೆ' ಎನ್ನುತ್ತಾರೆ. ಎರಡನೆಯ ದಿನ ಬೆಳಿಗ್ಗೆ ೧೦.೦೦ ಗಂಟೆ ಸುಮಾರಿಗೆ ನಾನಾ ಜಾತಿಯವರಿಂದ ತೇರನ್ನು ಕಟ್ಟುವ ಕಾರ್ಯ ನಡೆಯುತ್ತದೆ. ಸಹಜವಾಗಿ ಒಂಬತ್ತು ದಿನಗಳಿರುವಾಗಲೇ ತೇರು ಕಟ್ಟುವ ಕಾರ್ಯ ಪ್ರಾರಂಭಗೊಂಡಿರುತ್ತದೆ. 'ಕುಂಬಾರರು' ಸಾಮಾನುಗಳನ್ನು ಸಾಗಿಸಿಕೊಡುತ್ತಾರೆ. ಕುಂಬಾರರು ಸಾಮಾನುಗಳನ್ನು ಜೋಡಿಸಿ ತೇರೆ ಕಟ್ಟುತ್ತಾರೆ. ಇವರನ್ನು ಕುಂಬಾರ ಬಲಜಿಗರೆಂದೂ ಕರೆಯುತ್ತಾರೆ. ಹೀಗೆ ಎರಡನೆ ದಿನ ಮೊದಲೇ ಕಟ್ಟಿ ಸಿದ್ದಗೊಳಿಸಿದ ತೇರು ಕಟ್ಟುವ ಶಾಸ್ತ್ರ ನೆರವೇರುತ್ತದೆ. ಇದೇ ದಿನದ ರಾತ್ರಿ ಸುಮಾರು ೧೦.೦೦ ಕ್ಕೆ 'ಹಸಿಕರಗದಾಚರಣೆ' ನೆರವೇರುತ್ತದೆ. ಇಲ್ಲಿ ಗಂಗೆ ಪೂಜೆ, ಅಲಗುಪೂಜೆ, ಪೋತುರಾಜನಿಗೆ ಮೈಗೂಡುವಿಕೆ ಇವು ನೆರವೇರುತ್ತವೆ. ಆ ರಾತ್ರಿಯೇ ಕೆರೆ ಕಟ್ಟೆಯಿಂದ ಹಸಿ ಕರಗವನ್ನು ಹೊತ್ತು ತಂದು ಧರ್ಮರಾಯಸ್ವಾಮಿ ದೇವಾಲಯದಲ್ಲಿ ಇರಿಸಲಾಗುತ್ತದೆ.

ಮೂರನೇಯ ದಿನ ಬೆಳಗ್ಗೆ ಸುಮಾರು ೧೧.೦೦ ಗಂಟೆಗೆ ಹೊಸದಾಗಿ ವೀರಕುಮಾರರಾಗಿ ದೀಕ್ಷೆ ತೊಟ್ಟವರಿಗೆ ಆಲಗುಸೇವೆಯು ನೆರವೇರುತ್ತದೆ. ಇದೇ ಸಮಯದಲ್ಲಿ ಬಾಯಿಬೀಗದ ಆಚರಣೆಯೂ ನೆರವೇರಿಸಲ್ಪಡುತ್ತದೆ. ಹರಕೆ ಹೊತ್ತವರು ಈ ಸಮಯದಲ್ಲಿ ತಮ್ಮ ಹರಕೆಗಳನ್ನು ತೀರಿಸಿಕೊಳ್ಳುತ್ತಾರೆ. ಇದೇ ದಿನ ರಾತ್ರಿ ಸುಮಾರು ೧೧.೦೦ ಗಂಟೆಗೆ ಮಂಗಳ ವಾದ್ಯಗಳೊಂದಿಗೆ ದೀಪಗಳನ್ನು ದೇವಾಲಯದ ಆವರಣದಲ್ಲಿ ಸೇರಿಸಲಾಗುತ್ತದೆ.

ಯಜಮಾನರ ಮನೆಯ ದೀಪಕ್ಕಿಂತ ಮೊದಲು ಗೌಡರ ಮನೆಯ ದೀಪ ಬಂದು ದೇವಾಲಯದ ಮುಂದೆ ನೆರೆದಿರುತ್ತದೆ. ಮೊದಲಿಗೆ ದೀಪಗಳು ಮುಖ್ಯ ಬೀದಿಗಳಲ್ಲಿ ಹೋಗಿ ಧರ್ಮರಾಯನ ದೇವಾಲಯದ ಬಳಿ ಬಂದು ಹೊಂಡ ಹಾಯಲು ಸಿದ್ದಗೊಂಡು ನಿಲ್ಲುತ್ತದೆ. ದೀಪಗಳನ್ನು ಹೊತ್ತರವರಲ್ಲಿ ವನ್ನೀಕುಲ ಕ್ಷತ್ರಿಯರ ದೀಪಗಳೇ ಸುಮಾರು ೩೦೦ಕ್ಕೂ ಹೆಚ್ಚು ಇರುತ್ತವೆ. ಮೊದಲು ಹೊಸಕೋಟೆಯ ಗ್ರಾಮದೇವತೆ 'ರೇಣುಕಮ್ಮನ' ಸೇವೆಗೈದು ತದನಂತರ ಧರ್ಮರಾಯನಿಗೆ ದೀಪಗಳ ಸೇವೆ ಸಲ್ಲುತ್ತವೆ. ದೀಪಗಳಿಗೆ ಬಿದಿರಿನ ಕಡ್ಡಿಗಳಿಗೆ ಹೂವಿನಲ್ಲಿ ಅಲಂಕಾರಗೊಳಿಸಿರುತ್ತಾರೆ. ಇಲ್ಲಿ ಸುಗಂಧರಾಜ ಹಾಗೂ ಮಲ್ಲಿಗೆ ಹೂಗಳಿಗೆ ಪ್ರಮುಖ ಸ್ಥಾನವನ್ನು ನೀಡಲಾಗಿದೆ. ಹೂಕಡ್ಡಿಗಳಿಂದ ಸುತ್ತುವರಿದು ಅಲಂಕರಿಸಲ್ಪಟ್ಟ ದೀಪಗಳು ದೇವಾಲಯದ ಮುಂದೆ ಬಂದು ನಿಲ್ಲುತ್ತವೆ. ದೇವಾಲಯದ ಮುಂದೆ ಸುಮಾರು ೫ ರಿಂದ ೬ ತಾಸುಗಳ ಹಿಂದೆಯೇ ಹೊಂಡ ಸಿದ್ದಗೊಂಡಿರುತ್ತದೆ. ಹೊಂಡ ಸುಮಾರು ಹತ್ತು ಅಡಿ ಉದ್ದ, ಆರು ಅಡಿ ಅಗಲವಿದ್ದು, ಸೌದೆ ಉರಿದು ಕೆಂಡವಾಗಿಪರಿವರ್ತಿತಗೊಂಡಿರುತ್ತದೆ. ಇದರ ಮುಂದೆ ಅನೇಕ ಕಲಾವಿದರು ತಮ್ಮ ಸಾಹಸ ಪ್ರದರ್ಶನ ಮಾಡುತ್ತಿರುತ್ತಾರೆ. ಬಹಳ

ನೇಮದಿಂದ ತಯಾರಿಸಲ್ಪಟ್ಟ ತಂಬಿಟ್ಟಿನ ದೀಪಗಳನ್ನು ಹಿಡಿದು ಭಕ್ತಸ್ತೋಮ ತುದಿಗಾಲಿನಲ್ಲಿ ಹೊಂಡ ಹಾಯಲು ಕಾತರದಿಂದ ನಿಂತಿರುತ್ತಾರೆ. ದೀಪಗಳು ಹೀಗೆ ಬಂದು ಹೊಂಡದ ಮುಂಭಾಗದಲ್ಲಿ ನಿಂತ ತಕ್ಷಣ ಹೊಂಡದಲ್ಲಿ ದೇವರು ನೆಲಸುತ್ತಾರೆಂಬ ಪ್ರತೀತಿ ಇದೆ. ಆ ಕಾರಣಕ್ಕೆ ಕೆಂಡ ಭಕ್ತರಿಗೆ ಸುಡುವುದಿಲ್ಲ ಎಂದ ಜನರು ನಂಬುತ್ತಾರೆ. ಕರಗ ಹೊರುತವಾತ ಹೊಂದಕ್ಕೆ ಪೂಜೆ ಸಲ್ಲಿಸಿ ಆರತಿ ಬೆಳಗಿ ಮೊದಲಿಗೆ ಹೊಂಡ ಹಾಯುತ್ತಾರೆ. ತದನಂತರ ಇತರ ಪ್ರಮುಖರು ದೀಪಗಳನ್ನು ಹೊತ್ತ ಹೆಂಗಳೆಯರು, ಜನರು ಹೊಂಡ ಹಾಯುತ್ತಾರೆ.

ಹೀಗೆ ಹೊಂಡ ಹಾಯುವವರೆಗೆ ಅದು ತಣ್ಣಗಿದ್ದು ಹೊಂಡ ಹಾದು ಹೋದ ಆನಂತರ ಅದರೊಳಗಿನ ದೇವತೆ ಯಥಾಸ್ಥಾನಕ್ಕೆ ಹೋಗುವುದರಿಂದ ಹೊಂಡದಲ್ಲಿನ ಕೆಂಡ ಸುಡುತ್ತದೆಂದು ಗ್ರಾಮೀಣರು ಭಾವಿಸುತ್ತಾರೆ. ಇದೇ ಸಂದರ್ಭದಲ್ಲಿ ಧರ್ಮರಾಯನ ದೇವಾಲಯದಲ್ಲಿ ಆಲಗುಗಳನ್ನು ಇಟ್ಟು ಪೂಜೆ ಸಲ್ಲಿಸಲಾಗುತ್ತದೆ. ಅದನ್ನೇ ವೀರಕುಮಾರರು ಕರಗದ ದಿನ ಬಳಸುತ್ತಾರೆ. ಹೀಗೆ ದೀಪಗಳ ಮೆರವಣಿಗೆ ರಾತ್ರಿ ೨.೦೦ ಗಂಟೆಯವರೆಗೆ ನಡೆದು, ಯಜಮಾನರ ಮನೆಯವರ ಮುಂದಾಳತ್ವದಲ್ಲಿ ಇತರ ಎಲ್ಲಾ ದೀಪಗಳನ್ನು ಒಳಗೊಂಡು ದೇವಾಲಯಕ್ಕೆ ಬಂದು ಹೊಂಡ ಹಾಯುವ ಹೊತ್ತಿಗೆ ರಾತ್ರಿ ಸುಮಾರು ೩.೩೦ ಆಗಿರುತ್ತದೆ. ಹೀಗೆ ಮೂರನೆಯ ದಿನದ ಆಚರಣೆಗಳು ನೆರವೇರುತ್ತವೆ.

ನಾಲ್ಕನೆಯ ದಿನ ಹತ್ತು ಗಂಟೆ ಸುಮಾರಿಗೆ ತೇರಿಗೆ ಕುರಿಯ ಬಲಿಯನ್ನು ನೀಡಲಾಗುತ್ತದೆ. ಕುಂಬಾರ ಬಲಜಿಗರ ಪುರೋಹಿತನೊಬ್ಬನಿಂದ ತೇರಿಗೆ ಕುರಿ ಬಲಿ ನೀಡಿ, ಅದರ ರಕ್ತವನ್ನು ಮೊದಲೇ ತೇರಿನ ಮುಂದೆ ಪೂಜೆ ಮಾಡಿ ಇರಿಸಲಾದ ಅನ್ನದ ನೈವೇದ್ಯದಲ್ಲಿ ಕಲಸಿ, ಚಕ್ರಕ್ಕೆ ತೇರಿಗೆ ಚೆಲ್ಲಲಾಗುತ್ತದೆ. ತದನಂತರ ಪುರೋಹಿತರು ಪುಣ್ಯಾರ್ಚನೆ ಮಾಡುವ ಮೂಲಕ ತೇರನ್ನು ಶುದ್ದಗೊಳಿಸಲಾಗುತ್ತದೆ. ಅನ್ನ ಇಟ್ಟು ಪೂಜಿಸುವಾಗ 'ಕೊಡ್ತಿ'ಗಳನ್ನು ಇಟ್ಟು ಪೂಜಿಸಲಾಗುತ್ತದೆ. 'ಕೊಡ್ತಿ' ಎಂದರೆ ಚಕ್ರಗಳು ಮುಂದಕ್ಕೆ ಹೋಗದಂತೆ ತಡೆ ಹಿಡಿವ ಮರದ ಸಾಧನಗಳು, ಹೀಗೆ ಶುದ್ದಿಗೊಳಿಸಿದ ತೇರನ್ನು 'ಮಡಿತೇರು' ಎನ್ನಲಾಗುತ್ತದೆ. ಈ ಮಡಿ ತೇರು 'ನಗರ್ತೇಶ್ವರ' ದೇವಾಲಯದ ಸಮೀಪದಲ್ಲಿ ಇರಿಸಲಾಗಿರುತ್ತದೆ. ಬಲಿಯನಂತರ ಮಾಡುವ ಪುಣ್ಯಾರ್ಚನೆಗೆ ಹಾಲು, ತುಪ್ಪ, ಮೊಸರು, ಗಂಜಳ(ಗೋಮೂತ್ರ) ಮತ್ತು ಸಗಣಿಯನ್ನು ಬಳಸಲಾಗುತ್ತದೆ. ಮೊದಲಿಗೆ ರಥವನ್ನು ಶುದ್ದಿ ಮಾಡಿ ೫೪ ಕಲಶಗಳನ್ನು ಇಟ್ಟು ಪೂಜಿಸಿದನಂತರ ಅವಿಮುಕ್ತೇಶ್ವರನ ಉತ್ಸವ ಮೂರ್ತಿಯನ್ನು ತಂದು ಪ್ರಧಾನ ಅರ್ಚಕರು ಪೂಜೆ ಮಾಡಿ ತೇರಿನಲ್ಲಿ ಇರಿಸುತ್ತಾರೆ. ಇದೇ ಸಂದರ್ಭದಲ್ಲಿ 'ಅರವಂಟಿಗೆ' ಸೇವೆ ಸಲ್ಲುತ್ತದೆ.

ಹೀಗೆ ಅವಿಮುಕ್ತೇಶ್ವರನನ್ನು ಹೊತ್ತ 'ತೇರು' ಊರಿನ ಪ್ರಮುಖ ಬೀದಿಗಳಲ್ಲಿ ಮೆರವಣಿಗೆ ಹೊರಡುತ್ತದೆ. ಸುಮಾರು ಮಧ್ಯಾಹ್ನ ಹನ್ನೆರೆಡು ಗಂಟೆಗೆ ಪ್ರಾರಂಭಗೊಳ್ಳುವ ತೇರೆಳೆಯುವ ಪ್ರಕ್ರಿಯೆ ಸಂಜೆ ನಾಲ್ಕರವರೆಗೆ ನಡೆಯುತ್ತದೆ. ಇದೇ ಸಂದರ್ಭದಲ್ಲಿ ಹರಕೆ ಹೊತ್ತ ಭಕ್ತರಿಂದ ದೇವರ ಕಲಶಕ್ಕೆ ಬಾಳೆಹಣ್ಣು ದವನದ ಸೇವೆ ಸಲ್ಲುತ್ತದೆ. ತೇರು ಮುನ್ನಡೆದಂತೆಲ್ಲ ಭಕ್ತರು ಬಾಳೆಹಣ್ಣು ದವನವನ್ನು ತೇರಿನ ಮೇಲೆ ಎಸೆಯುತ್ತಾರೆ. ಹರಕೆಗಳಲ್ಲಿ ಭಿನ್ನವಾದ ಹರಕೆ ಹೊತ್ತ ಭಕ್ತರನ್ನು ಇಲ್ಲಿ ಕಾಣಬಹುದು. ಮದುವೆ ಕಾರಣಕ್ಕೆ, ಉದ್ಯೋಗಕ್ಕೆ, ಮಕ್ಕಳಾಗಲೆಂದು ಹೀಗೆ ನಾನಾ ರೀತಿಯ ಹರಕೆಗಳನ್ನು ಮಾಡಿಕೊಂಡ ಭಕ್ತರ ತಮ್ಮ ಹರಕೆಗಳನ್ನು ಸಲ್ಲಿಸುತ್ತಾರೆ. ಹರಕೆ ಹೊತ್ತು ಮಕ್ಕಳಾದವರು ತಮ್ಮ ಮಕ್ಕಳನ್ನು ತೇರಿನ ಅಡಿ ಇಟ್ಟು ತೆಗೆಯುತ್ತಾರೆ. ಇದು ಕೃತಜ್ಞತೆ ಸಮರ್ಪಣಾ ಭಾವವನ್ನು ಸೂಚಿಸುತ್ತದೆ. ಹೀಗೆ ಊರೆಲ್ಲ ಸುತ್ತಿಬಂದ ತೇರು ಸಂಜೆ ಆರು ಗಂಟೆಗೆ ಊರಿನ ಪ್ರಮುಖ ಸ್ಥಳದಲ್ಲಿ ಬಂದು ನಿಲ್ಲುತ್ತದೆ. ಹೀಗೆ ಅವಿಮುಕ್ತೇಶ್ವರ ಸ್ವಾಮಿ ರಥೋತ್ಸವ ಮುಗಿಯುತ್ತದೆ.

ಇದೇ ದಿನ ರಾತ್ರಿ ಸುಮಾರು ಒಂದು ಗಂಟೆಗೆ ದ್ರೌಪದಮ್ಮನಹೂವಿನ ಕರಗದ ಶಕ್ತ್ಯೋತ್ಸವ ಪ್ರಾರಂಭಗೊಳ್ಳುತ್ತದೆ. ಇದಕ್ಕೂ ಮುನ್ನ ರಾತ್ರಿ ಸುಮಾರು ಎಂಟು ಗಂಟೆಗೆ ಕರಗ ಹೊರುವಾತನೂ ಸೇರಿದಂತೆ, ವೀರಕುಮಾರರು ಊರ ಕೆರೆಕಟ್ಟೆಯ ಬಳಿ ಪೂಜೆ ನಡೆಸುತ್ತಾರೆ. ಇಲ್ಲಿ ಪೋತುರಾಜನಿಗೆ ಮೈದುಂಬುತ್ತದೆ. ಹೀಗೆ ಮೂದುಂಬಿದಾಗ ಚಾಟಿಯವ ಇವನನ್ನು ಥಳಿಸುತ್ತಾನೆ. ಆನಂತರ ಚಾಟಿಯವನೊಂದಿಗೆ ಏಳುಸುತ್ತಿನ ಕೋಟೆಯ ಮುಂದೆ ಎಲ್ಲರೂ ಕೊಂಡ ಹಾದು ದೇವಲಾಯಕ್ಕೆ ಹೋಗುತ್ತಾರೆ. ಅಲ್ಲಿ ಕೆಲವರು ಮಾತ್ರ ಧರ್ಮರಾಯನ ಗರ್ಭಗುಡಿಯೊಳಗೆ ಹೋಗಿ 'ಕರಗ' ಕಟ್ಟುತ್ತಾರೆ. ಇದನ್ನು 'ಹೂವಿನ ಕರಗ' ಎನ್ನಲಾಗುತ್ತದೆ.

ರಾತ್ರಿ ಸುಮಾರು ಒಂದು ಗಂಟೆಯ ಸಮೀಪದಲ್ಲಿ 'ಶ್ರೀದ್ರೌಪದಮ್ಮನ ಹೂವಿನ ಕರಗ' ದೇವಾಲಯದಿಂದ ಹೊರಡುತ್ತದೆ. ಮೊದಲು ರೇಣುಕಾಂಬ ದೇವಾಲಯದ ಬಳಿ ಬಂದು ಪೂಜೆ ಸ್ವೀಕರಿಸಿ ಆನಂತರ ಯಜಮಾನರ ಮನೆ ಮುಂದೆ ಹೋಗಿ ಪೂಜೆ ಸ್ವೀಕರಿಸುವ ಕರಗದ ಮುಂದೆ ಹಾಗೂ ಹಿಂದೆ, ವೀರಕುಮಾರರು ಅಲಗುಗಳನ್ನು ಹಿಡಿದು ಡಿ–ಡಿಕ್–ಡಿ ಎಂದು ಧ್ವನಿ ಮಾಡುತ್ತಾ ತಮ್ಮ ಎದೆಗೆ ಅದನ್ನು ಹೊಡೆದುಕೊಳ್ಳುತ್ತಾ ಭಕ್ತಿಪೂರ್ವಕವಾಗಿ ಸಾಗುತ್ತಾರೆ. ಈ ಕರಗಕ್ಕೆ ಎಲ್ಲಾ ಜಾತಿಯ ಜನರೂ ಸೇವೆ ಸಲ್ಲಿಸುತ್ತಾರೆ. ಹೀಗೆ ಹೂವಿನ ಕರಗ ಮುಂದೆ ಮುಂದೆ ಹೋದಂತೆಲ್ಲಾ ಕರಗದ ಮೇಲೆ ಭಕ್ತರು ಮಲ್ಲಿಗೆ ಹೂಗಳನ್ನು ಎರಚಿ ತಮ್ಮ ಗೌರವ ಸಲ್ಲಿಸುತ್ತಾರೆ. ಹೀಗೆ ಬೆಳಗಿನ ಜಾವದವರೆಗೂ ಕರಗ ಊರೆಲ್ಲಾ ಸಂಚರಿಸಿ ಬೆಳಗ್ಗೆ ಏಳುಗಂಟೆಗೆ ಗೌಡರ ಮನೆಯ ಮುಂದೆ ಹಾದು ದೇವಾಲಯಕ್ಕೆ ಬಂದು ತಲುಪುತ್ತದೆ.

ಈ ಕರಗ ಹೊರಟು ಪ್ರಮುಖ ಬೀದಿಗಳಲ್ಲಿ ಸಂಚರಿಸುವಾಗಲೇ ಸುತ್ತಮುತ್ತಲ ಹಳ್ಳಿಗಳಿಂದ ದೇವಾನುದೇವತೆಗಳ ಪಲ್ಲಕ್ಕಿಗಳೂ ಮೆರವಣಿಗೆಯಲ್ಲಿ ಹೊರಟು ಪೂಜೆಕೈಗೊಳ್ಳುತ್ತವೆ. ಹೊಸಕೋಟೆಯ ಸುತ್ತಮುತ್ತಲ ಸ್ಥಳಗಳಾದ ಕೆಳಗಿನ ಪೇಟೆ, ಗೌತಮ ಕಾಲೋನಿ, ಕುರುಬರ ಪೇಟೆ, ಕಮ್ಮಾರ ಪೇಟೆ, ಮೇಲಿನ ಪೇಟೆ ಕೋಡಿಹಳ್ಳಿ, ಚಿಕ್ಕ ತಿಗಳರ ಪೇಟೆ, ಕಣ್ಣೂರಹಳ್ಳಿ, ಟಿ.ಜಿ.ಬಡಾವಣೆ, ರಾಜ್‌ಸಿಂಗ್ ಬಡಾವಣೆ ಹಾಗೂ ಸರ್.ಎಂ.ವಿ. ಬಡಾವಣೆಗಳಿಂದ ಅನೇಕ ದೇವರ ಉತ್ಸವಮೂರ್ತಿಗಳು ಮೆರವಣಿಗೆಯಲ್ಲಿ ಹೊರಡುತ್ತವೆ. ಕರಿಮಾರಮ್ಮ ಕೋಟೆ ಗಂಗಮ್ಮ, ಕಮ್ಮವಾರಿ ಮಾರಮ್ಮ, ಪಟಾಲಮ್ಮ ಈರಮ್ಮ, ಎಲ್ಲಮ್ಮ, ಕಣ್ಣೂರಮ್ಮ, ಮಾರಮ್ಮ ಮುಂತಾದ ಗ್ರಾಮದೇವತೆಗಳ ಉತ್ಸವ ಮೂರ್ತಿಗಳಿಗೆ ಹಾಗೂ ನಗರೇಶ್ವರ, ಕಾಶಿ ವಿಶ್ವೇಶ್ವರ, ಶಿವ, ವೆಂಕಟರಮಣ, ಆಂಜನೇಯ, ರಾಘವೇಂದ್ರ, ಅಯ್ಯಪ್ಪ ಹಾಗೂ ವರದರಾಜ ಸ್ವಾಮಿ ಮುಂತಾದ ಶಿಷ್ಟ ದೇವರ ಉತ್ಸವ ಮೂರ್ತಿಗಳಿಗೆ ಇಲ್ಲಿ ಪೂಜೆ ಸಲ್ಲಿಸಲಾಗುತದೆ.

ದೇವಾಲಯದಲ್ಲಿ ಬೆಳಗ್ಗೆ ಆರರಿಂದ ಹತ್ತುಗಂಟೆಯವರಗೆ ಅನ್ನದಾನ ನಡೆಸಲಾಗುತ್ತದೆ. ಭಕ್ತಾಧಿಗಳು ಅನ್ನದಾನಕ್ಕೆ ಸಹಕರಿಸಬಹುದು. ಅಕ್ಕಿ, ಬೇಳೆ, ಊಟದ ಎಲೆ, ಸೌದೆ, ಹಣ ಹೀಗೆ ವಿವಿಧ ಬಗೆಯ ವಸ್ತುಗಳನ್ನು ಇಲ್ಲಿ ದಾನವಾಗಿ ನೀಡಲಾಗುತದೆ. ಐದನೆ ದಿನ, ಸಂಜೆ ವಸಂತೋತ್ಸವ ನೆರವೇರುತ್ತದೆ. ಇದನ್ನು ಓಕುಳಿಯಾಟ ಎಂದು ಕರೆಯಲಾಗುತ್ತದೆ. ರಾತ್ರಿ ಸುಮಾರು ಹನ್ನೊಂದಕ್ಕೆ ಧರ್ಮರಾಯ ದೇವಾಲಯದಲ್ಲಿ ಗಾವು ಸಿಗಿಯುವ ಆಚರಣೆ ನೆರವೇರುತ್ತದೆ. ದೇವಾಲಯದ ಬಳಿ ಪುರಾಣವನ್ನು ಘಂಟೆ ಪೂಜಾರರು ನಡೆಸಿಕೊಡುತ್ತಾರೆ. ಈ ಪುರಾಣ ಪಾರಾಯಣದನಂತರ ಬೆಳಗಿನ ಕೋಳಿ ಕೂಗುವ ಜಾವದಲ್ಲಿ ಪೋತುರಾಜನನ್ನು ಅವಾಹನೆ ಮಾಡಿ ಪೂಜಿಸಲಾಗುತ್ತದೆ. ಆತನ ಶೌರ್ಯ ಪರಾಕ್ರಮಗಳನ್ನು ಹಾಡಿ ಹೊಗಳಿದನಂತರ ಅವನ ರೋಷವನ್ನು ಸಾಂತ್ವನಗೊಳಿಸಲು ಕರಿಯಬಣ್ಣದ ಮೇಕೆಯನ್ನು ಸಮರ್ಪಿಸುತ್ತಾರೆ. ಆನಂತರ ಅಲ್ಲಿ ನೆರೆದವರಿಗೆ ಅನ್ನವನ್ನು ಪ್ರಸಾದದ ರೂಪದಲ್ಲಿ ವಿತರಿಸುತ್ತಾರೆ. ಅದಕ್ಕೆ ಕುರಿಯ ರಕ್ತವನ್ನು ಬೆರೆಸಲಾಗಿರುತ್ತದೆ. ಆನಂತರ ಮಹಾಮಂಗಳಾರತಿಯಾಗುತ್ತದೆ. ಇದನ್ನು 'ಗಾವು ಸಿಗಿಯುವುದು' ಎನ್ನುತ್ತಾರೆ. ಹೀಗೆ ಪೋತುರಾಜನಿಗೆ ಮೈಗೂಡುವಾಗ ವೀರ ಚಾಟಿಯಿಂದ ಹೊಡೆದುಕೊಳ್ಳುತ್ತಾನೆ. ಆಗ ಅವನನ್ನು ವೀರ ಮಂಡೆ ಹಾಕಿ ಕೂಡಿಸುತ್ತಾರೆ.

ಹೀಗೆ ಹೊಸಕೋಟೆ ಕರಗ ಬಹಳ ವಿಜೃಂಭಣೆಯಿಂದ ನೆರವೇರುತ್ತದೆ. ಕರಗದ ದಿನ ಊರ ತುಂಬ ವಿವಿಧ ಬಗೆಯ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನೆರವೇರುತ್ತವೆ. ಹರಿಕಥೆ, ಸಂಗೀತ, ಭಜನೆ, ನಾಟಕ, ಮುಂತಾದ ಕಾರ್ಯಕ್ರಮಗಳನ್ನು ಭಕ್ತಾದಿಗಳು ನಡೆಸಿಕೊಡುತ್ತಾರೆ.

## ಜಡಿಗೇನಹಳ್ಳಿ ಕರಗದಮ್ಮ ಐತಿಹ್ಯ

'ಬೆಂಗಳೂರಿಗೆ ಸುಮಾರು ನಲವತ್ತು ಕಿ.ಮೀ. ದೂರದಲ್ಲಿ ಹೊಸಕೋಟೆ-ಮಲೂರು ರಸ್ತೆಯಲ್ಲಿರುವ ಒಂದು ಹಳ್ಳಿಯೇ ಜಡಿಗೇನಹಳ್ಳಿ, ಹೊಸಕೋಟೆಯಿಂದ ಈ ಹಳ್ಳಿಗೆ ಹೋಗುವಾಗ ಅರ್ಧ ಮೈಲಿ ಹಿಂದೆಯೇ ಉರುಟು ಕಲ್ಲುಗಳಿಂದ ಕೂಡಿರುವ ಒಂದು ದಿಣ್ಣೆ ಅಡ್ಡವಾಗುತ್ತದೆ. ಅದನ್ನು ದಾಟುತ್ತಿದ್ದಂತೆಯೇ ರಸ್ತೆಯ ಎರಡು ಬದಿಯಲ್ಲೂ ಹಲವು ಬೃಹತ್ ಶಿಲಾಸಮಾಧಿಗಳು ಕಣ್ಣಿಗೆ ಬೀಳುತ್ತದೆ. ರಸ್ತೆಯ ಪಕ್ಕದಲ್ಲೇ ಇರುವ ಒಂದು ಹಳ್ಳದಲ್ಲಿ ಇಂಥ ಕೆಲವು ಸಮಾಧಿಗಳನ್ನು ಕೊರೆದಿರುವುದನ್ನು ನೋಡಬಹುದು. ಗುಂಡಾದ ಕಲ್ಲುಗಳನ್ನಿಟ್ಟು ರಚಿಸಿರುವ ೬ ರಿಂದ ೨೦ ಅಡಿಗಳವರೆಗಿನ ವ್ಯಾಸವುಳ್ಳ, ಬೇರೆ ಬೇರೆಯಾಗಿ ಅಥವಾ ಒಂದರೊಳಗೊಂದರಂತೆ ಇರುವ ವೃತ್ತಗಳು ಈ ಸಮಾಧಿಗಳ ಮೇಲ್ನೋಟಕ್ಕೆ ತೋರುವ ಹೆಗ್ಗುರುತುಗಳು. ಇವುಗಳಲ್ಲಿ ಚಪ್ಪಡಿ ಕಲ್ಲಿನ ಪೆಟ್ಟಿಗೆಯಾಗಲಿ, ದೊಡ್ಡಗಾತ್ರದ ಮುಚ್ಚುಗಲ್ಲಾಗಲಿ, ಕಲ್ಲುತುಂಡುಗಳ ರಾಶಿಯಾಗಲಿ ಇಲ್ಲದೆ ಇವು ಕುಣಿ ಸಮಾಧಿ ಗುಂಪಿಗೆ ಸೇರಿದ. ಆಳವಾದ ಕುಣಿಯಲ್ಲಿ ಮಣ್ಣಿನಿಂದ ತಯಾರಿಸಿದ ಶವ ಸಂಪುಟವನ್ನಿಟ್ಟಿರುವುದು ಇಲ್ಲಿಯ ಬೃಹತ್ ಶಿಲಾಸಮಾಧಿಗಳ ಒಂದು ವೈಶಿಷ್ಟ್ಯ.

ಸಣ್ಣ ವೃತ್ತಗಳಿರುವ ಸಮಾಧಿಗಳಲ್ಲಿ ೫ ರಿಂದ ೬ ಅಡಿ ಆಳದ ಗುಂಡಿಗಳಲ್ಲಿ ಚಿಕ್ಕದಾದ ಸುಮಾರು ೩ ರಿಂದ ೪ ಅಡಿ ಉದ್ದದ ಶವ ಸಂಪುಟಗಳಿದ್ದುವು. ಅವುಗಳ ಸುತ್ತಲೂ ಬಗೆ ಬಗೆಯ ಮಣ್ಣಿನ ಪಾತ್ರೆಗಳು, ಕಬ್ಬಿಣದ ಸಾಮಾನುಗಳಿದ್ದುವು.

ದೊಡ್ಡ ಸಮಾಧಿಗಳಲ್ಲಿ ೧೨ ಅಡಿಗಿಂತ ಹೆಚ್ಚು ಆಳವಾದ ಒಂದು ದೊಡ್ಡ ಗುಂಡಿ ಅದರ ತಳದಲ್ಲಿ ಪುನಃ ಒಂದರ ಪಕ್ಕದಲ್ಲೊಂದರಂತೆ ಎರಡು ಕಿರುಗುಂಡಿಗಳು, ಅವುಗಳಲ್ಲೊಂದರಲ್ಲಿ ಶವಪೆಟ್ಟಿಗೆ, ಕೆಲವು ಮಣ್ಣಿನ ಪಾತ್ರೆಗಳು ಮತ್ತು 'ಕಬ್ಬಿಣದ' ಪದಾರ್ಥಗಳು, ಇನ್ನೊಂದರಲ್ಲಿ ವಿವಿಧ ಆಕೃತಿಗಳ ಮತ್ತು ಗಾತ್ರಗಳ ಹಲವಾರು ಮಣ್ಣಿನ ಪಾತ್ರೆಗಳು ತುಂಬಿದ್ದವು. ತೊಟ್ಟಿಲಿನ ಮಾದರಿಯಲ್ಲಿರುವ ೭ ಅಡಿ ಉದ್ದವಾದ ಕೆಂಪು ಬಣ್ಣದ ಶವಸಂಪುಟಕ್ಕೆ ಎಂಟು ಕಾಲುಗಳು, ಉಬ್ಬಿರುವ ಮುಚ್ಚಳ ಇದ್ದವು. ಗುಂಡಿಯಲ್ಲಿ ಮೊದಲು ಬತ್ತವನ್ನು ಹರಡಿ ಅದರ ಮೇಲೆ ಶವ ಸಂಪುಟವನ್ನಿಟಿದ್ದಕ್ಕೆ ಕುರುಹುಗಳಿವೆ. ಇಲ್ಲಿ

ದೊರೆತಿರುವ ಯಾವ ಶವಸಂಪುಟದಲ್ಲೂ ಅಸ್ಥಿಪಂಜರವಾಗಲಿ, ಶವದ ಇತರ ಕುರುಹುಗಳಾಗಲಿ ಕಂಡುಬಂದಿಲ್ಲದಿರುವುದು ಒಂದು ತ್ರಿಶೂಲ ಮುಂತಾದವೂ ಮಣ್ಣಿನ ಪಾತ್ರೆಗಳಲ್ಲಿ ಮಡಕೆಗಳು, ತಟ್ಟೆಗಳು, ಬಟ್ಟಲುಗಳು, ಮುಚ್ಚಳವಿರುವ ಉದ್ದಕತ್ತಿನ ಹೂಜಿಗಳು ಪಾನ ಪಾತ್ರೆಗಳು ಮತ್ತು ಆಟಿಕೆಯಂತಿರುವ ಕಿರು ಪಾತ್ರೆಗಳೂ ಸೇರಿವೆ.

ಇವುಗಳಲ್ಲಿ ಕೆಂಪು ಬಣ್ಣದ ಪಾತ್ರೆಗಳೇ ಹೆಚ್ಚು. ಕಪ್ಪು ಹೊಳಪಿನ ಪಾತೆಗಳೂ ಉಂಟು. ಬೃಹತ್ ಶಿಲಾಸಮಾಧಿಗಳಲ್ಲಿ ಸಾಮಾನ್ಯವಾಗಿ ಕಂಡುಬರುವ ಕೆಂಪು–ಕಪ್ಪು ಮಡಕೆಗಳೂ ಇವೆ. ಶವಸಂಪುಟಗಳನ್ನೂ ಇತರ ಪದಾರ್ಥಗಳನ್ನೂ ಕಿರುಗುಂಡಿಗಳಲ್ಲಿ ಜೋಡಿಸಿಟ್ಟು ಮೇಲೆ ಜಿಗುಟಾದ ಜೇಡಿಯ ಮಣ್ಣನ್ನು ಹಿಡಿದು ದೊಡ್ಡ ಹಳ್ಳವನ್ನು ತುಂಬಿರುವುದರಿಂದ ಅದನ್ನು ಅಗೆದು ತೆಗೆಯುವುದು ಶ್ರಮಸಾಧ್ಯ. ಇಲ್ಲಿಯ ಸಮಾಧಿಗಳನ್ನು ಬೃಹತ್ ಶಿಲಾಸಾಮಾಧಿಗಳ ಕಾಲದ ಕಡೆಯ ಭಾಗಕ್ಕೆ ಎಂದರೆ ಸ್ಥೂಲವಾಗಿ ಕ್ರಿ.ಶ.೧-೩ನೆಯ ಶತಮಾನಗಳ ಕಾಲಕ್ಕೆ ಸೇರಿಸಬಹುದೆಂದು ಅಭಿಪ್ರಾಯ ಪಡಲಾಗಿದೆ.

ಹೀಗೆ ಶತಮಾನಗಳಿಂದ ಸಾಂಸ್ಕೃತಿಕ ಇತಿಹಾಸವನ್ನು ಹೊಂದಿರುವ ಜಡಿಗೇನಹಳ್ಳಿಯ ಗ್ರಾಮದೇವತೆ ಕರಗದಮ್ಮ. ದೇವಿಯ ಜಾತ್ರೆ ಹದಿಮೂರು ದಿನಗಳವರೆಗೆ ನಡೆಯುತ್ತದೆ. ತಾಲ್ಲೂಕಿನ ಇತರ ಗ್ರಾಮದೇವತೆಗಳಿಗಿಂತಲೂ ವಿಶೇಷವಾಗಿ ನೆರವೇರುವ ಕರಗದಮ್ಮನ ಜಾತ್ರೆ ಈ ಹಿಂದೆ ಹದಿನೈದು ವರ್ಷಗಳಿಗೊಮ್ಮೆ ನೆರವೇರುತ್ತಿತ್ತು. ಆದರೆ ಇತ್ತೀಚೆಗೆ ಒಂಬತ್ತು ವರ್ಷಗಳಿಗೊಮ್ಮೆ ಜಾತ್ರೆ ನಡೆಯುವುದನ್ನು ಕಾಣಬಹುದು.

ಕಾರಣ ಈ ಹಳ್ಳಿಯು ಒಂದು ಗ್ರಾಮಪಂಚಾಯಿತಿಯಾಗಿದ್ದು, ಈ ಗ್ರಾಮ ಪಂಚಾಯಿತಿಗೆ ಸೇರಿದ ಎಲ್ಲಾ ಕುಟುಂಬದವರೂ ತಮ್ಮ ನವಜಾತ ಶಿಶುಗಳಿಗೆ ಜಾತ್ರೆಯ ಸಂದರ್ಭದಲ್ಲೇ ಹುಟ್ಟು ಕೂದಲನ್ನು ತೆಗೆಸಬೇಕೆಂಬ ಪ್ರತೀತಿ ಇರುವುದರಿಂದ ಜಾತ್ರೆಯ ಕಾಲಾವಧಿ ಹದಿನೈದು ವರ್ಷಗಳಿಂದ ಒಂಬತ್ತು ವರ್ಷಗಳಿಗೆ ಇಳಿದಿದೆ. ಇದನ್ನು 'ದ್ಯಾವರ' ಎನ್ನುತ್ತಾರೆ. ಇಲ್ಲಿ ಒಟ್ಟು ಹದಿನೇಳು ದೇವರುಗಳಿರುವುದನ್ನು ಕಾಣಬಹುದು. ಕರಗದಮ್ಮನನ್ನು ಒಳಗೊಂಡಂತೆ, ಭೂಪತಮ್ಮ, ಗುಡ್ಡದಮ್ಮ, ಎಲ್ಲಮ್ಮ, ಆಂಜನೇಯ, ಈಶ್ವರ, ಬಸವೇಶ್ವರ, ಭೈರವೇಶ್ವರ, ಕಾಡು ಮಲ್ಲೇಶ್ವರ, ಮುನೇಶ್ವರ, ಮಾರಮ್ಮ, ಭೂಮಹೇಶ್ವರಮ್ಮ, ಚಂದ್ರಮೌಳೇಶ್ವರ, ಗಣಪತಿ, ಸಪ್ಪಲಮ್ಮ, ಪಟಾಲಮ್ಮ ಹಾಗೂ ಮಹೇಶ್ವರಮ್ಮ, ಕರಗದಮ್ಮ, ಗುಡ್ಡದಮ್ಮ ಮತ್ತು ಭೂಪತಮ್ಮ ಇಲ್ಲೇ ಉದ್ಭವಿಸಿದ ದೇವರುಗಳು ಇವರ ಅಕ್ಕ–ತಂಗಿಯರೆಂಬ ನಂಬಿಕೆ ಇಲ್ಲಿಯವರದು.

ಚೋಳರ ಕಾಲದಲ್ಲಿ 'ಶ್ರೀಮದ್ ವೇಣುಪುರಿ' ಎಂದೇ ಹೆಸರುವಾಸಿಯಾಗಿದ್ದ ಜಡಿಗೇನಹಳ್ಳಿಯ ಜಾತ್ರೆ ಹಾಗೂ ದೇವರುಗಳ (ಪುರಾಣ) ವಿವರ ಅತ್ಯಂತ ಭಿನ್ನವಾದದ್ದು, ಯುಗಾದಿಯಿಂದ ರಾಮನವಮಿಯವರೆಗೆ ನಡೆಯುವ ಈ ಜಾತ್ರೆಯ ಮೊದಲ ದಿನ 'ಸಾಟಿ' ಇಡುವುದರಿಂದಲೇ ಪ್ರಾರಂಭವಾಗುತ್ತದೆ. ಈ ಸಂದರ್ಭದಲ್ಲಿ ಅನೇಕ ಬಗೆಯ ವಿಧಿ–ನಿಷೇಧಗಳನ್ನು ಹೇರಲಾಗುತ್ತದೆ. ಅವುಗಳಲ್ಲಿ ಪ್ರಮುಖವಾಗಿ ಚಪ್ಪಲಿಗಳನ್ನು ಧರಿಸಿ ಓಡಾಡುವ ಹಾಗಿಲ್ಲ, ಛತ್ರಿ ಹಿಡಿದು ನಡೆಯುವ ಹಾಗಿಲ್ಲ, ಸೈಕಲ್ಲಿನಲ್ಲಿ ಸವಾರಿ ಮಾಡುವ ಹಾಗಿಲ್ಲ, ದಿನ ತುಂಬಿದ ಗರ್ಭಿಣಿಯರು ಊರಿನಲ್ಲಿ ಇರುವ ಹಾಗಿಲ್ಲ, ಮೈಲಿಗೆ ಹಾಗೂ ಸಾವು ಸಂಭವಿಸಿದ ಮನೆಯವರು ಜಾತ್ರೆ ನಡೆಯುವ ದಿನ ಊರೊಳಗೆ ಬರುವ ಹಾಗಿಲ್ಲ. ಇವೇ ಮುಂತಾದವುಗಳನ್ನು ಸಾರುವಾತ ಸಾರುತ್ತಾ ಬರುತ್ತಾನೆ. ಎರಡನೆಯ ದಿನ 'ಹೂವು ಹಣ್ಣುಗಳ ಜಾತ್ರೆ' ನಡೆಯುತ್ತದೆ. ಊರಿನ ಜನರೆಲ್ಲಾ ಭೈರವೇಶ್ವರನ ದೇವಾಲಯದಲ್ಲಿ ನೆರೆದು ಜಾಗಟೆಯಿಂದ ಶಬ್ದಮಾಡಿ ಹೂಹಣ್ಣುಗಳ ಪ್ರಸಾದವನ್ನು ಸ್ವೀಕರಿಸುತ್ತಾರೆ.

ಈ ಸಮಯದಲ್ಲಿ ಲಗ್ನ ಕಟ್ಟುವ ಕಾರ್ಯ ನೆರವೇರುತ್ತದೆ. ಇದನ್ನು ಬ್ರಾಹ್ಮಣರೇ ನಡೆಸಿಕೊಡುತ್ತಾರೆ. ಇತರೇ ಜನಾಂಗದವರಿಗೆ ಇಲ್ಲಿ ನಿಷೇಧ ಹೇರಲಾಗಿದೆ. ಇತರೇ ಜನಾಂಗದವರಾರೂ ದೇವಾಲಯದ ಒಳಗೆ ಪ್ರವೇಶಿಸುವ ಹಾಗಿಲ್ಲ. ಮೂರನೆಯ ದಿನ ದೇವರು 'ಹೊಳೆ ಆಡಿ ಬರುವ ಆಚರಣೆ' ನೆರವೇರುತ್ತದೆ. ಮೊದಲಿಗೆ ಆದಿ ಕರ್ನಾಟಕದ ಜನಾಂಗದವರು ಅಕ್ಕ ಕರಗದಮ್ಮನನ್ನು ತಂದು ಹೊಳೆ ಆಡಿಸುತ್ತಾರೆ. ಆನಂತರ ಒಕ್ಕಲಿಗರು ಹಾಗೂ ಕಾಲಾಟಿಗರು ತಂಗಿ ಗುಡ್ಡದಮ್ಮ ದೇವರನ್ನು ತಂದು ಹೊಳೆ ಆಡಿಸುತ್ತಾರೆ. ಹೊಳೆ ಆಡಿಸುವಾಗ ಕಾಲಾಟಿಗ ಜನಾಂಗದವರು ದೇವತೆಗೆ ಸಂಬಂಧಿಸಿದ ಜನಪದ ಗೀತೆಗಳನ್ನು ಹಾಡುತ್ತಾರೆ. ಇದೇ ಸಂದರ್ಭದಲ್ಲಿ 'ಕುರಿ ಬಲಿ'ಯನ್ನು ನೀಡಲಾಗುತ್ತದೆ. ಇದರ ರಕ್ತವನ್ನು ಅಕ್ಕಿಗೆ ಬೆರೆಸಿ ಊರ ಸುತ್ತಾ ಚೆಲ್ಲಿ ಊರ ಒಳಗೆ ಕ್ಷುದ್ರ ದೇವತೆಗಳು ಬರದಂತೆ ತಡೆ ಹಿಡಿಯಲಾಗುತ್ತದೆ. ಇದನ್ನು 'ಕಾಪುಕಟ್ಟುವುದು' ಎಂದು ಕರೆಯುತ್ತಾರೆ.

ನಾಲ್ಕನೆಯ ದಿನ 'ತಂಪು ದೇವರ ಜಾತ್ರೆ' ನೆರವೇರುತ್ತದೆ. ವನ್ನಿಕುಕ್ಷತ್ರಿಯರು ಹಾಗೂ ಒಕ್ಕಲಿಗರು ಜಾತ್ರೆಯಲ್ಲಿ ಪಾನಕ, ಹೆಸರುಬೇಳೆ, ತಿಳಿಮಜ್ಜಿಗೆಯನ್ನು ದೇವರ ಹೆಸರಿನಲ್ಲಿ ಹಂಚುತ್ತಾರೆ. ಐದನೆಯ ದಿನ 'ಹೊನ್ನೇರು ಕರಗದ ಜಾತ್ರೆ' ನಡೆಯುತ್ತದೆ. ಇಲ್ಲಿ ನೇಗಿಲಿನಿಂದ ಭೂಮಿಯನ್ನು ಉಳುಮೆ ಮಾಡುತ್ತಾ ಹಿಂದೆಯೇ ರಾಗಿ ಚೆಲ್ಲಿಕೊಂಡು ಹೋಗುವ ಪ್ರಕ್ರಿಯೆ ನೆರವೇರುತ್ತದೆ. ಇದೇ ಸಂದರ್ಭದಲ್ಲಿ ಕಂಬದರಾಯನಿಗೆ ಅಕ್ಕ ತಂಗಿಯರಾದ ಕರಗದಮ್ಮ ಹಾಗೂ ಗುಡ್ಡದಮ್ಮನನ್ನು ಕೊಟ್ಟು ವಿವಾಹ ನೆರವೇರಿಸಲಾಗುತ್ತದೆ. ಈ ಸಂದರ್ಭದಲ್ಲಿ

ಬ್ರಾಹ್ಮಣರು ಹೋಳಿಗೆ ಊಟ ಮಾಡಿ ಸಂಭ್ರಮಿಸಿದರೆ, ಒಕ್ಕಲಿಗರು ದೇವರಿಗೆ ದೀಪಗಳನ್ನು ಬೆಳಗಿ, ಕೊಂಡ ಹಾಯುತ್ತಾರೆ. ಅರನೆಯ ದಿನ 'ದೊಡ್ಡ ದೇವರ ಜಾತ್ರೆ' ನಡೆಯುತ್ತದೆ. ಇದಕ್ಕೂ ಮುಂಚೆ ಅಮ್ಮನವರಿಗೆ ಅಭಿಷೇಕ, ಪೂಜೆ, ಕುಂಕುಮಾರ್ಚನೆಗಳು ನಡೆಯುತ್ತವೆ. ಕರಗದಮ್ಮನಿಗೆ ವನ್ನಿಕುಲಕ್ಷತ್ರಿಯರು ಬಲಿ ನೀಡಿ ದೀಪ ಬೆಳಗುತ್ತಾರೆ. ಬಲಿಯನ್ನು ನೀಡಿದ ನಂತರ ಅದನ್ನು ತಾಯಿಯ ಪ್ರಸಾದವೆಂದು ಸ್ವೀಕರಿಸುತ್ತಾರೆ. ಈ ದಿನ ತಿಗಳರನ್ನು ಹೊರತು ಪಡಿಸಿ ಮತ್ತಾವ ಜನಾಂಗದವರೂ ದೇವಿಗೆ ಸೇವೆ ಸಲ್ಲಿಸುವ ಹಾಗಿಲ್ಲ. ಏಳನೆಯ ದಿನ 'ದ್ಯಾವರ' ನಡೆಯುತ್ತದೆ. ಒಕ್ಕಲಿಗರು ಮಕ್ಕಳಿಗೆ ಹುಟ್ಟು ಕೂದಲು ತೆಗೆಸುತ್ತಾರೆ.

ಈ ಆಚರಣೆಯನ್ನು ನೆರವೇರಿಸುವಾಗ ಪ್ರತಿ ಮನೆಯವರೂ ಬಲಿ ನೀಡುತ್ತಾರೆ. ಕುರಿ, ಕೋಳಿ, ಹೀಗೆ ಬದಲಿ ತಾವು ಯಾವ ಪ್ರಾಣಿಯನ್ನು ದೇವರ ಹೆಸರಿನಲ್ಲಿ ಬಿಟ್ಟಿರುತ್ತಾರೆಯೋ ಅದನ್ನು ಬಲಿ ನೀಡುತ್ತಾರೆ. ಇಲ್ಲಿ ದೇವಿಯನ್ನು ಮಡಿಕೆಯಲ್ಲಿ ಕೂಡಿಸಿ, ನವವಸ್ತ್ರಗಳನ್ನು ಉಡಿಸಿ, ಅಕ್ಕಿ ಮಡಿಲು ತುಂಬಿ, ಹೂಗಳಿಂದ ಅಲಂಕರಿಸಿ ದೀಪ ಬೆಳಗುತ್ತಾರೆ. ಎಂಟನೆಯ ದಿನ 'ದೇವರು ಹೊಳೆ ಆಡಿ ಪುನಃ ಯಥಾಸ್ಥಾನ ಸೇರುವ' ಸೇವೆ ನೆರವೇರುತ್ತದೆ. ಒಂಬತ್ತನೆಯ ದಿನ 'ಊರು ಬಾಗಿಲಿಗೆ ತೋರಣ ಕಟ್ಟುವ ಶಾಸ್ತ್ರ' ನೆರವೇರುತ್ತದೆ.

ಈ ಸಂದರ್ಭದಲ್ಲಿ ಒಬ್ಬ ಕಾವಲುಗಾರನನ್ನು ಊರ ಬಾಗಿಲಲ್ಲಿ ಇಟ್ಟು ಮತ್ತೊಮ್ಮೆ ನಿಷೇಧಗಳನ್ನು ಹೇಳಿಸುತ್ತಾರೆ. ಅವುಗಳಲ್ಲಿ ಪ್ರಮುಖವಾಗಿ ಗುಡ್ಡದಮ್ಮನಿಗೆ ಎಡೆ ಹಾಕಿ ಮೂರು ದಿನ ಅತ್ತ ಹೋಗುವ ಹಾಗಿಲ್ಲ. ಕೋಣನ ಬಲಿಕೊಟ್ಟ ಮೇಲೆ ಅದರ ರಕ್ತವನ್ನು ಊರ ಸುತ್ತಲೂ ಚೆಲ್ಲುವುದನ್ನು ಯಾರೂ ನೋಡುವ ಹಾಗಿಲ್ಲ ಹಾಗೂ ಅಡ್ಡ ಹೋಗುವ ಹಾಗಿಲ್ಲ ಮುಂತಾದ ನಿಷೇಧಗಳನ್ನು ಮತ್ತೆ ಸಾರಲಾಗುತ್ತದೆ. ಹತ್ತನೆಯ ದಿನ ಊರಿನ ಎಲ್ಲಾ ದೇವತೆಗಳಿಗೂ 'ದೀಪ'ಗಳನ್ನು ಬೆಳಗಲಾಗುತ್ತದೆ. ಹನ್ನೊಂದನೆಯ ದಿನ ಗುಡ್ಡದಮ್ಮ ದೇವಿಗೆ ಮತ್ತು ಈಶ್ವರನಿಗೆ ದೀಪಗಳು ನೆರವೇರಿದರೆ ಹನ್ನೆರಡನೆಯ ದಿನ ಊರಿನ ಹಬ್ಬ ಹಾಗೂ ಮಾರಮ್ಮನಿಗೆ ದೀಪಗಳನ್ನು ಬೆಳಗಿಸುತ್ತಾರೆ.

ಒಕ್ಕಲಿಗರು ಊರಿನಲ್ಲಿ ಅನ್ನಸಂತರ್ಪಣೆ ನಡೆಸುತ್ತಾರೆ. ಒಟ್ಟಿನಲ್ಲಿ ಕೊನೆಯ ಮೂರು ದಿನಗಳೂ ದೀಪಗಳು ನೆರವೇರುತ್ತವೆ. ಒಟ್ಟು ಇಪ್ಪತ್ತು ದೇವರುಗಳಿಗೆ ದೀಪಗಳನ್ನು ಬೆಳಗುತ್ತಾರೆ. ಇದೇ ದಿನ ಅರ್ಚಕರಿಂದ ಕರಗದ ಬಾವಿಯಲ್ಲಿ ದೇವರನ್ನು ಶುದ್ದಗೊಳಿಸುವ ಶಾಸ್ತ್ರ ನೆರವೇರುತ್ತದೆ. 'ಇಲ್ಲಿ ಅರ್ಚಕರ ಕಣ್ಣಿಗೆ ಬಟ್ಟೆಯನ್ನು ಕಟ್ಟಿ ಈ ಶಾಸ್ತ್ರ ನೆರವೇರಿಸುತಾರೆ.'

ಇದೇ ಸಂದರ್ಭದಲ್ಲಿ ಸಪ್ತಮಾತೃಕೆಯರಿಗೆ ಕರಗದ ಒಕ್ಕಲಿಗರು ತಾಳಿ ಮಾಡಿಸಿ ಕೊಡುತ್ತಾರೆ. ಅಗಸರು ದೇವಿಗೆ ಸೀರೆ ಹಾಸಿ 'ನಡೆ-ಮುಡಿ' ಸಲ್ಲಿಸುತ್ತಾರೆ. ದೇವರಿಗೆ

ಬ್ರಾಹ್ಮಣರಿಂದ ಹಾಗೂ ಕಾಲಾಟಿಗರಿಂದ ಸೇವೆ ಸಲ್ಲುತ್ತದೆ. ರಾತ್ರಿ ಭೈರವೇಶ್ವರ ದೇವರಿಗೆ ಕೊಂಡ ಹಾಯುವ ಪದ್ಧತಿ ಇದೆ. ಸುಮಾರು ಹತ್ತರಿಂದ ಎಂಟು ಅಡಿ ಉದ್ದವಿರುವ ಹೊಂಡಕ್ಕೆ ಅರ್ಚಕರು ಪೂಜೆ ಸಲ್ಲಿಸಿ ಪ್ರವೇಶಿಸಿದ ನಂತರವೇ ಇತರರು ಪ್ರವೇಶಿಸುತ್ತಾರೆ. ಈ ಭೈರವೇಶ್ವರ ದೇವಾಲಯ ಚೋಳರ ಕಾಲದ ಪ್ರತಿಷ್ಠಾಪನೆಯಾಗಿದ್ದು ನೋಡಲು ಅತ್ಯಂತ ಸುಂದರವಾಗಿದೆ. ಇಲ್ಲಿನ ಕರಗದ ಒಕ್ಕಲಿಗರು ಜಾತ್ರೆ ಮುಗಿಯುವವರೆಗೆ ಮಾಂಸಾಹಾರ ಸೇವಿಸುವ ಹಾಗಿಲ್ಲ. ಇದೇ ದಿನ ರಾತ್ರಿ ಸುಮಾರು ಹನ್ನೊಂದಕ್ಕೆ ಕೋಣನ ಬಲಿ ಇದ್ದು ಅದರ ರಕ್ತವನ್ನು ಊರಿನ ಸುತ್ತಲೂ ಚೆಲ್ಲುತ್ತಾರೆ. ಹೀಗೆ ಚೆಲ್ಲುವಾಗ ಯಾರೂ ಅಡ್ಡ ಹೋಗುವ ಹಾಗಿಲ್ಲ.

ಇಲ್ಲಿ ಕರದಮ್ಮನಷ್ಟೆ ಪ್ರಸಿದ್ದಿ ಹೊಂದಿದ ಮತ್ತೊಂದು ದೇವತೆ ಕರಗದಮ್ಮನ ತಂಗಿ ಗುಡ್ಡದಮ್ಮ. ಯುಗಾದಿಯ ಐದು ದಿನದ ನಂತರ ದೇವಿಗೆ ಇಲ್ಲಿ ಜಾತ್ರೆ ನಡೆಸಲಾಗುತ್ತದೆ. ಹಿಂದೆ ಐದು ದಿನಗಳ ಕಾಲ ನಡೆಯುತ್ತಿದ್ದ ಈ ಜಾತ್ರೆ ನೆರವೇರುತ್ತದೆ. ಈ ಜಾತ್ರೆಯ ಮುಖ್ಯ ಆಚರಣೆಗಳಲ್ಲಿ ಸಿಡಿಯೂ ಒಂದು,ದೇವಿಗೆ ಬೆಳಗ್ಗೆ ಪೂಜೆ ನಡೆಯುವಾಗಲೇ ಬಲಿಯನ್ನು ನೀಡಲಾಗುತ್ತದೆ. ಸಂಜೆ 'ಸಿಡಿ ಉಟ್ಲು' ಕಾರ್ಯಕ್ರಮ ನಡೆಯುತ್ತದೆ.

ಒಂದು ಕಡೆ ತೆಂಗಿನ ಕಾಯಿ ಹಾಗೂ ಮತ್ತೊಂದು ಕಡೆ ಮಕ್ಕಳನ್ನು ಕೂಡಿಸಿ ಸಿಡಿ ಉಟ್ಲು ಕಟ್ಟಲಾಗುತ್ತದೆ. ಮಕ್ಕಳನ್ನು ಸುತ್ತಿಸಿದರೆ ಅವರು ಆರೋಗ್ಯ ಹಾಗೂ ಆಯಸ್ಸಿನಿಂದ ಕೂಡಿರುತ್ತಾರೆಂಎ, ಮಕ್ಕಳಾಗದವರು ಕೂತರೆ ಮಕ್ಕಳಾಗುತ್ತದೆ ಎಂದೂ ನಂಬಿಕೆ ಇದೆ. ಈ ಗುಡ್ಡದಮ್ಮನ ದೇವಾಲಯದಲ್ಲಿ ಸಪ್ತಮಾತೃಕೆಯರಿಗೆ ಅನ್ನ, ಹಾಲು, ತುಪ್ಪ, ಹಾಗೂ ಮೊಸರು ಬೆರಸಿ ನೈವೇಧ್ಯ ಮಾಡುತ್ತಾರೆ. ಹೀಗೆ ನೈವೇಧ್ಯ ಮಾಡಿ ದೇವಾಲಯದ ಬಾಗಿಲು ಮುಚ್ಚಿದ ಮೇಲೆ ಮೂರು ದಿನ ಅತ್ತ ಯಾರೂ ಹೋಗಬಾರದೆಂಬ ಪ್ರತೀತಿ ಇದೆ.

ಕಾರಣ ಸಪ್ತಮಾತೃಕೆಯರು ಅಕ್ಕ ತಂಗಿಯರಾಗಿದ್ದು ಅವರೆಲ್ಲಾ ಕುಳಿತು ಒಟ್ಟಿಗೆ ಊಟ ಮಾಡುವಾಗ ಯಾರಾದರೂ ನೋಡಿದರೆ ಅವರ ತಲೆ ಸಾವಿರ ಹೋಳಾಗುತ್ತದೆ ಎಂದೂ ಪ್ರತೀತಿ ಇದೆ. 'ಇದಕ್ಕೆ ಸಂಬಂಧಿಸಿದ ಪುರಾಣ ಕತೆ ಹೀಗಿದೆ.'. ಅಂದಿನಿಂದ ಇಂದಿನವರೆಗೆ ದೇವಸ್ಥಾನದಲ್ಲಿ ಪೂಜೆ ಸಲ್ಲಿಸಿ ನೈವೇದ್ಯ ಮಾಡಿದಂತಹ ಮೂರು ದಿನ ಅತ್ತ ಯಾರೂ ಸುಳಿಯುವುದಿಲ್ಲ, ದೇವಿ ಕತ್ತಿ ಡಮರುಗ, ಕುಂಕುಮಭರಣಿಯನ್ನು ಕೈಯಲ್ಲಿ ಹಿಡಿದಿದ್ದು ಇದು ಸೌಭಾಗ್ಯದ ಸಂಕೇತವೆಂದು ಇಲ್ಲಿನ ಗ್ರಾಮೀಣರು ನಂಬಿದ್ದಾರೆ. ಗುಡ್ಡದಮ್ಮ ಇಲ್ಲಿನ ಶ್ರೀನಿವಾಸರಾಯರ ಮನದೇವತೆ. ಹೀಗಾಗಿ ಜಾತ್ರೆಯ ಸಮಯದಲ್ಲಿ ದೇವಿಗೆ ಹಣ್ಣು ಕಾಯಿ ಮಾಡಿ, ಹೆಣ್ಣುಮಗಳಂತೆ ಬೇರೆಯವರ ಊರಿಗೆ ಪೂಜೆ ನಡೆಸಲು ಇಲ್ಲವೇ

ಉತ್ಸವಮೂರ್ತಿಯಾಗಿ ಕಳಿಸಿ ಕೊಟ್ಟು ಆನಂತರ ಬರಮಾಡಿಕೊಳ್ಳುತ್ತಾರೆ. ಇತರ ಊರಿನವರು ದೇವಿಯನ್ನು ಕರೆದೊಯ್ದು ಉತ್ಸವ ನಡೆಸಿ, ಮಡಿಲು ತುಂಬಿ, ತಾಳಿ ಮಾಡಿಸಿ ಕೊಟ್ಟು, ಸೀರೆ ಹಾಗೂ ರವಿಕೆ ಇಟ್ಟು ಕಳಿಸಿ ಕೊಡುತ್ತಾರೆ. ಆನಂತರ ಇದು ಅರ್ಚಕರಿಗೆ ಸಲ್ಲುತ್ತದೆ.

ಇಲ್ಲಿನ ಮತ್ತೊಂದು ಪ್ರಮುಖ ದೇವರು ಮುನೇಶ್ವರ. ಈತ ಕುದುರೆ ಏರಿ ರಾತ್ರಿ ಎರಡು ಗಂಟೆಗೆ ಸರಿಯಾಗಿ ಇಲ್ಲಿನ ದೇವತೆ ಭೂಪತಮ್ಮನನ್ನು ಸೇರುತ್ತಾನೆಂಬ ನಂಬಿಕೆ ಇದೆ. ಈ ಇಬ್ಬರ ದೇವಾಲಯಗಳು ಒಂದೇ ಸಾಲಿನಲ್ಲಿದೆ. ಮೊದಲಿಗೆ ಮುನೇಶ್ವರ ದೇವಾಲಯ. ಆನಂತರ ಭೈರವೇಶ್ವರ ಹಾಗೂ ಗುಡ್ಡದಮ್ಮನ ದೇವಾಲಯ, ಕೊನೆಯಲ್ಲಿ ಭೂಪತಮ್ಮನ ದೇವಾಲಯವಿದೆ.

ರಾತ್ರಿ ಮುನೇಶ್ವರ ಭೂಪತಮ್ಮನನ್ನು ಸೇರ ಹೊರಟಾಗ ಆತನನ್ನು ಯಾರೂ ನೋಡಬಾರದೆಂಬ ನಿಯಮವಿದೆ. ಇದನ್ನು ನೋಡಿದವರಿಗೆ ಕೆಡಕಾಗುತ್ತದೆ ಎಂಬ ನಂಬಿಕೆ ಇದೆ. ಇಲ್ಲಿ ಕಿ.ಮೀ. ದೂರದಲ್ಲಿ ಇರುವ ಈ ದೇವಾಲಯದಲ್ಲಿ ಅರಳೆಣ್ಣೆ ಬೀಜಗಳಿಂದ ದೇವರಿಗೆ ದೀಪ ಹಚ್ಚುತ್ತಾರೆ. ಇದು ಇಲ್ಲಿಯ ವಿಶೇಷಗಳಲ್ಲಿ ಒಂದು. ಇಲ್ಲಿನ ಮತ್ತೊಂದು ಚೋಳರ ಕಾಲದ ದೇವಾಲಯ ಭೈರವೇಶ್ವರ ದೇವಾಲಯ, 'ಜಡಿಗೇನಹಳ್ಳಿಯ ಸುತ್ತಮುತ್ತ ಈತನಿಗೆ ಸಂಬಂಧಿಸಿದಂತೆ ಒಂದು ಕಥೆ ಪ್ರಚಲಿತವಾಗಿದೆ.' ಈ ದೇವಾಲಯದಲ್ಲಿ ನಿಧಿ ಇರುವುದಾಗಿಯೂ, ಅದನ್ನು ಎರಡು ನಾಗರಹಾವುಗಳು ಕಾಯುತ್ತಿರುವುದೆಂದೂ ನಂಬಿಕೆ ಇದೆ.

ಈ ದೇವಾಲಯ ನೋಡಲು ಬಹಳ ವಿಶಿಷ್ಟವಾಗಿದ್ದು ಇದನ್ನು ಯಾವುದೇ ಆಧಾರವಿಲ್ಲದೆ ಅತಿ ಎತ್ತರಕ್ಕೆ ಕಟ್ಟಲಾಗಿದೆ. ದೇವಾಲಯದ ಸುತ್ತಲೂ ಹಾವು ಹಾಗೂ ಆನೆಗಳ ಕೆತ್ತನೆ ಇದ್ದು ಇದು ದೇವಾಲಯದ ಸೌಂದರ್ಯವನ್ನು ಇಮ್ಮಡಿಸಿವೆ. ಈಗ ಇದು ಮುಜರಾಯಿ ದೇವಾಲಯವೆನಿಸಿಕೊಂಡಿದೆ. ರಾಮನವಮಿ ಹಾಗೂ ಕಾಮನ ಹುಣ್ಣಿಮೆಗಳಲ್ಲಿ ಇಲ್ಲಿ ಹುಲಿವೇಷ ಹಾಕಲಾಗುತ್ತದೆ.

**ವಾಗಟ–ಚೌಡೇಶ್ವರಿ**

ಹೊಸಕೋಟೆ ತಾಲ್ಲೂಕಿನ ವಾಗಟ ಐತಿಹಾಸಿಕವಾಗಿ ಪ್ರಸಿದ್ಧವಾದ ಕ್ಷೇತ್ರ, ಚೋಳರ ಕಾಲ ಹಾಗೂ ವಿಜಯನಗರದ ಕಾಲದಲ್ಲಿ ಇದು ಸಂಸ್ಕೃತಿಕ ಕೇಂದ್ರವಾಗಿ ತನ್ನದೇ ಆದ ರೀತಿಯಲ್ಲಿ ಅಭಿವೃದ್ದಿ ಹೊಂದಿದೆ. ಇಲ್ಲಿನ ಮತ್ತೊಂದು ದೇವಾಲಯ ಆಂಜನೇಯ ದೇವಾಲಯ, ಇದು ಎಂಟು ಅಡಿಗಳಷ್ಟು ಉದ್ದವಾಗಿದ್ದು ಇದನ್ನು ಕ್ರಿ.ಶ.೧೩೨೬ರಲ್ಲಿ

ಹೊಯ್ಸಳರ ಮೂರನೇ ಬಲ್ಲಾಳನು ಸ್ಥಾಪಿಸಿದನೆಂದು ಹೊಯ್ಸಳರ ಮತ್ತೊಂದು ಶಾಸನದಲ್ಲಿ ತಿಳಿಸಲಾಗಿದೆ.

ಇಲ್ಲಿನ ಬೂದಿಹಳ್ಳವನ್ನು ಅಗೆದಾಗ ಎರಡು ಲೋಹದ ವಸ್ತುಗಳು ದೊರೆತಿದ್ದು ಇದನ್ನು ಮೈಸೂರಿನ ಭೂಗರ್ಭಶಾಸ್ತ್ರದಲ್ಲಿ ವಸ್ತು ಸಂಗ್ರಹಾಲಯದಲ್ಲಿ ಇರಿಸಲಾಗಿದೆ.' ಇಲ್ಲಿನ ಇತರ ದೇವಾಲಯಗಳಲ್ಲಿ ಚಂದ್ರಮೌಳೇಶ್ವರ, ಈಶ್ವರ, ಚೌಡೇಶ್ವರಿ ಮತ್ತು ಮಾರಮ್ಮನ ದೇವಾಲಯಗಳು ಅತ್ಯಂತ ಪ್ರಮುಖವಾದವುಗಳಾಗಿವೆ. ಚೋಳರ ಐದನೇ ಅರಸ ರಾಜ ರಾಜ ಚೋಳನು ಈ ಚಂದ್ರಮೌಳೇಶ್ವರ ದೇವಾಲಯವನ್ನು ಸ್ಥಾಪಿಸಿದನೆಂದು, ಮತ್ತೊಂದು ಕುಲಶೇಖರ ದೇವಾಲಯವನ್ನು ಜನಮೇಜಯ ರಾಜ ಕಟ್ಟಿಸಿದನೆಂದೂ ಹೇಳಲಾಗುತ್ತದೆ. ಕಂಚಿನ ರಥ ಒಳಗೊಂಡಿರುವ ಕುಲಶೇಖರ ದೇವಾಲಯವನ್ನು ಕುಲಶೇಖರಾಳ್ವನೆಂಬ ಮತ್ತೊಬ್ಬ ವ್ಯಕ್ತಿ ಜೀರ್ಣೋದ್ಧಾರ ಮಾಡಿದನೆಂದೂ ಇಲ್ಲಿ ಸ್ಥಳಪುರಾಣಗಳು ಉಲ್ಲೇಖಿಸುತ್ತವೆ. ಈ ದೇವಾಲಯ ಕಾಲಾನಂತರದಲ್ಲಿ ಇಲ್ಲಿನ ಕೆರೆಯಲ್ಲಿ ಮುಳುಗಿ ಹೋಯಿತು ಎಂಬ ನಂಬಿಕೆ ಇದೆ.

ಹೊಸಕೋಟೆಯಿಂದ ಸುಮಾರು ಹತ್ತು ಕಿ.ಮೀ. ದೂರದಲ್ಲಿ ಇರುವ ವರದರಾಜ ಸ್ವಾಮಿ ದೇವರಾಯ ಸುಮಾರು ಒಂಬತ್ತು ನೂರ ವರ್ಷಗಳಷ್ಟು ಹಳೆಯದಾಗಿದ್ದು ಇದೂ ಸಹ ಹಿಂದೂ ಮುಸ್ಲಿಂ ಜನಾಂಗದಲ್ಲಿ ಒಡಕು ಮೂಡಿದಾಗ ದೊಡ್ಡ ಪ್ರಮಾಣದಲ್ಲಿ ಹಾನಿಗೊಳಗಾಗಿ ಮಣ್ಣಿನಡಿಯಲ್ಲಿ ಮುಚ್ಚಿ ಹೋಗಿತ್ತು. ಘಜ್ನಿ ಮೊಹಮ್ಮದ್‌ನ ದಂಡಯಾತ್ರೆ ಸಂದರ್ಭದಲ್ಲಿ ಅಲ್ಪ ಸ್ವಲ್ಪ ಊನವೂ ಆಗಿ ಮಣ್ಣಿನಲ್ಲಿ ಹೂತು ಹೋಗಿದ್ದ ಈ ದೇವಾಲಯ ಕೆಲವರ್ಷಗಳ ತರುವಾಯ ಶಾಲಾ ಮಕ್ಕಳ ಆಟದ ಸಮಯದಲ್ಲಿ ಬೆಳಕಿಗೆ ಬಂದಿತು.

ಮಣ್ಣಿನ ದಿಬ್ಬದ ಮೇಲೆ ಆಟವಾಡುತ್ತಿದ್ದ ಮಕ್ಕಳಿಗೆ ಶಿಖರಾಕಾರದ ವಸ್ತವನ್ನು ಕಂಡು ಆಶ್ಚರ್ಯವಾಗಿ ಅಲ್ಲಿಯೇ ಹೊಲದಲ್ಲಿ ಕೆಲಸ ಮಾಡುತ್ತಿದ್ದ ಹಿರಿಯರನ್ನು ಕರೆದು ತೋರಿಸಿದಾಗ ದೇವಾಲಯ ಇರುವುದು ಗೋಚರಿಸಿತು. ಇದನ್ನು ಕಂಡು ಈ ಹಿಂದೆ ಇಲ್ಲಿ ದೇವಾಲಯವಿತ್ತೆಂಬುದನ್ನು ಕೇಳಿ ತಿಳಿದಿದ್ದ ಗ್ರಾಮೀಣರು ಮತ್ತಷ್ಟು ಆಳಕ್ಕೆ ತೆಗೆದಾಗ ದೇವಾಲಯದ ಗರ್ಭಗುಡಿಯಲ್ಲಿ ಒಂದು ದೀಪ ಉರಿಯುತ್ತಿದ್ದುದು ಕಂಡುಬಂತು. ಅಂದೇ ದೇವಾಲಯಕ್ಕೆ ಪುಣ್ಯಾರ್ಚನೆ ಮಾಡಿ ಪೂಜಿಸಲು ಪ್ರಾರಂಭಿಸಿದರು. ಊರ ಹಿರಿಯರ ಪ್ರಕಾರ ಈ ಘಟನೆ ನಡೆದದ್ದು ಸುಮಾರು ೧೯೩೬ ರಲ್ಲಿ ಅಂದರೆ ಸುಮಾರು ೬೯ ವರ್ಷಗಳ ಹಿಂದೆ. ಶ್ರಿ ವೈಷ್ಣವರಿಂದ ತುಂಬಿದ ವಾಗಟ ಆಗ್ರಹಾರದಲ್ಲಿ ಅಂದಿನಿಂದ ಇಂದಿನವರೆಗೆ ನಿರಂತರವಾಗಿ ವರದರಾಜಸ್ವಾಮಿಗೆ ಸೇವೆ ಸಲ್ಲತ್ತಾ ಬಂದಿದೆ. ಸುಮಾರು ಹದಿನೈದು ವರ್ಷಗಳ ಹಿಂದೆ ಇಲ್ಲಿನ

ವರದರಾಸ್ವಾಮಿಯ ವಿಗ್ರಹ ಕಳುವಾಗಿತ್ತ. ಇದನ್ನು ಮೂರ್ತಿಯನ್ನು ಹಿಂತಿರುಗಿ ವಾಗಟಕ್ಕೆ ತರಲಾಯಿತು.

ಪುರಾಣದ ಪ್ರಕಾರ ಅರ್ಜುನ ಪ್ರತಿಷ್ಠಾಪನೆ ಮಾಡಿದ್ದನೆನ್ನಲಾದ ಈ ವಿಗ್ರಹಕ್ಕೆ ನಿತ್ಯ ಪೂಜೆ ಸಲ್ಲುತ್ತದೆ. ನವರಾತ್ರಿ ವರದರಾಜ ಜಯಂತಿ, ಶ್ರೀರಾಮನವಮಿ, ಶ್ರೀವೈಕುಂಠ ಏಕಾದಶಿ, ಶ್ರಾವಣಮಾಸ, ದೀಪಾವಳಿಗಳಂದು ಇಲ್ಲಿ ವಿಶೇಷ ಪೂಜೆ ಸಲ್ಲುತ್ತದೆ. ಬೆಂಗಳೂರನ್ನು ನಿರ್ಮಿಸಿದ ಕೆಂಪೇಗೌಡನ ವಂಶಸ್ಥ ಚೆನ್ನಬೈರೇಗೌಡನ ಕಾಲದಲ್ಲಿ ಈ ದೇವಾಲಯವನ್ನು ಹಾಗೂ ಇಲ್ಲಿನ ಕಲ್ಯಾಣಮಂಟಪವನ್ನು ಜೀರ್ಣೋದ್ಧಾರ ಮಾಡಲಾಗಿತ್ತು. ಈ ಕಾರ್ಯಕ್ಕೆ ಯಾವುದೇ ಹಣಕಾಸಿನ ಅಪೇಕ್ಷೆ ಇಲ್ಲದೆ ಅನೇಕ ಮಂದಿ ತಮ್ಮ ಶ್ರಮದಾನ ಮಾಡಿದ್ದರು.

ಈ ದೇವಾಲಯದ ಬಲಭಾಗದಲ್ಲಿ ಹುತ್ತವಿದೆ. ಇಲ್ಲಿ ತಮ್ಮ ಕಷ್ಟ ಕಾರ್ಪಣ್ಯಗಳನ್ನು ಹೋಗಲಾಡಿಸಲು ದೇವರನ್ನು ಹೂ ಕೇಳುವವರು ಪ್ರಸಾದದ ರೂಪದಲ್ಲಿ ಹೂ ಬಲಭಾಗದಲ್ಲಿ ಬಿದ್ದರೆ ಶುಭವೆಂದು, ಎಡಗಡೆ ಬಿದ್ದರೆ ಅಶುಭವೆಂದು ಭಾವಿಸುತ್ತಾರೆ. ಪ್ರಸಾದದ ಹಾಗೆ ಬಲಭಾಗದಲ್ಲಿ ಹೂ ಬಿದ್ದರೆ ತಾವು ಅಂದು ಕೊಂಡ ಕಾರ್ಯ ಆದಷ್ಟು ಬೇಗ ಆಗುತ್ತದೆ ಎಂದು ನಂಬುತ್ತಾರೆ. ಇಲ್ಲಿನ ಸಸ್ಯಾಹಾರಿಗಳೆಲ್ಲರೂ ಈ ದೇವರಿಗೆ ಪೂಜೆ ಸಲ್ಲಿಸುವುದನ್ನು ನಾವು ಕಾಣಬಹುದು. ನಿತ್ಯಪೂಜೆ ಸಲ್ಲುವ ಈ ದೇವಾಲಯದ ಬಳಿ ಬಿಲ್ವಪತ್ರೆ ಮತ್ತು ಸುಂಕತ್ತಿ ಮರಗಳನ್ನು ಕಾಣಬಹುದು. ಈ ಊರು ಮತ್ತು ದೇವಾಲಯದ ಐತಿಹಾಸಿಕ ಮಹತ್ವವನ್ನು ಸಾರುವ ಸುಮಾರು ಏಳೆಂಟು ಶಾಸನಗಳು ಊರ ಸುತ್ತ ಮುತ್ತ ಕಂಡುಬರುತ್ತದೆ.

ಇಲ್ಲಿನ ಗ್ರಾಮದೇವತೆ ಚೌಡೇಶ್ವರಿದೇವಿ, ಈ ದೇವತೆ ಮಹಾವಿಷ್ಣುವಿನ ತಂಗಿ ಎಂದು ಇಲ್ಲಿಯವರ ನಂಬಿಕೆ. ಹಿಂದೆ ದೇವಾಲಯಕ್ಕಾಗಿ ಸುಮಾರು ಮೂವತ್ತು ಎಕರೆ ಭೂಪ್ರದೇಶವನ್ನು ಮಹಾರಾಜರು ದಾನವಾಗಿ ನೀಡಿದ್ದರು. ಅದರಲ್ಲಿ ಹದಿನೈದು ಎಕರೆ ಭೂಮಿ ರೈತರಿಗೆ, ಆರು ಏಕರೆ ಚೌಡೇಶ್ವರಿ ದೇವಿಯ ಪುರೋಹಿತರಿಗೆ, ಒಂಬತ್ತು ಎಕರೆ ದೇವಾಲಯದ ಇತರ ಗಳಿಕೆಗಳಿಗೆಂದು ಮೀಸಲಾಗಿಡಲಾಯಿತು. ಸುಮಾರು ನೂರ ಇಪ್ಪತ್ತು ವರ್ಷಗಳ ಹಿಂದೆ ಸ್ಥಾಪಿಸಲ್ಪಟ್ಟ ಚೌಡೇಶ್ವರಿ ದೇವಾಲಯ ಸ್ತೂಪಗಳ ಮೇಲೆ ದೇವದೇವತೆಗಳ ಚಿತ್ರಗಳಿದ್ದು ದೇವತೆಗಳ ವಾಹನಗಳೆನ್ನಲಾದ ಆನೆ ಸಿಂಹಗಳು ಚಿತ್ರಗಳನ್ನೂ ಕೆತ್ತಲಾಗಿದೆ. ಈ ದೇವಾಲಯದ ಮುಂದೆ ಕೋಣನ ಬಲಿಗಾಗಿ ಕಂಬವನ್ನು ನೆಟ್ಟಿದ್ದಿ ಇಲ್ಲಿನಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದವರು ಈ ಕಂಬಕ್ಕೆ ಪೂಜೆ ಸಲ್ಲಿಸುವ ಪದ್ದತಿ ಇದೆ. ಇವರಿಗೆ ದೇವಾಲಯದ ಒಳಗೆ ಪ್ರವೇಶ ನಿಷಿದ್ದ. ಹೊರಗಿನ ಕಂಬಕ್ಕೆ ಇವರು ಆರತಿಯನ್ನು

ಬೆಳಗುತ್ತಾರೆ. ವರದರಾಜಸ್ವಾಮಿಯ ಉತ್ಸವದ ದಿನವೇ ಗ್ರಾಮದೇವತೆಗೂ ಉತ್ಸವ ನಡೆಯುತ್ತದೆ.

ಇಲ್ಲಿನ ಗ್ರಾಮೀಣರು ವರದರಾಜಸ್ವಾಮಿಯನ್ನು ಮಹಾವಿಷ್ಣುವಿನ ಸ್ವರೂಪವೆಂದೇ ಭಾವಿಸಿದ್ದಾರೆ. ಈತನ ಪತ್ನಿಯರು ಶ್ರೀದೇವಿ ಹಾಗೂ ಭೂದೇವಿಯರು. ಅನೇಕ ವರ್ಷಗಳಿಂದ ನಡೆಯುತ್ತಿರುವ ಈತನ ಉತ್ಸವವು ಮೊದಲಿಗೆ ಅಭಿಷೇಕದಿಂದ ಪ್ರಾರಂಭವಾಗುತ್ತದೆ.

ಪ್ರತಿನಿತ್ಯದ ಅಭಿಷೇಕದನಂತರವೇ ಇತರ ಆಚರಣೆಗಳು ನೆರವೇರುವುದು ನಿತ್ಯಾಭಿಷೇಕಕ್ಕೆ ಹಾಲು, ತುಪ್ಪ, ಮೊಸರು, ಸಕ್ಕರೆ ಹಾಗೂ ಬಾಳೆಹಣ್ಣುಗಳನ್ನು ಉಪಯೋಗಿಸಲಾಗುತ್ತದೆ. ಮೊದಲ ದಿನದ ಅಭಿಷೇಕದದ ನಂತರ ಇಲ್ಲಿ 'ರಕ್ಷಾಬಂಧನದ' ಆಚರಣೆ ನೆರವೇರುತ್ತದೆ. ದುಷ್ಟಶಕ್ತಿಗಳಿಂದ ಸಂರಕ್ಷಣೆ ಪಡೆಯಲು ನಡೆಸುವ ಈ ಆಚರಣೆಯ ನಂತರ ಅದೇ ದಿನ ರಾತ್ರಿ 'ಅಂಕುರಾರ್ಪಣ' ಕಾರ್ಯ ನೆರವೇರುತ್ತದೆ. ಉತ್ಸವಾಂಗವಾಗಿ ಮೊತ್ತ ಮೊದಲು ಧಾನ್ಯಗಳನ್ನು ಮೊಳೆಯಲು ಹಾಕುವ ಶುಭಕಾರ್ಯ ಅಥವಾ ಪ್ರಾರಂಭವೇ ಅಂಕುರಾರ್ಪಣ. ಇಲ್ಲಿ ನವಧಾನ್ಯಗಳನ್ನು ಇಟ್ಟು ದೇವರನ್ನು ಪೂಜಿಸಿ, ಅಹ್ವಾನಿಸಲಾಗುತ್ತದೆ.

ಈ ಧಾನ್ಯಗಳನ್ನು ವಸಂತೋತ್ಸವದ ದಿನ ಬಳಸುತ್ತಾರೆ. ಈ ಸಂದರ್ಭದಲ್ಲೇ 'ಕಲಶ ಪ್ರತಿಷ್ಠೆ' ಮಾಡಲಾಗುತದೆ. ಇದನ್ನು ಕಲಶಶಾಸ್ತ್ರ ಎನ್ನುತ್ತಾರೆ. ಇದೇ ಸಂದರ್ಭದಲ್ಲಿ ಸಂಕಲ್ಪವನ್ನು ಕೈಗೊಳ್ಳುತ್ತಾರೆ. ಇದನ್ನು 'ಸಪ್ತದಿನ ಸಂಕಲ್ಪ' ಎನ್ನಲಾಗುತ್ತದೆ. ಕಲಶ ಪ್ರತಿಷ್ಠೆ ಮಾಡುವ ಮುನ್ನ ಯೊಗಶಾಲೆಯನ್ನು ಸಿದ್ದಗೊಳಿಸಿ, ಹೋಮ ಕುಂಡವನ್ನು ನಿರ್ಮಿಸಲಾಗುತ್ತದೆ. ಒಂಬತ್ತು, ಹದಿನೆಂಟು ಇಲ್ಲವೇ ಇಪ್ಪತ್ತೇಳು ಪ್ರಧಾನ ಕಲಶಗಳನ್ನು ಇಟ್ಟು ಪೂಜಿಲಾಗುತ್ತದೆ. ಕಲಶಗಳು ತಾಮ್ರ ಅಥವಾ ಬೆಳ್ಳಿಯದ್ದೇ ಆಗಿರಬೇಕೆಂದಿಲ್ಲ ಮಣ್ಣಿನ ಮಡಿಕೆಯನ್ನೂ ಬಳಸಬಹುದು.

ಇಲ್ಲಿ ಒಟ್ಟು ಇಪ್ಪತ್ತೇಳು ಮಣ್ಣಿನ ಮಡಿಕೆಗಳನ್ನು ಬಳಸಲಾಗುತ್ತದೆ. ಇದಕ್ಕೆ ನೀರು ತುಂಬಿ, ಏಲಕ್ಕಿ, ಲವಂಗ, ಪಚ್ಚಕರ್ಪೂರ, ಜಾಯಿಕಾಯಿ, ಜಾಪತ್ರೆ, ಕೇಸರಿಹೂ, ಕೇಸರಿಬಣ್ಣ, ಎಲ್ಲವನ್ನೂ ಹಾಕಲಾಗುತ್ತದೆ. ಇದನ್ನು 'ತೀರ್ಥ ಪರಿಕರ'ಗಳೆಂದು ಕರೆಯುತ್ತಾರೆ. ಇಲ್ಲಿ ಪ್ರಧಾನ ಕಲಶಕ್ಕೆ ಸೀರೆ, ಕುಪ್ಪಸ, ಪಂಚೆ, ಹೂಗಳನ್ನು ಇರಿಸಲಾಗುತ್ತದೆ. ಹೀಗೆ ಕಲಶ ಪ್ರತಿಷ್ಠಾಪನೆ ಅಂಕುರಾರ್ಪಣದ ದಿನ ನೆರವೇರುತ್ತದೆ. ಇದನ್ನು ಕೊನೆಯ ದಿನ ಧ್ವಜಾ ಆವರೋಹಣದ ನಂತರವಿಸರ್ಜನೆ ಮಾಡಲಾಗುತ್ತದೆ. ವಿಸರ್ಜನೆಯ ನಂತರ ಈ ಕಲಶಗಳನ್ನು ಅರ್ಚಕರಿಗೆ ಹಾಗೂ ಊರ ಪ್ರಮುಖರಿಗೆ ವಿತರಿಸಲಾಗುತ್ತದೆ. ಹೀಗೆ ನಿತ್ಯ ಅಭಿಷೇಕ, ನಿತ್ಯಹೋಮ ಇಲ್ಲಿ

ನೆರವೇರುತ್ತದೆ. ಕೊನೆಯ ದಿನ ಪೂರ್ಣಾಹುತಿ ನೀಡಲಾಗುತ್ತದೆ. ಇದೇ ದಿನ ರಾತ್ರಿ 'ಧ್ವಜಾರೋಹಣ'ದ ಕಾರ್ಯವೂ ನೆರವೇರುತ್ತದೆ.

ಇಲ್ಲಿ ದೇವಾಲಯದ ಎದುರಿಗೆ ಧ್ವಜ ಸ್ತಂಭವನ್ನು ನೆಡಲಾಗುತ್ತದೆ. ಹೀಗೆ ನೆಟ್ಟನಂತರವೇ ದೇವತಾಕಾರ್ಯಕ್ಕೆ ಸಂಬಂಧಿಸಿದ ಆಚರಣೆಗಳಿಗೆ ಚಾಲನೆ ನೀಡಲಾಗುತ್ತದೆ. ವಿಷ್ಣು ದೇವತೆಗಳಿಗೆ ಪೂಜೆ ಮಾಡಿ ಅವಿರ್ಭಾಗವನ್ನು ಅರ್ಪಿಸಲಾಗುತ್ತದೆ. ಊರಿನಲ್ಲಿ, ನಡೆಯುವ ದೇವತಾಕಾರ್ಯಗಳಿಗೆ ಭಂಗ ಬರದ ಹಾಗೆ ನೋಡಿಕೊಳ್ಳುವ ಉದ್ದೇಶವೇ ಈ ಆಚರಣೆಯ ಮೂಲ ಉದ್ದೇಶವಾಗಿದೆ.

ಎರಡನಯೆ ದಿನ ಬೆಳಗಿನ ಅಭಿಷೇಕದ ನಂತರ ರಾತ್ರಿ ಹನುಮಂತವಾಹನೋತ್ಸವ ನೆರವೇರುತ್ತದೆ. ಹನುಮ ವಿಷ್ಣುವಿನ ಸೇವಕರಲ್ಲಿ ಪ್ರಮುಖ ಸ್ಥಾನಗಳಿಸಿದ್ದಾನೆ. ಆತನ ಬೆನ್ನ ಮೇಲೆ ದೇವರ ಉತ್ಸವ ಮೂರ್ತಿಯ ಸವಾರಿ ಹೊರಟು ಪೂಜೆಗೊಳ್ಳುತ್ತದೆ. ದೇವರ ಸೇವೆಗಳಲ್ಲಿ ಇದು ಒಂದು ವಿಶಿಷ್ಟ ಸೇವೆ ಮೂರನೇಯ ದಿನ ಅಭಿಷೇಕದೊಂದಿಗೆ ಪೂಜಾ ಕೈಂಕರ್ಯಗಳು ಪ್ರಾರಂಭವಾಗುತ್ತದೆ. ರಾತ್ರಿ 'ಕಲ್ಯಾಣೋತ್ಸವ' ನೆರವೇರುತ್ತದೆ.

ಸಪ್ತಋಷಿಗಳು ಬಂದು ದಶಾವತಾರದ ಗುಣಗಳನ್ನು ಹಾಡಿ ಹೊಗಳಿ ಜಗತ್ತಿನ ಪಾಲನೆಗಾಗಿ ವಿಷ್ಣುವನ್ನು ಆರಾಧಿಸುತ್ತಾರೆ ಹಾಗೂ ಲಕ್ಷ್ಮಿಯೊಂದಿಗೆ ಧಾರೆ ಎರೆದು ಕೊಡುತ್ತಾರೆ. ಈ ಹಿಂದೆ ಆದ ಮದುವೆಯನ್ನು ಮತ್ತೆ ಮಾಡಿಸುವ ಮೂಲಕ ಲೋಕ ಕಲ್ಯಾಣವನ್ನು ಕೋರುತ್ತಾರೆ. ನಾಲ್ಕನೇ ದಿನ ಬೆಳಿಗ್ಗೆ 'ಗರುಡೋತ್ಸವ' ನಡೆಸಲಾಗುತ್ತದೆ. ಇಲ್ಲಿ 'ಗರುಡ' ವಾಹನದ ಮೇಲೆ ದೇವರ ಉತ್ಸವಮೂರ್ತಿಯನ್ನು ಕೂರಿಸಿ ಊರಿನಲ್ಲಿ ಮೆರವಣಿಗೆ ನಡೆಸಲಾಗುತ್ತದೆ. ದೇವರನ್ನು ಅಲ್ಲಲ್ಲಿ ನಿಲ್ಲಿಸಿ ಪೂಜಾ ಕೈಂಕರ್ಯಗಳು ನೆರವೇರುತ್ತವೆ. ಊರಿನ ಪ್ರಮುಖ ಬೀದಿಗಳಲ್ಲಿ ಈ ಮರವಣಿಗೆ ನೆರವೇರುತ್ತದೆ.

ಇದೇ ದಿನ ರಾತ್ರಿ 'ಗಜೇಂದ್ರ ಮೋಕ್ಷ' ಆಚರಣೆ ನೆರವೇರುತ್ತದೆ. ಅಂದರೆ ಶಾಪದ ಕಾರಣದಿಂದ ಗಜೇಂದ್ರ ಹಾಗೂ ಮೊಸಳೆಗಳಾಗಿ ಜನಿಸಿದ ಇಬ್ಬರು ಯಕ್ಷರನ್ನು ನಾರಾಯಣ ಕಾಪಾಡಿಸಿದ ಕತೆಯೇ ಈ ಗಜೇಂದ್ರ ಮೋಕ್ಷ ಆಚರಣೆಯಲ್ಲಿ ಪಾರಾಯಣ ಮಾಡಲಾಗುತ್ತದೆ. ಗಜೇಂದ್ರನು ನೀರು ಕುಡಿಯಲು ಹೋದಾಗ ಮೊಸಳೆ ಬಾಯಿ ಹಾಕಿ ಗಜೇಂದ್ರನ ಕಾಲನ್ನು ಹಿಡಿಯಲು, ಗಜೇಂದ್ರ ನಾರಾಯಣ ನಾಮ ಸ್ಮರಣೆಯಿಂದ ತನ್ನ ಸಂಕಷ್ಟದಿಂದ ಪಾರಾದನೆಂಬ ಕಥೆಯನ್ನು ಹೇಳಿ ಮುಗಿಸಿ ಆರತಿ ಮಾಡಿ ದೇವರ ನಾಮಸ್ಮರಣೆ ಮಾಡಲಾಗುತ್ತದೆ. ಐದನೆಯ ದಿನ ಬೆಳಗ್ಗೆ ನಿತ್ಯ ಅಭಿಷೇಕದೊಂದಿಗೆ ಸೇವಾಕಾರ್ಯಗಳು ಪ್ರಾರಂಭವಾಗುತ್ತವೆ. ಈ ದಿನದ ವಿಶೇಷ ಬ್ರಹ್ಮ ರಥೋತ್ಸವ, ಶ್ರೀಯೋಗಪುರಿ

ವರದರಾಜಸ್ವಾಮಿಯ ಬ್ರಹ್ಮ ರಥೋತ್ಸವದ ದಿನವೇ ಚೌಡೇಶ್ವರಿಯ ರಥೋತ್ಸವವೂ ನೇರವೇರುತ್ತದೆ.

ರಥೋತ್ಸವದ ದೇವಕಾರ್ಯಕ್ಕೆ ಸಪ್ತದಿನ ಸಂಕಲ್ಪ ಮಾಡಿ ಕಂಕಣ ತೊಟ್ಟ ಸೇವಾಕರ್ತರು ಮಾಂಸಾಹಾರ ಸೇವನೆ ಮತ್ತು ಕುಡಿತಗಳಿಂದ ದೂರವಿಬೇಕು. ಚೈತ್ರ ಶುದ್ಧ ಪಾಡ್ಯದಿಂದ ಸಪ್ತಮಿಯವರೆಗೆ ನೆರವೇರುವ ಈ ರಥೋತ್ಸವ ಕೈಂಕರ್ಯಗಳು ಅತ್ಯಂತ ವಿಜೃಂಭಣೆಯಿಂದ ನೆರವೇರುತ್ತದೆ. ಇದು ತಿರುಪತಿಯಲ್ಲಿ ಬ್ರಹ್ಮೋತ್ಸವ ನಡೆಯುವ ಕಾಲ ಮತ್ತು ಪ್ರಶಸ್ತ ಸಮು, ದೇವಾನುದೇವತೆಗಳಿಗೆ ಸೇವೆಗೈಯುವ ಈ ಶುಭಗಳಿಗೆಗಾಗಿ ಇಡೀ ಊರು ಸಜ್ಜಾಗಿ ನಿಂತಿರುತ್ತದೆ. ಮೊದಲಿಗೆ ರಥೋತ್ಸವಕ್ಕೆ ಬಳಸುವ ರಥಕ್ಕೆ ಬಲಿ ನೀಡಲಾಗುತ್ತದೆ. ಆನಂತರ ಪುಣ್ಯಾರ್ಚನೆ ಮಾಡಿ, ಹೋಮ ನಡೆಸಲಾಗುತ್ತದೆ. ಇಲ್ಲಿ ನಿತ್ಯ ಅಭಿಷೇಕ ಮತ್ತು ನಿತ್ಯ ಹೋಮಗಳು ನೆರವೇರುತ್ತವೆ. 'ಬಲಿಹರಣಕ್ಕೆ' ಸುದರ್ಶನ ಚಕ್ರವನ್ನು ಪಲ್ಲಕ್ಕಿಯಲ್ಲಿ ಕೂಡಿಸಿ ಊರಿನಲ್ಲಿ ಮೆರವಣಿಗೆ ಮಾಡಲಾಗುತ್ತದೆ.

ದೇವ ವಿಷ್ಣುವಷ್ಟೇ ಪ್ರಮುಖ ಸ್ಥಾನಗಳಿಸಿರಿಯವ ಈ ಚಕ್ರವನ್ನು ಊರಿನಲ್ಲಿ ಮೆರವಣಿಗೆ ಮಾಡುವುದರಿಂದ ದುಷ್ಟ ಗ್ರಹಗಳು ಊರೊಳಗೆ ಪ್ರವೇಶಿಸುವುದಿಲ್ಲ ಎಂಬ ನಂಬಿಕೆ ಇದೆ.ಹಾಗೇನಾದರೂ ಆದರೆ ಸುದರ್ಶನ ಚಕ್ರ ಅವುಗಳನ್ನು ಸಂಹರಿಸುತ್ತವೆ. ಇದರನಂತರ "ಶಾಂತಿ" ಮಾಡಲಾಗುತ್ತದೆ. ಅದನ್ನು ಯಾರೂ ನೋಡುವ ಹಾಗಿಲ್ಲ. ಇದು ನಿಷೇಧ.

ಹೀಗೆ ರಥೋತ್ಸವ ಪ್ರಾರಂಭವಾಗಿ ಉತ್ಸವಮೂರ್ತಿಯನ್ನು ಹೊತ್ತು ಮೆರವಣಿಗೆ ಊರ ಉತ್ತರ ದಿಕ್ಕಿನ ಕಡೆಗೆ ಒಂದು ಮೈಲಿ ದೂರ ಹೊರಡುತ್ತದೆ. ತದನಂತರ ಊರೆಲ್ಲಾ ಸುತ್ತಿ ಪೂಜೆ ಕೈಗೊಂಡು ಯಥಾ ಸ್ಥಾನಕ್ಕೆ ಬಂದು ತಲುಪುತ್ತದೆ. ಆನಂತರ ಹರಕೆ ಹೊತ್ತ ಭಕ್ತಾಧಿಗಳು ತಮ್ಮ ಹರಕೆಯನ್ನು ಸಲ್ಲಿಸುತ್ತಾರೆ.

ಇದೇ ಸಮಯದಲ್ಲಿ 'ಮಂಟಪ್ಪಡಿ ಸೇವೆ' ನೆರವೇರುತ್ತದೆ. ಉತ್ಸವದಲ್ಲಿ ಪಾನಕ, ಮಜ್ಜಿಗೆ ಹಾಗೂ ಕೋಸಂಬರಿಯನ್ನು ಸೇವಾರ್ತವಾಗಿ ವಿನಿಯೋಗಿಸುವುದಕ್ಕೆ 'ಮಂಟಪ್ಪಡಿ ಸೇವೆ' ಎನ್ನುತ್ತಾರೆ. ಇಲ್ಲಿ ಬಿಸಿಲಿನ ಬೇಗೆಯನ್ನು ಸ್ವಲ್ಪ ಮಟ್ಟಿಗೆ ತಡೆಯಲು ಕೃತಕ ಮಂಟಪಗಳನ್ನು ನಿರ್ಮಿಸಲಾಗಿದ್ದು ಅದರ ಅಡಿಯಲ್ಲಿ ಹರಕೆ ಹೊತ್ತ ಸೇವಾಕರ್ತರು ಪಾನಕ, ಮಜ್ಜಿಗೆ, ಹಾಗೂ ಕೋಸಂಬರಿಗಳನ್ನು ಇಟ್ಟು ದೇವರ ಪ್ರಸಾದದ ರೂಪದಲ್ಲಿ ವಿತರಿಸುವುದರಿಂದ ಇದನ್ನು 'ಮಂಟಪ್ಪಡಿ ಸೇವೆ' ಎನ್ನುತ್ತಾರೆ. ಈ ಸೇವೆಗೆ ಸುತ್ತ ಮುತ್ತಲಿನ ಜಡಿಗೇನಹಳ್ಳಿ, ಹೊಂಚನಹಳ್ಳಿ, ಮಾಕನಹಳ್ಳಿ, ಗೋವಿಂದಪುರ ಮುಂತಾದ ಹಳ್ಳಿಗಳಿಂದ

ಭಕ್ತರು ಆಗಮಿಸಿ ದೇವರ ಸವಾರ್ಥವಾಗಿ ಇವುಗಳನ್ನು ಹಂಚುತ್ತಾರೆ. ಇದೇ ದಿನ ಮಧ್ಯಾಹ್ನ 'ಅನ್ನ ಸಂತರ್ಪಣೆ'ಯನ್ನು ಮಾಡಲಾಗುತ್ತದೆ. ಇದನ್ನು 'ಬ್ರಾಹ್ಮಣಸಂತರ್ಪಣೆ' ಎಂದೂ ಕರೆಯುತ್ತಾರೆ. ಕಾರಣ ಬ್ರಾಹ್ಮಣರಿಗೆ ಹಾಗೂ ಇತರೆ ಜನಾಂಗದವರಿಗೆ ಬೇರೆ ಬೇರೆಯಾಗಿ ಬೇರೆ ಬೇರೆ ಸ್ಥಳದಲ್ಲಿ ಅನ್ನ ಸಂತರ್ಪಣೆಯನ್ನು ಏರ್ಪಡಿಸಿರುತ್ತಾರೆ. ಹೀಗೆ ಕೊನೆಯ ಮೂರು ದಿನಗಳೂ ಅನ್ನಸಂತರ್ಪಣೆ ನೆರವೇರುತ್ತದೆ. ಸರಿಸುಮಾರು ಹದಿನೈದು ಸಾವಿರ ಜನ ವಾಗಟರ ಈ ಬ್ರಹ್ಮರಥೋತ್ಸವದಲ್ಲಿ ಭಾಗವಹಿಸುತ್ತಾರೆ. ಈ ಉತ್ಸವ ನಾಲ್ಕುಮೂರು ವರ್ಷಗಳಿಂದ ನಡೆಸಲ್ಪಡುತ್ತಿದೆ.

ರಾತ್ರಿ ಸುಮಾರು ಏಳು ಮೂವತ್ತಕ್ಕೆ 'ಚಿತ್ರಗೋಪುರೋತ್ಸವ' ನೇರವೇರುತ್ತದೆ. ದೇವಾಲಯದ ಗೋಪುರಗಳನ್ನು ತಾಮ್ರ ಅಥವಾ ಹಿತ್ತಾಳೆಯಲ್ಲಿ ಮಾಡಿಸಲಾಗುತ್ತದೆ. ಅದರಲ್ಲಿ ದೇವರಿಗೆ ಸಂಬಂಧ ಹೊಂದಿದ ವಿವರಗಳನ್ನು ಒಳಗೊಂಡ ಚಿತ್ರಗಳನ್ನು ಕೆತ್ತಿರುವುದು ಕಾಣಬಹುದು. ಹೀಗೆ ಕೆತ್ತಿಸಿದ ಪಲಕಗಳನ್ನು ದೇವಾಲಯದ ಗೋಪುರಕ್ಕೆ ಹಾಕಲಾಗುತ್ತದೆ. ಇದನ್ನು 'ಚಿತ್ರ ಗೋಪುರೋತ್ಸವ' ಎನ್ನುತ್ತಾರೆ. ಈ ಮೇಲ್ಕಂಡ ಪ್ರತಿಯೊಂದು ಸೇವೆಗೂ ಸೇವಾಕರ್ತರನ್ನು ಮೊದಲೇ ನಿರ್ಧರಿಲಾಗುತ್ತದೆ.

ಆರನೇಯ ದಿನ ಬೆಳಗ್ಗೆ ನೇರವೇರುವ ಅಭಿಷೇಕದ ನಂತರ ಮಧ್ಯಾಹ್ನ ಬ್ರಾಹ್ಮಣ ಸಂತರ್ಪಣೆ ನೆರವೇರುತ್ತದೆ. ರಾತ್ರಿ 'ಪಾರ್ವಾಟೋತ್ಸವ' ನಡೆಯುತ್ತದೆ. ಇಲ್ಲಿ ಅಶ್ವದ ಮೇಲೆ ದೇವರನ್ನು ಮೆರವಣಿಗೆ ಮಾಡಲಾಗುತ್ತದೆ. ಈ ಹಿಂದೆ ದೇವರ ಒಡವೆಗಳನ್ನು ಕೊಳ್ಳೆ ಹೊಡೆದುಕೊಂಡು ಹೋದ ಸಂಗತಿಯನ್ನು ನೆನಪಿಸುವ ಈ ಉತ್ಸವ ಅತ್ಯಂತ ಉತ್ಸಾಹದಲ್ಲಿ ನೆರವೇರುತ್ತದೆ.

ಕೊಳ್ಳೆ ಹೊಡೆದ ವ್ಯಕ್ತಿಗಳನ್ನು ಬೇಟೆಯ ಮೂಲಕ ಊರೆಲ್ಲ ಅಟ್ಟಿಸಿಕೊಂಡು ಹೋಗಿ ಊರಗಡಿ ಭಾಗದವರೆಗೆ ಬಿಟ್ಟು ಬರಲಾಗುತ್ತದೆ. ಇದನ್ನು 'ಮೃಗಯಾ ವಿನೋದೋತ್ಸವ' ಎಂದೂ ಕರೆಯುತ್ತಾರೆ. ಇದೇ ರಾತ್ರಿ ಒಂಬತ್ತು ಮೂವತ್ತಕ್ಕೆ 'ಶಯನೋತ್ಸವ' ನೆರವೇರುತ್ತದೆ. ವರದರಾಜ ಸ್ವಾಮಿ ಹಾಗೂ ಅಮ್ಮನವರ ವಿಗ್ರಹಗಳನ್ನು ಉಯ್ಯಾಲೆಯಲ್ಲಿ ಹಾಕಿ ತೂಗಲಾಗುತ್ತದೆ. ಹೂಗಳಿಂದ ಅಲಂಕರಿಸಲ್ಪಟ್ಟ ಉಯ್ಯಾಲೆಯಲ್ಲಿ ದೇವರ ವಿಗ್ರಹಗಳನ್ನು ಸ್ಥಾಪಿಸಲಾಗುತ್ತದೆ.

ದೇವರಿಗೆ ಸಂಗೀತ ಸೇವೆಯೂ ಸಲ್ಲುತ್ತದೆ. ಆನಂತರ ದೇವಾಲಯದ ಬಾಗಿಲನ್ನು ಹಾಕಿಕೊಂಡು ಬರಲಾಗುತ್ತದೆ. ಇಲ್ಲಿ ಗ್ರಾಮೀಣರು ದೇವರಿಗೆ ಮದುವೆ ಮುಂಜಿ ಹಾಗೂ ಮಕ್ಕಳನ್ನು ಆರೋಪಿಸುವುದನ್ನು ಕಾಣಬಹುದು. ಏಳನೇ ದಿನ ಬೆಳಗ್ಗೆ ದೇವರಿಗೂ ಸುಪ್ರಭಾತ

ಸೇವೆ ಸಲ್ಲುತ್ತದೆ. ಮೊದಲಿಗೆ ಬಾಗಿಲನ್ನು ತೆಗೆಯುವಾಗ ಹಸು ಹಾಗೂ ಕರುವನ್ನು ದೇವಾಲಯದ ಒಳಗೆ ಬಿಡಲಾಗುತ್ತದೆ. ಆನಂತರ ಪುರೋಹಿತರು ದೇವಾಲಯಕ್ಕೆ ಪ್ರವೇಶಿಸುತ್ತಾರೆ. ಇಲ್ಲಿ ನಡೆಯುವ ಶಯನೋತ್ಸವ ಮತ್ತು ಸುಪ್ರಭಾತ ಸೇವೆಗಳನ್ನು ಅಮ್ಮನವರ ಕೋಪವನ್ನು ತಣಿಸಲು ಮಾಡಲಾಗುತ್ತದೆ. ಹಸು ಮತ್ತು ಕರುವನ್ನು ಮೊದಲು ದೇವಾಲಯದೊಳಗೆ ಬಿಡುವ ಕಾರಣ ಶಯನೋತ್ಸವ ನಡೆಸಿದ ಮೇಲೆ ದೇವರನ್ನು ಮೊದಲಿಗೆ ಮಾನವರು ಯಾರೂ ನೋಡಬಾರದೆಂಬ ನಂಬಿಕೆ ಜನಪದರಲ್ಲಿ ಇರುವುದೇ ಆಗಿದೆ. ಆನಂತರ 'ವಿಶ್ವ ರೂಪದರ್ಶನ' ಸೇವೆ ನೆರವೇರುತ್ತದೆ. ವರದರಾಜಸ್ವಾಮಿಯನ್ನು 'ವಿಶ್ವರೂಪದರ್ಶನ'ಕ್ಕಾಗಿ ಅಲಂಕರಿಸಲಾಗುತ್ತದೆ. ದೇವರ 'ಅಭಯಹಸ್ತ' ಭಕ್ತರ ಮೇಲಿರಲಿ ಎಂಬ ಉದ್ದೇಶದಿಂದ ಈ ಸೇವೆಗಳನ್ನು ನೆರವೇರಿಸಲಾಗುತ್ತದೆ. ಮದ್ಯಾಹ್ನ 'ವಸಂತೋತ್ಸವ' ನೆರವೇರತ್ತದೆ.

## ಸಾಸಲು ಗ್ರಾಮದ ಮಾರಮ್ಮನ ಐತಿಹ್ಯ

ಸಾಸಲು ಗ್ರಾಮದ ಮಾರಮ್ಮನಿಗೆ ಸಂಬಂದಪಟ್ಟಂತೆ ಒಂದು ದಂತ ಕತೆ ಇದೆ ಇಲ್ಲಿನ ಮುದ್ದೇಮಾರಮ್ಮನನ್ನು ಕಾಡಿಗೆ ಸಾಗಾಕಿ ಹಿಂದೆ ನೋಡದೆ ಬರಬೇಕು. ಅಂದು ರಾತ್ರಿ ದೇವಾನು ದೇವತೆಗಳಿಗೆ ಕಾಡಿನಲ್ಲಿ ಮಾರಮ್ಮ ಊಟ ಹಾಕುತ್ತಾಳೆ ಎಂಬುವುದು ಹಾಗೆಯೇ ಸಾಸಲು ಗ್ರಾಮದ ಮಚ್ಚೇನಹಳ್ಳಿ ಮಾರಮ್ಮನನ್ನು ಮೂಲ ಊರದ ಶ್ರೀರಾಮನಹಳ್ಳಿಯವರಳು ಈ ಹಳ್ಳಿಯವರು ಮಾರಮ್ಮನನ್ನು ಕಾಡಿನಲ್ಲಿ ಕೂರಿಸಿದಾಗ ದನ ಕಾಯುವ ಹುಡುಗರು ಕಲ್ಲಿನಿಂದ ಜಜ್ಜಿ ಮಾರಮ್ಮ ದೇವರ ವಿಗ್ರಹವನ್ನು ವಿಕಾರಗೋಳಿಸಿದರಂತೆ ಆಗ ಮುನಿದ ಈ ದೇವತೆ ಆ ಮಚ್ಚೇನಹಳ್ಳಿಯ ಧನ ಗಾಡಿಗಳನ್ನು ಹಸುಗಳನ್ನು ಕಾಡಿನಿಂದ ಹಿಡಿದು ಊರ ಬಾಗಿಲ ತನಕ ಸಾಯಿಸಿ ಹಾಕಿದಳಂತೆ. ಈ ಸುದ್ದಿ ತಿಳಿದ ಗ್ರಾಮಸ್ಥರು ಪ್ರತಿ ವರ್ಷ ನಾವು ಜಾತ್ರೆ ಮಾಡುತ್ತೇವೆ ತಪ್ಪಾಯಿತು ಇದೇ ಕಾಡಲ್ಲಿ ಸಾಗಾಕುತ್ತೇವೆಂದು ಕೇಳಿಕೊಂಡಾಗ ಎಲ್ಲರೂ ಬದುಕಿದರಂತೆ ಇದು ಮಚ್ಚೇನಹಳ್ಳಿಯವರು ಮಾರಮ್ಮನ ಜಾತ್ರೆ ಮಾಡುವುದು ಇಂದಿಗೂ ಸಹ ನೋಡಬಹುದು.

ತೀರಾ ಇತ್ತೀಚೆಗೆ ಊರಿಗೆ ಕೆಡಾಗುತ್ತದೆ ಎಂದು ಎಲ್ಲಾ ಗ್ರಾಮಾಸ್ಥರು ಈ ಜಾತ್ರೆಯನ್ನು ಮಾಡಿದ್ದೇವೆ ಎಂದು ಹೇಳಿದರು ಗ್ರಾಮಾಸ್ಥರು ಈ ಜಾತ್ರೆಯನ್ನು ತುಂಬಾ ಭಯ ಭಕ್ತಿಯಿಂದ ದೇವರಿಗೆ ಇಷ್ಟವಾಗುವತ್ತೇ ಬದಕುವ ಮುಗ್ದ ತನವನ್ನು ಪರಂಪರೆಯಿಂದ ಬೆಳಿಸಿಕೊಂಡು ಬರುತ್ತಿರುವುದನ್ನು ಕಾಣಬಹುದು ಈ ರೀತಿಯಾಗಿ ಪುರಾಣದಂತಿರುವ ಹಲವಾರು

ಐತಿಹ್ಯಗಳ ಕರುಹುಗಳಾಗಿ ಧಾರ್ಮಿಕ ವ್ಯವಸ್ಥೆ ಜನಜೀವನದಲ್ಲಿ ಮನುಕುಲವನ್ನು ತನ್ನ ಅಂಕೆಯಲ್ಲಿ ಇಟ್ಟುಕೊಂಡು ಯಾವುದೇ ರೀತಿಯ ಸ್ಥಿತ್ಯಂತರಗಳಿಗೂ ಒಳಗಾಗದಂತೆ ತನ್ನ ತನವನ್ನು ಉಳಿಸಿಕೊಂಡಿರುವ ವಿಭಿನ್ನ ನೆಲೆಗಳನ್ನು ಧಾರ್ಮಿಕ ವ್ಯವಸ್ಥೆಯಲ್ಲಿ ಕಾಣಬಹುದು.

## ೪.೧ ಆಚರಣೆಗಳು

ಮತಧರ್ಮಗಳಿಗೆ ಸಂಬಂಧಿಸಿದಂತೆ ನಡೆಸುವ ಕ್ರಿಯೆ ಹಾಗೂ ವಿಧಿಗಳಿಗೆ ನಾವು 'ಆಚರಣೆ' ಎನ್ನಬಹುದು. ಆಚರಣೆ ಒಂದು ಸಂಸ್ಕೃತಿಯ ಪ್ರತಿಬಿಂಬ. ಒಂದು ಸಂಸ್ಕೃತಿಯನ್ನು ಅರಿತುಕೊಳ್ಳಬೇಕಾದರೆ ಆ ಸಂಸ್ಕೃತಿಗೆ ಸಂಬಂಧಿಸಿದ ಆಚರಣೆಯನ್ನು ಕೂಲಂಕುಷವಾಗಿ ತಿಳಿದುಕೊಳ್ಳುವ ಅಗತ್ಯವಿದೆ. "ಆಚರಣೆಗಳು ಕಾಲದಿಂದ ಕಾಲಕ್ಕೆ ವ್ಯಕ್ತಿಯಿಂದ ವ್ಯಕ್ತಿಗೆ ಹರಿದುಬಂದು ಆಚರಿಸಲ್ಪಡುತ್ತವೆ. ಜನಪದ ಧರ್ಮ, ನಂಬಿಕೆ, ಪುರಾಣಕಲ್ಪನೆ ಇವುಗಳೆಲ್ಲವೂ ಆಚರಣೆಯ ಆಧಾರದಿಂದಲೇ ಇಂದಿನವರೆಗೂ ನಡೆದುಕೊಂಡು ಬಂದಿವೆ. ಆಚರಣೆಗಳನ್ನು ಈ ಮುಂದೆ ಸೂಚಿಸಿದಂತೆ ವಿಭಾಗಿಸಬಹುದು.

೧. ವೈಯಕ್ತಿಕ ಆಚರಣೆ

೨. ಕೌಟುಂಬಿಕ ಆಚರಣೆ

೩. ಸಾಮೂಹಿಕ ಆಚರಣೆ

೪. ಸಾಮಾಜಿಕ ಆಚರಣೆ

೫. ವ್ಯವಸಾಯಾತ್ಮಕ ಆಚರಣೆ

೬. ಧಾರ್ಮಿಕ ಆಚರಣೆ

ವೈಯಕ್ತಿಕವಾದ ಕಾರಣದಿಂದ ಅಂದರೆ ವ್ಯಕ್ತಿಗತ ನಂಬಿಕೆಯಿಂದ ನಡೆಸುವ ಆಚರಣೆಗಳೇ ವೈಯಕ್ತಿಕ ಆಚರಣೆಗಳು. ಉದಾ: "ಬಾಯಿಬೇಗ" ಹಾಗೂ "ಕೊಂಡಹಾಯುವುದು" ಮುಂತಾದವುಗಳು. ಕುಟುಂಬದ ಯೋಗಕ್ಷೇಮದ ಕಾರಣಕ್ಕಾಗಿ ನಡೆಸುವ ಆಚರಣೆಗಳಿಗೆ ಕೌಟುಂಬಿಕ ಆಚರಣೆಗಳು ಎನ್ನುತ್ತಾರೆ."[೧೧] ಉದಾ: "ಮುಡಿಕೊಡುವುದು" ; ಹಾಗೂ "ಸಿಡಿ" ಮುಂತಾದವುಗಳು ಎಲ್ಲಾ ಜನಾಂಗದವರೂ ಸೇರಿ ಒಟ್ಟಿಗೆ ಆಚರಿಸುವ ಆಚರಣೆಗೆ ಸಾಮೂಹಿಕ ಆಚರಣೆ ಎನ್ನುತ್ತಾರೆ.

ಉದಾ: "ದೀಪಾರತಿ" ಹಾಗೂ "ಅಭಿಷೇಕ" ಮುಂತಾದವುಗಳು. ಒಂದು ನಿರ್ದಿಷ್ಟ ಸಮಾಜದ ಹಾಗೂ ಒಂದು ನಿರ್ದಿಷ್ಟ ವರ್ಗದ ಜನರಿಗೆ ಸೀಮಿತವಾದ ಆಚರಣೆಗಳೇ ಸಾಮಾಜಿಕ ಆಚರಣೆ. ಉದಾ: "ಬಲಿ" ಹಾಗೂ "ಅಲಗುಸೇವೆ" ಮುಂತಾದವುಗಳು, ಕೃಷಿಗೆ

ಹಾಗೂ ಭೂಮಿಗೆ ಸಂಬಂಧಿಸಿದ ಆಚರಣೆಗಳು ವ್ಯವಸಾಯಾತ್ಮಕ ಆಚರಣೆಗಳು. ಉದಾ: "ಘಟಪೂಜೆ" ಹಾಗೂ "ಹೊನ್ನೇರುಚಪ್ಪರ" ಮುಂತಾದವುಗಳು. ಧರ್ಮಸಂಬಂಧಿ ಆಚರಣೆಗಳು. ಉದಾ: "ರುದ್ರನಾಲಿಗೆ" ಮುಂತಾದ ಶಿಷ್ಟ ಆಚರಣೆಗಳು. ಬಹುತೇಕ ಆಚರಣೆಗಳಿಗೆ 'ಹರಕೆ' ಹಾಗೂ ನಂಬಿಕೆಗಳು ಮೂಲ ಕಾರಣವಾಗಿದೆ. ಹರಕೆ ಆಚರಣೆಯ ಪ್ರಮುಖ ಅಂಗವಾದರೆ ನಂಬಿಕೆ ಹರಕೆಯ ಅಡಿಪಾಯ ಅಥವಾ ತಳಹದಿ. ಒಟ್ಟಿನಲ್ಲಿ ಮಾನವ ನಂಬಿಕೆಯ ಆಧಾರದ ಮೇಲೆ ಹರಕೆಯನ್ನು ಕಟ್ಟುತ್ತಾನೆ. ಆ ಹರಕೆಯ ಹಬ್ಬ ಹರಿದಿನಗಳಲ್ಲಿ ಅಥವಾ ಜಾತ್ರೆಗಳಲ್ಲಿ ಆಚರಣೆಗೆ ತರುತ್ತಾನೆ. ಹೀಗೆ ಆಚರಣೆಗಳು ಅಸ್ತಿತ್ವಕ್ಕೆ ಬರುತ್ತವೆ.

ಜನಪದ ದೇವತೆಗಳಿಗೆ ಸಲ್ಲುವ ಹರಕೆ ಸೇವೆಗಳೂ ತೀರಾ ವಿಚಿತ್ರವಾದವು. ದಿಂಡುರುಳು ಸೇವೆ ಹಾಗೂ "ಹೆಜ್ಜೆ ನಮಸ್ಕಾರ" ಮೊದಲಾದ ಸರಳ ಸೇವೆಗಳಲ್ಲದೆ ಮೈಗೆಲ್ಲಾ ದಬ್ಬಳದ ಗಾತ್ರ ಸರಳುಗಳನ್ನು ಚುಚ್ಚಿಕೊಂಡು ತಮಟೆ ಹೊಡೆಯುತ್ತಾ ಅದರ ಗತ್ತಿಗೆ ತಕ್ಕಂತೆ ಕುಣಿದಾಡುತ್ತಾ ಹರಕೆಯನ್ನು ಒಪ್ಪಿಸುತ್ತಾರೆ. "ಬಾಯಿಬೀಗ ಕೊಂಡ ಹಾಯುವುದು, ಎಲ್ಲಮ್ಮನಿಗೆ ಹರಕೆ ಹೊತ್ತವರು ನಡೆಸಿಕೊಂಡು ಬಂದಿರುವ ಗಂಡಸು ಹೆಂಗಸಾಗುವ, ಹೆಂಗಸು ಗಂಡಸಾಗುವ ಜೋಗತಿ ಸಂಪ್ರದಾಯ ಇನ್ನೂ ಕೆಲವು ಸೇವೆಗಳು ಜನಪದ ದೇವತೆಗಳಿಗೆ ಸಲ್ಲುತ್ತವೆ". ಹೀಗೆ ಆಚರಣೆಗಳನ್ನು ಒಳಗೊಂಡ ಸಂಕೀರ್ಣ ಸ್ವರೂಪವನ್ನು ಹಬ್ಬ ಎಂದು ಕರೆಯಬಹುದು. ಸಂಪ್ರದಾಯ, ಹಬ್ಬ ಆಚರಣೆ ಈ ಮೂರಕ್ಕೂ ನಂಬಿಕೆಯೇ ಜೀವಧಾತು. ಆಚರಣೆಗಳು ಬಹುತೇಕ ಧಾರ್ಮಿಕ ಮತ್ತು ದೈವಿಕ ಸಂಸ್ಪರ್ಶವನ್ನು ಪಡೆದಿರುತ್ತವೆ."[೧೨] ಇದು ನಂಬಿಕೆಯನ್ನು ಆಧರಿಸಿದ್ದು, ವಿಶೇಷ ಸಂದರ್ಭಗಳಿಗೆ ಅನ್ವಯಿಸುತ್ತವೆ. ಹಾಗೂ ಆಚರಿಸಲ್ಪಡುತ್ತವೆ. ನಿತ್ಯಜೀವನದಲ್ಲಿ ವ್ಯಕ್ತಿಗತ ಬದುಕು ಅನೇಕ ಸಂಕ್ರಮಣಗಳಿಗೆ ಒಳಗಾಗುತ್ತವೆ. ಇಂತಹ ಸಂಕ್ರಮಣಗಳು ಜೀವನದಲ್ಲಿ ನಡೆಯದಿರುವಂತೆ ಮಾನವ ಎಚ್ಚರವಹಿಸುತ್ತಾನೆ. ಇಂತಹ ಎಚ್ಚರಗಳು, ಕಾಳಜಿಗಳೇ ಅನೇಕ ಆಚರಣೆಗಳ ಹುಟ್ಟಿಗೆ ಕಾರಣವಾಗಿವೆ. ವ್ಯಕ್ತಿಯ ಬದುಕು ಬಾಲ್ಯದಿಂದ ವೃದ್ಧಾಪ್ಯವನ್ನು ಮುಟ್ಟುವವರೆಗೂ ಅನೇಕ ನಂಬಿಕೆಗಳಿಂದ ಕೂಡಿರುತ್ತವೆ. ಹಾಗೂ ಆಚರಣೆಗಳನ್ನು ಒಳಗೊಂಡಿರುತ್ತವೆ. ಇಂತಹ ಅನೇಕ ಆಚರಣೆಗಳು ಹಬ್ಬ ಹರಿದಿನಗಳಲ್ಲಿ ಹರಕೆಯ ರೂಪದಲ್ಲಿ ನೆರವೇರುತ್ತವೆ.

ಹರಕೆ ಆಚರಣೆಗಳಲ್ಲಿ ಒಂದು ಪ್ರಕೃತಿಯ ಅನಂತ ಶಕ್ತಿಯನ್ನು ಒಲಿಸಿಕೊಳ್ಳಲು ಅಥವಾ ಪ್ರಸನ್ನಗೊಳಿಸಿಕೊಳ್ಳಲು ಜನಪದರು ನಡೆಸುತ್ತಾ ಬಂದ ಹಲವು ಬಗೆಯ

ಆಚರಣೆಗಳಿಗೆ ಹರಕೆ ಮೂಲ ಕಾರಣ. ಹರಕೆ "ನಿತ್ಯದ ಪ್ರಾರ್ಥನೆ ಯಿಂದ ಭಿನ್ನವಾದುದು ಹಾಗೂ ವಿಶಿಷ್ಟವಾದುದು. ನಿತ್ಯದ ಪ್ರಾರ್ಥನೆ ಬಹುಪಾಲು ವ್ಯಕ್ತಿಗತವಾಗಿರುತ್ತದೆ.

ಹರಕೆಯಲ್ಲಿ ವ್ಯಕ್ತಿಗತವಾದ ಅಂಶ ಭಾಗಶಃ ಇದ್ದರೂ ಸಾರ್ವತ್ರಿಕ ಅಥವಾ ಸಾಮೂಹಿಕ ಇಲ್ಲವೇ ಕೌಟುಂಬಿಕ ಹಿತ ಪ್ರಧಾನವಾಗಿರುತ್ತದೆ ಎನ್ನಬಹುದು. ಮನೆಯಲ್ಲಿ ಯಾರಿಗಾದರೂ ಕೇಡಾದರೆ, ಕಾಯಿಲೆಯಾದರೆ ಬಂದಿರುವ ತೊಡಕನ್ನು, ರೋಗವನ್ನು ನಿವಾರಿಸಿದರೆ ಮನೆದೇವರಿಗೆ ಬಲಿಕೊಡುತ್ತೇನೆ, ಅಭಿಷೇಕ ಮಾಡುತ್ತೇನೆ, ತೀರ್ಥಯಾತ್ರೆ ಮಾಡುತ್ತೇನೆ ಎಂದು ತಮ್ಮ ಶಕ್ತ್ಯಾನುಸಾರ ಮನೆಯ ಯಜಮಾನ ಇಲ್ಲವೆ ಯಜಮಾನಿ ರೋಗಿಯ ಪರವಾಗಿ ಹರಕೆ ಮಾಡಿಕೊಳ್ಳುತ್ತಾರೆ."[೧೩] ಹರಕೆ ತೀರಿಸುವ ಸಂಕಲ್ಪ ಹೊತ್ತ ಹಿರಿಯರು ಶುಭ್ರವಾದ ಒಂದು ತುಂಡು ಬಿಳಿಯ ಬಟ್ಟೆಯನ್ನು ತುಂಬಿದ ಕೊಡದಲ್ಲಿ ಅದ್ದಿ, ಒದ್ದೆಬಟ್ಟೆ ಮಾಡಿ ಅದಕ್ಕೆ ಅರಿಸಿನ ಹಚ್ಚಿ ಅದರಲ್ಲಿ ನಾಣ್ಯವನ್ನು ಪೂಜಿಸುತ್ತಾರೆ. ಕೆಲವೊಮ್ಮೆ ಬಾಗಿಲಿಗೆ ಕಾಲಿಗೆ, ಮನೆಯ ಮುಂದಿನ ಸೂರಿಗೆ ಕಟ್ಟುವುದು ಉಂಟು. ಹೀಗೆ ಕಟ್ಟುವುದನ್ನು "ಹೊನ್ನೆಸ್ಕು" ಮಾಡಿ ಕಟ್ಟುವುದು ಅಥವಾ "ಮುಡಿಪುಕಟ್ಟುವುದು" ಎನ್ನುತ್ತಾರೆ.

## ಚಿಕ್ಕ ಮದುರೆಯ ಶ್ರೀ ಶನಿಮಹಾತ್ಮಸ್ವಾಮಿಯ ಸಂಬಂಧಪಟ್ಟ ಆಚರಣೆಗಳು

ದೊಡ್ಡಬಳ್ಳಾಪುರ ತಾಲ್ಲೂಕಿನ ಮಧುರ ಹೋಬಳಿಯ ಕನಸವಾಡಿ ಶನಿಮಹಾತ್ಮ ದೇವಾಲಯದಲ್ಲಿ ಶ್ರಾವಣ ಮಾಸದ ಮೂರನೇ ಶನಿವಾರ ಶ್ರಾವಣ ಸಂಭ್ರಮ ಸಾವಿರಾರು ಭಕ್ತರು ಶನಿಮಹಾತ್ಮ ದೇವಾಲಯದಲ್ಲಿ ವಿಜೃಂಭಣೆಯಿಂದ ಪೂಜೆ ಕೈಂಕರ್ಯಗಳನ್ನು ಆಚರಿಸಲಾಗುತ್ತದೆ.

ಮಧುರೆ ಹೋಬಳಿಯಲ್ಲಿರುವ ಕಾರಣದಿಂದಾಗಿ ಇದಕ್ಕೆ ಮಧುರೆ ದೇವಸ್ಥಾನ ಅಥವಾ ಮಧುರೆ ಶನಿಮಹಾತ್ಮ ದೇವಸ್ಥಾನ ಎಂದೇ ಜನ ಜನಿತವಾಗಿದೆ. ಈ ಪ್ರಸಿದ್ದ ದೇವಾಲಯವು ರಾಜ್ಯಾದ್ಯಂತ ಭಕ್ತಾದಿಗಳನ್ನು ಸೆಳೆಯುತ್ತಿದೆ. ವಿಶೇಷವಾಗಿ ಶ್ರಾವಣ ಮಾಸದ ಶನಿವಾರದಂದು ಇಲ್ಲಿ ಜಾತ್ರೆಯ ವಾತಾವರಣವಿರುತ್ತದೆ.

ಶ್ರಾವಣ ಮಾಸದ ಶನಿವಾರದಂದು ಇಲ್ಲಿ ಲಕ್ಷಾಂತರ ಭಕ್ತರು ಆಗಮಿಸುತ್ತಾರೆ ಹೊಸ ವಾಹನಗಳನ್ನು ಕೊಂಡಾಗಲೂ ಸ್ವಾಮಿಯ ಸನ್ನಿಧಿಯಲ್ಲಿ ಪೂಜೆ ಮಾಡಿಸುವುದು ಸಾಮಾನ್ಯವಾಗಿದೆ. ರಥೋತ್ಸವದ ಅಂಗವಾಗಿ ಒಂದು ವಾರಗಳ ಕಾಲ ವಿವಿಧ ಧಾರ್ಮಿಕ, ಸಾಂಸ್ಕೃತಿಕ ಕಾರ್ಯಕ್ರಮಗಳು ಹಾಗೂ ದೇವರ ಉತ್ಸವಗಳು ನಡೆಯುತ್ತವೆ. ಪ್ರತಿದಿನ ಬೆಳಿಗ್ಗೆ

೬ ರಿಂದ ೮ ಗಂಟೆವರೆಗೆ ಅಭಿಷೇಕ ಹಾಗೂ ಪೂಜೆ ನಡೆಯಲಿದೆ. ಇಡೀ ದಿನ ಪೂಜೆ ನಡೆಯುತ್ತದೆಯಾದರೂ ಮಹಾಮಂಗಳಾರತಿ ಮಾತ್ರ ರಾತ್ರಿ ೮ಗಂಟೆಗೆ ನಡೆಯುತ್ತದೆ.

## ಮಹಿಮರಂಗನಾಥ ಸ್ವಾಮಿಗೆ ಸಂಬಂಧಪಟ್ಟ ಆಚರಣೆಗಳು

ಪ್ರತಿವರ್ಷ ಫೆಬ್ರವರಿ ತಿಂಗಳಲ್ಲಿ ಬಾರಿ ದನಗಳ ಜಾತ್ರೆ ನಡೆಯುತ್ತದೆ ಈ ದನಗಳ ಜಾತ್ರೆ ಕರ್ನಾಟದಲ್ಲಿಯೇ ಹೆಸರುವಾಸಿಯಾಗಿದೆ. ಇದೇ ವೇಳೆ ಮಾಘ ಅಥವಾ ಫಾಲ್ಗುಣ ಮಾಸದಲ್ಲಿ ರಥೋತ್ಸವವು ಜರಗುತ್ತದೆ. ದೇಗುಲಗಳು ಭಾನುವಾರ ಬೆಳಿಗ್ಗೆ ೯ ರಿಂದ ೧೧ ರವರೆಗೆ. ಶನಿವಾರದಂದು ಮಧ್ಯಾಹ್ನ ೧ ರವರೆಗೆ ಮತ್ತು ಇತರೆ ದಿನಗಳಲ್ಲಿ ಬೆಳಿಗ್ಗೆ ೮ ರಿಂದ ೯.೩೦ ರವರೆಗೆ ತೆರೆದಿರುತ್ತದೆ.

### ಶಿವಗಂಗೆಗೆ ಸಂಬಂಧಪಟ್ಟಂತಹ ಆಚರಣೆಗಳು

ಪೂಜಾಕುಣಿತ, ಕರಗದ ಕುಣಿತ, ನಂದೀದ್ವಜ ಕುಣಿತ, ಪಟ್ಟ ಕುಣಿತ, ಗೊರವಕುಣಿತ, ಭಾಗವಂತಿಕ ಕುಣಿತ, ಸೋಮನ ಕುಣಿತ, ಮುಖವಾಡ ನೃತ್ಯ, ಸಿಡೀರಣ್ಣನ ಕುಣಿತ, ಡಿಕಾಂಬರಿ ಕುಣಿತ, ಪಂಡರೀಭಜನೆ, ಉಮ್ಮತ್ತಾಟ್, ಬೀಸುಕಾಂಸಳೆ, ಲಂಬಾಣಿಕುಣಿತ ಮುಖ್ಯವಾದುದು ಒನಕೆಕುಣಿತ, ಚಂಬು ಕರಗ, ಚಿತ್ರಗೋಪುರ ಕರಗ, ಕಾವಡಿ, ಕೋಲಾಟ, ಹಲಗೆಕುಣಿತ, ಮರಗಾಲುಕುಣಿತ, ಕೀಲು ಕುದರೆ ಕುಣಿತ, ಹುಲಿ ವೇಷ, ಪಾಳಗಾರನ ಕುಣಿತ.

**ಜನಪದ ರಂಗಭೂಮಿ ಅಟ್ಟದ ಕಲೆಗಳು:–** ಸೂತ್ರದ ಗೊಂಬೆ ಆಟ, ತೊಗಲುಗೊಂಬೆ ಆಟ, ಬಯಲಾಟಗಳು ನಡೆಯುತ್ತದೆ.

**ಗಾಯನ ಮೂಲ ಕಲೆಗಳು:–** ಗಂಡಸರು ಮತ್ತು ಹೆಂಗಸರ ಹಾಡುಗಳು ಭಜನೆಮೇಳ, ಗೊರವರು, ಕಾಂಸಾಳೆಯವರು ನೀಲಗಾರರು, ಚೌಡಿಕೆಯವರು ದೊಂಬಿದಾಸರು ಹೇಳವರು.

**ಸೋಗಗಳು ಅಥವಾ ಮನರಂಜಕರು;–** ದೊಂಬರು, ಮೋಡಿಗಾರರು ಕುಸ್ತಿ, ಕೋಲೆ ಬಸವನ ಆಟ, ಹಾವಾಡಿಗರ ಆಟ, ಕೋತಿ ಕುಣಿತ ಕರಡಿ ಕುಣಿತ.

**ರಚನಾ ಕಲೆಗಳು ಅಥವಾ ಸಂಕೀರ್ಣ ಕರ ಕಲೆ:–** ಚಿತ್ರಕಲೆ, ರಂಗೋಲಿ, ಹೆಚ್ಚೆ, ವಾಸ್ತು, ಅಲೆಮಾರಿಕಲೆ: ಬುಡುಬುಡಿಕೆ

ಈ ಕಾರ್ಯಕ್ರಮಗಳು ಹೊನ್ನಾದೇವಿಯ ಜಾತ್ರೆಯಲ್ಲಿ ನಡೆಯುವಂತಹ ಸಾಂಸ್ಕೃತಿಕ ಕಾರ್ಯಕ್ರಮಗಳಾಗಿವೆ ಇದೊಂದು ಮಾನವ ಸಮುದಾಯವನ್ನು ಒಂದುಗೂಡಿಸುವಲ್ಲಿ ಈ ಜಾತ್ರೆಗಳು ಸಹ ತುಂಬಾ ಸಹಕಾರಿಯಾಗಿದೆ.

ಮಹಾಶಿವರಾತ್ರಿಯ ದಿವಸ ಶಿವಗಂಗೆಯಲ್ಲಿ ಶ್ರೀ ಗಂಗಾಧರೇಶ್ವರ ಸ್ವಾಮಿ ಮತ್ತು ಸ್ವರ್ಣಾಂಭ ದೇವಿಗೆ ಈ ದೇವಾಲಯಗಳಿಗೆ ವಿಶೇಷ ಅಲಂಕಾರ ದೇವರ ವಿಗ್ರಹಗಳ ವಿಶೇಷ ಪೂಜೆ ಅಭಿಷೇಕಗಳನ್ನು ನಡೆಸಲಾಗುತ್ತದೆ, ಸಹಜವಾಗಿ ಶ್ರೀ ಗಂಗಾಧರೇಶ್ವಸ್ವಾಮಿ ದೇವಾಲಯಕ್ಕೆ ಹೂವು ಮತ್ತು ಇತರ ಅಲಂಕಾರಿಕ ವಸ್ತುಗಳಿಂದ ಶೃಂಗಾರ ಮಾಡಿ ವಿಶೇಷವಾಗಿ ಭಕ್ತರಿಗೆ ಆಕರ್ಷಣೆಯನ್ನು ತರುತ್ತಾರೆ, ಶಿವರಾತ್ರಿ ಹಬ್ಬದಂದು ಉಪವಾಸದ ಮೂಲಕ ಭಕ್ತರನ್ನು ಶಿವಗಂಗೆಯ ಬೆಟ್ಟದ ಮೇಲಿನ ಶ್ರೀ ಗಂಗಾಧರೇಶ್ವರ ಸ್ವಾಮಿ ಮತ್ತು ಸ್ವರ್ಣಾಂಬದೇವಿಯ ದೇವಲಯಕ್ಕೆ ಬೇಟಿ ನೀಡಿ ಪೂಜೆ ಸಲ್ಲಿಸಿ ಇಷ್ಟಾರ್ಥ ನೆರವೇರಿಸುವಂತೆ ಪ್ರಾರ್ಥನೆ ಸಲ್ಲಿಸುತ್ತಾರೆ. ಆ ನಂತರ ವಿಶೇಷ ಅಭಿಷೇಕ ಅಲಂಕಾರ ಮಾಡುವುದರೊಂದಿಗೆ ಪೂಜಾ ಕಾರ್ಯಕ್ರಮಗಳನ್ನು ಭಕ್ತರ ಅಭಿಲಾಷೆಯಂತೆ ಸ್ವಾಮಿಗೆ ರುದ್ರಾಭಿಷೇಕ, ಅರ್ಚನೆ, ಬಿಲ್ವಾರ್ಚನೆ ಪೂಜೆಯನ್ನು ನೆರವೇರಿಸುತ್ತಾರೆ. ಪೂಜೆಯ ನಂತರ ಭಕ್ತರಿಗೆ ಪ್ರಸಾದ ರೂಪದಲ್ಲಿ ಹಣ್ಣಿನ ರಸಗಳು, ಹೂ ಪತ್ರೆಯನ್ನು, ಶಲ್ಯಗಳನ್ನು, ವಿತರಿಸುತ್ತೇವೆ ಎಂದು ಅರ್ಚಕ ರಾಜು ದೀಕ್ಷಿತ್ ಇಲ್ಲಿನ ಆಚರಣೆಗಳ ಬಗ್ಗೆ ತಿಳೀಸುತ್ತಾರೆ,

ಇಲ್ಲಿನ ತೀರ್ಥ ಸ್ಥಳಗಳಿಗೆ ಶಿವರಾತ್ರಿಯ ಹಬ್ಬದ ದಿವಸ ಸಾಕಷ್ಟು ಮಂದಿ ಉಪವಾಸದ ಮೂಲಕ ಜಾಗರಣೆ ಮಾಡಿ ನಂತರ ದೇವಾಲಯದಲ್ಲಿ ಪೂಜೆ ಸಲ್ಲಿಸಿ ಉಪವಾಸವನ್ನು ಅಂತ್ಯಗೊಳಿಸುವ ಸಾಂಪ್ರದಾಯವು ಇರುತ್ತದೆ.

## ತಬ್ಬುಲಿಂಗೇಶ್ವರ ಸ್ವಾಮಿಗೆ ಸಂಬಂಧಪಟ್ಟಂತಹ ಆಚರಣೆಗಳು

ದೇವನಹಳ್ಳಿ ತಾಲ್ಲೂಕು ಚೌಡಪ್ಪನಹಳ್ಳಿ ಗ್ರಾಮದ ದಕ್ಷಿಣ ಕಾಶಿ ಎಂದು ಹೆಸರು ಪಡೆದಿರುವ ತಬ್ಬು ಲಿಂಗೇಶ್ವರಸ್ವಾಮಿ ದೇವಾಲಯದಲ್ಲಿ ಶಿವರಾತ್ರಿಯ ಹಬ್ಬದ ದಿನ ಗಣಪತಿ ಹೋಮ, ರುದ್ರಾಭಿಷೇಕ, ೧೦೮ ಬಿಲ್ವಾರ್ಚನೆ, ಕುಂಕುಮಾರ್ಚನೆ, ಯಜ್ಞಗಳು, ಮತ್ತು ಪೌರಾಣಿಕ ನಾಟಕವನ್ನು ನಡೆಸುತ್ತಾರೆ, ದೇವಾಲಯಕ್ಕೆ ಗಂಗವಾರ, ಸುತ್ತಮುತ್ತಲಿನ ಗ್ರಾಮಸ್ಥರು ತಬ್ಬುಲಿಂಗೇಶ್ವರ ದೇವಾಲಯದಲ್ಲಿರುವ ವೈದ್ಯನಾಥೇಶ್ವರ, ಮಲ್ಲಿಕಾರ್ಜುನ, ಗಂಗಾಧರೇಶ್ವರ, ಸೋಮೇಶ್ವರ, ಮಂಜುನಾಥೇಶ್ವರ, ಸೇರಿದಂತೆ ೯ ದೇವರುಗಳಿಗೆ ಪ್ರತಿ ಶಿವರಾತ್ರಿ ಹಾಗೂ ಕಾರ್ತಿಕ ಮಾಸದಲ್ಲಿ ವಿಶೇಷ ಪೂಜೆ ಸಲ್ಲಿಸುತ್ತಾರೆ,

## ವಾಗಟದ ಚೌಡೇಶ್ವರಿ ದೇವಿಗೆ ಸಂಬಂದಪಟ್ಟ ಆಚರಣೆಗಳು

ಉತ್ಸವದ ಆಚರಣೆಯನ್ನು ಸಂಭ್ರಮದಿಂದ ನಡೆಸಿದ ಕಾರಣಕ್ಕೆ ಪರಸ್ಪರಓಕುಳಿ ನೀರನ್ನು ಎರಚಾಡಿ ಸಂತಸದಿಂದ ನಡೆಸುವ ಕಾರ್ಯಕ್ರಮವೇ ವಸಂತೋತ್ಸವ, ಅನಂತ 'ಬ್ರಾಹ್ಮಣ ಸಂತರ್ಪಣೆ' ನಡೆಯುತ್ತದೆ. ರಾತ್ರಿ 'ಪೂಲಂಗಿ ಸೇವೆ' ನಡೆಸಲಾಗುತ್ತದೆ. ಇಲ್ಲಿ ನಾಲ್ಕು ಬಗೆಯ ಹೂಗಳಿಂದ ದೇವರನ್ನು ಅಲಂಕರಿಸಲಾಗುತ್ತದೆ. ಮಲ್ಲಿಗೆ, ಕನಕಾಂಬರ, ಸಗಂಧರಾಜ, ಕಾಕಡ ಹೂವಿನ ಜೊತೆಗೆ ಹಾಗೂ ತುಲಸಿಗಳಿಂದ ದೇವರನ್ನು ಅಲಂಕರಿಸುತ್ತಾರೆ.

ಅನಂತರ ಶ್ರೀವರದಾರಾಜಸ್ವಾಮಿಯವರ ಮುತ್ತಿನ ಪಲ್ಲಕ್ಕಿ ಉತ್ಸವ ನಡೆಯುತ್ತದೆ. ಅಲ್ಲಿನ ಸ್ಥಳೀಯ ಮುಖ್ಯಸ್ಥ ತ್ಯಾಗರಾಜರ ನೇತೃತ್ವದಲ್ಲಿ ಈ ಉತ್ಸವ ನೆರವೇರುತ್ತದೆ. ಇದರೊಂದಿಗೆ ಬನಹಳ್ಳಿ, ದ್ಯಾವಸಂದ್ರ, ಕಣ್ಣೂರಹಳ್ಳಿ, ದಾಸರಹಳ್ಳಿ, ಪರಮನಹಳ್ಳಿ, ದೇಶಟ್ಟಹಳ್ಳಿ, ಕನ್ನಮಂಗಲ, ನಡುವತ್ತಿ, ಹುಣಸೆಹಳ್ಳಿ ಮುಂತಾದ ಸ್ಥಳಗಳಿಂದ ದೇವರ ಪಲ್ಲಕ್ಕಿಗಳು ಮೆರವಣಿಗೆಯಲ್ಲಿ ಬಂದು ಊರು ಪ್ರಮುಖ ಸ್ಥಳದಲ್ಲಿ ಸೇರುತ್ತದೆ. ಚೌಡೇಶ್ವರಿ ಅಮ್ಮನವರ ಪಲ್ಲಕ್ಕಿ, ಅಂಜನೇಯಸ್ವಾಮಿ ಪಲ್ಲಕ್ಕಿ, ರಾಮದೇವರ ಪಲ್ಲಕ್ಕಿ, ಮಾರಮ್ಮದೇವರ ಪಲ್ಲಕ್ಕಿ, ಯಲ್ಲಮ್ಮನ ಪಲ್ಲಕ್ಕಿ, ಮುನೇಶ್ವರ ಸ್ವಾಮಿಯ ಪಲ್ಲಕ್ಕಿ, ಶನಿಮಹಾತ್ಮಸ್ವಾಮಿ ಪಲ್ಲಕ್ಕಿ, ಕೈವಾರ ನಾರಾಯಣ ತಾತಯ್ಯ ಪಲ್ಲಕ್ಕಿ, ಲಕ್ಷ್ಮಿನರಸಿಂಹಸ್ವಾಮಿ ಪಲ್ಲಕ್ಕಿ, ಮಾಂಕಾಳಮ್ಮ ಪಲ್ಲಕ್ಕಿ, ರಾಮ, ಸೀತ, ಲಕ್ಷ್ಮಣ, ಹನುಮದೇವರ ಪಲ್ಲಕ್ಕಿಗಳು ಊರು ಪ್ರಮುಖ ಬೀದಿಗಳಲ್ಲಿ ಸಂಚರಿಸುತ್ತವೆ. ಊರ ಭಕ್ತರು ಈ ಉತ್ಸವಮೂರ್ತಿಗಳಿಗೆ ಪೂಜೆ ಸಲ್ಲಿಸುತ್ತಾರೆ.

## ೪.೨ ನಂಬಿಕೆಗಳು

ಜನಪದ ನಂಬಿಕೆಗಳು ಪರಂಪರಾನುಗತವಾಗಿ ಅಂಗೀಕೃತವಾದ ಒಂದು ಪರಿಕಲ್ಪನೆ, ಹೀಗೆ ಅಂಗೀಕೃತವಾಗುವಲ್ಲಿ ಪುನಾವರ್ತನೆ ಹಾಗೂ ಸಾಮೂಹಿಕ ನಿರೀಕ್ಷಣೆಗಳು ಮುಖ್ಯವಾಗುತ್ತವೆ. "ನಂಬಿಕೆಗಳು ಜನಪದರ ಜೀವನಾನುಭವದ ಉತ್ಪನ್ನಗಳು, ಹೀಗಾಗಿ ಮಾನವ ಬದುಕಿಗೂ ನಂಬಿಕೆಗೂ ಬೇರ್ಪಡಿಸಲಾಗದ ಸಂಬಂಧ, ಅದು ಸೂಚನೆ, ನಿಯಮ, ವಿಧಿ, ನಿಷೇಧ, ನಿರ್ದೇಶನ, ಆಗ್ರಹ, ಆದೇಶ ಮತ್ತು ಆಜ್ಞೆಗಳ ರೂಪದಲ್ಲಿ ನಿತ್ಯ ಬದುಕಿನೊಂದಿಗೆ ಸಂಬಂಧವನ್ನು ಕಂಡುಕೊಂಡಿದೆ. ಜನಪದರ ಕೆಲಸ ಆಲೋಚನೆ, ರೂಢಿ, ಜೀವನಕ್ರಮ, ಸಂಪ್ರದಾಯ ಆಚರಣೆಗಳೆಲ್ಲವೂ ಮೂಲಭೂತವಾಗಿ ನಂಬಿಕೆಗಳಿಂದ ಪ್ರೇರಿತವಾದವು. ನಂಬಿಕೆ ಸಂಪ್ರದಾಯ, ಆಚರಣೆಗಳೊಂದಿಗೆ ಅಂತರಸಂಬಂಧವನ್ನು

ಹೊಂದಿದ್ದು, ಆ ಮೂಲಕ ಕ್ರಿಯಾರೂಪವನ್ನು ತಾಳುತ್ತದೆ."[೧೪] ಅದು ಜನಪದ ಪ್ರಕಾರಗಳಾದ ಗಾದೆ, ಜನಪದ ವೈದ್ಯ, ಜನಪದ ಕತೆ, ಜನಪದ ಐತಿಹ್ಯ, ಜನಪದ ಪುರಾಣ, ಜನಪದ ಮಂತ್ರವಿಧ್ಯೆ, ಜನಪದ ಧರ್ಮ ಇವುಗಳೊಂದಿಗೆ ಒಳಸಂಬಂಧವನ್ನು ಹೊಂದಿದ್ದು ಸಂಕೀರ್ಣ ಸ್ವರೂಪದ್ದಾಗಿದೆ.

ಮೂಲತಃ ಕಾಲ್ಪನಿಕ ಆಲೋಚೆಯೊಂದು ವೈಯಕ್ತಿಕ ನೆಲೆಯಲ್ಲಿ ಹುಟ್ಟಿಕೊಂಡು ಸಮೂಹದಲ್ಲಿ ಸಾಮೂಹಿಕ ಮಾನ್ಯತೆಯನ್ನು ಪಡೆದುಕೊಂಡಾಗ ಅದು ನಂಬಿಕೆಯಾಗುತ್ತದೆ. "ಈ ನಂಬಿಕೆ ಹಿಡಿಯಾಗಿ ಒಂದು ಸಮುದಾಯದ ಸಾಂಸ್ಕೃತಿಕ ಬದುಕನ್ನು ಕಟ್ಟಿಕೊಡುವಲ್ಲಿ ಸಹಾಯವಾಗಿದೆ. ನಂಬಿಕೆ, ಸಂಪ್ರದಾಯ, ಆಚರಣೆಗಳು ಪರಸ್ಪರ ಸೋದರ ಸಂಬಂಧಿಯಾದವುಗಳು."[೧೫] ಇವುಗಳ ಸಂಬಂಧವನ್ನು ಯಾವುದು, ಏನು ಮತ್ತು ಹೇಗೆ ಎನ್ನುವ ನೆಲೆಯಲ್ಲಿಟ್ಟು ವಿಶ್ಲೇಷಿಸಬಹುದು. ಸಂಪ್ರದಾಯದ ಬೀಜರೂಪದಲ್ಲಿ ಒಂದು ನಂಬಿಕೆ ಇದ್ದೇ ಇರುತ್ತದೆ. ಅಂದರೆ ಸಂಪ್ರದಾಯಗಳೆಲ್ಲವೂ ಬಹುತೇಕ ನಂಬಿಕೆಗಳಾಗಿರುತ್ತವೆ. ಒಟ್ಟಿನಲ್ಲಿ ನಂಬಿಕೆ ಬದುಕಿನ ಎಲ್ಲಾ ಮಗ್ಗುಲಲ್ಲಿ ಹಾಗೂ ಎಲ್ಲಾ ಚಟುವಟಿಕೆಗಳಲ್ಲಿ ಇರುವಂತಹುದಾಗಿದೆ.

ಇದನ್ನು ವರ್ಗೀಕರಿಸಿದ ಮಾತ್ರಕ್ಕೆ ಕೇವಲ ಆ ವರ್ಗೀಕರಣಕ್ಕಷ್ಟೇ ನಂಬಿಕೆಗಳು ಸೀಮಿತವೆಂದಲ್ಲ, ಅಧ್ಯಯನ ದೃಷ್ಟಿಯಿಂದ ಮಾತ್ರ ಈ ವರ್ಗೀಕರಣ ಒಪ್ಪುವಂತಹದೇಹೊರತು ಇದನ್ನು ಮೀರಿ ಬೇರೆ ಬಗೆಯ ನಂಬಿಕೆಗಳು ಇಲ್ಲವೆಂದಾಗಲೀ ಅಲ್ಲ. ಹೀಗೆ ವರ್ಗೀಕರಿಸಿ ನೋಡುವುದರಿಂದ ಒಬ್ಬ ವ್ಯಕ್ತಿ, ಒಂದು ಸ್ಥಳ, ಒಂದು ಘಟನೆಗೆ ಮಾತ್ರವಷ್ಟೇ ಈ ನಂಬಿಕೆಗಳು ಸೀಮಿತವಾಗಿ ಇಲ್ಲವೆಂದೂ, ಇದು ಸಾರ್ವಕಾಲಿಕವಾಗಿ ಅಂದರೆ ಎಲ್ಲಾ ಕಾಲಕ್ಕೂ ಇದ್ದು, ಮೌಖಿಕವಾಗಿ ಒಬ್ಬರಿಂದ ಒಬ್ಬರಿಗೆ ಹರಡುವ ಮೂಲಕ ಜೀವಂತವಾಗಿದೆ ಆಚರಣೆಗಳ ಅರ್ಥದಲ್ಲಿ ಇಂದಿಗೂ ನಂಬಿಕೆಗಳು ಉಳಿದಿದ್ದು, ಇಂದಿನ ಪೀಳಿಗೆ ಒಂದು ಪರಂಪರೆಯನ್ನು ಕಟ್ಟಿಕೊಡುವ ಕೆಲಸವನ್ನು ಇವು ನಿರ್ವಹಿಸುತ್ತಿವೆ. ಆ ಮೂಲಕ ಮಾನವನ ಬದುಕು ಸಾಫಲ್ಯದ ಕಡೆಗೆ ಹೋಗಲು ನೆರವಾಗುತ್ತಿವೆ.

ಆರ್.ಎಸ್.ಬಗ್ಸ್‌ರವರು ಜಾನಪದದ ವರ್ಗೀಕರಣದಲ್ಲಿ ನಂಬಿಕೆಗಳನ್ನು ವೈಜ್ಞಾನಿಕ ಬಗೆಯಾಗಿ ಅರ್ಥೈಸಿದ್ದಾರೆ. ಅವರು ನಂಬಿಕೆಗಳು ಪುನರಾವೃತವಾಗುವ ಸಾಮೂಹಿಕ ವೀಕ್ಷಣೆಯ ಫಲವಾಗಿ ಮಾಡುವ ಕಾರ್ಯಕಾರಣ ಸಂಬಂಧ ಉಳ್ಳದ್ದಾಗಿರುವ 'ಸಾಂಪ್ರದಾಯಿಕ ಭಾವನೆ' ಎಂದಿದ್ದಾರೆ.

ಮರಿಯಾ ಲೀಚ್ ಅವರು ಪುನರಾವೃತವಾಗುವ, ಸಾಮೂಹಿಕ ವೀಕ್ಷಣೆಯ ಫಲವಾಗಿ ಮಾಡುವ ಭೂತ, ವರ್ತಮಾನ, ಭವಿಷ್ಯತ್ತುಗಳೊಂದಿಗೆ ಕಾರ್ಯ ಕಾರಣ

ಸಂಬಂಧ ಹೊಂದಿರುವ ಸಾಂಪ್ರದಾಯಿಕ ಸ್ವೀಕೃತ ಪರಿಕಲ್ಪನೆಯೇ ಜನಪದ ನಂಬಿಕೆ ಎಂಬುದಾಗಿ ತಮ್ಮ ನಿಘಂಟಿನಲ್ಲಿ ಹೇಳಿದ್ದಾರೆ.

'ಪ್ರೊ.ದೇ.ಜವರೇಗೌಡರವರು ನಂಬಿಕೆಯನ್ನು ಕುರಿತು ದೇಶ ಕಾಲಗಳ ಹಿನ್ನೆಲೆಯಲ್ಲಿ ಪರಂಪರಾಗತವಾದ ಜ್ಞಾನ, ದೀರ್ಘಾನುಭವ, ಕಾಲ್ಪನಿಕ ಆಲೋಚನೆ ಹಾಗೂ ಅತೀಂದ್ರಿಯ ವ್ಯಾಪಾರದ ಫಲವಾಗಿ ಮೂಡಿದ ಶ್ರದ್ಧೆಯೇ ನಂಬಿಕೆ' ಎಂದಿದ್ದಾರೆ. ನಂಬಿಕೆ ಮಾನವ ಜೀವನದ ಸರ್ವಕ್ಷೇತ್ರಗಳಲ್ಲಿಯೂ ವ್ಯಾಪಿಸಿಕೊಂಡಿದೆ. ಅದೇ ಅವನ ಜೀವನವನ್ನು ರೂಪಿಸುತ್ತಿದೆ. ಅದೇ ಸಂಸ್ಕೃತಿಯ ತಿರುಳು ಎನ್ನಬೇಕಾಗುತ್ತದೆ, ಜಗತ್ತಿನ ಶ್ರೇಷ್ಠ ವಿಜ್ಞಾನಿಗಳು ಸಹ ದಿನ ಬೆಳಗಾದರೆ ನಂಬಿಕೆಗಳಿಗೆ ಆತುಕೊಂಡಿರುತ್ತಾರೆ.

"ಪ್ರಾಕೃತಿಕ ರಹಸ್ಯವನ್ನು ಭೇದಿಸುವಲ್ಲಿ ಆದಿಮಾನವನ ವಿಫಲತೆ, ಹುಟ್ಟು, ಬದುಕು ಸಾವಿನ ನಿಗೂಢತೆಯನ್ನು ಅರ್ಥೈಸಲಾಗದ ಆತಂಕ ಜಾತಿ ಮತ್ತು ಧರ್ಮ ತಮ್ಮ ಆಸ್ತಿತ್ವಕ್ಕಾಗಿ ನಡೆಸಿದಹೋರಾಟ ಈ ಹಿನ್ನೆಲೆಯಲ್ಲಿ ನಂಬಿಕೆಗಳು ಹುಟ್ಟಿಕೊಳ್ಳುತ್ತವೆ."[೧೬] ಹೀಗೆ ಆದ ಜನಪದ ನಂಬಿಕೆಗಳ ಉಗಮವನ್ನು ಮೂರು ವಿಧಗವಾಗಿ ಗುರುತಿಸಿ ಅಧ್ಯಯನ ನಡೆಸಬಹುದು.

೧. ಧಾರ್ಮಿಕ ನಂಬಿಕೆಗಳು

೨. ಸಾಂಸ್ಕೃತಿಕ ನಂಬಿಕೆಗಳು

೩. ವೈಯಕ್ತಿಕ ನಂಬಿಕೆಗಳು

ನಂಬಿಕೆಗಳ ವರ್ಗೀಕರಣದ ಬಗ್ಗೆ ಖಚಿತವಾದ ಒಂದು ಅಭಿಪ್ರಾಯವಿಲ್ಲ. ಅವುಗಳ ಸಂಕೀರ್ಣ ಸ್ವರೂಪದಿಂದಾಗಿ ವಿಂಗಡಣೆ ತುಂಬ ತೊಡಕಾಗಿದೆ. ನಂಬಿಕೆಗಳ ಸ್ವರೂಪ ಹಾಗೂ ಕಾರ್ಯ ಅನುಸರಿಸಿ ಹಲವು ಬಗೆಯ ವರ್ಗೀಕರಣ ರೂಡಿಯಲ್ಲಿವೆ.

ಆರ್.ಎಸ್.ಬಾಗ್ಸ್ ಅವರು ಇವುಗಳನ್ನು ಆರು ಉಪವಿಭಾಗಗಳಲ್ಲಿ ವಿವರಿಸಿದರೆ, ವೇಲ್ಯಾಂಡ್ ರವರು ಏಳು ಬಗೆಗಳಲ್ಲಿ ಇದನ್ನು ವಿಭಾಗಿಸಿದ್ದಾರೆ.

ಅರ್ ಎಸ್ ಬಾಗ್ಸ್‌ರವರ ಪ್ರಕಾರದ ವರ್ಗೀಕರಣ ಹೀಗಿದೆ.

೧. ಪುರಾಣ

೨. ಐತಿಹ್ಯ

೩. ಪದ್ಧತಿ

೪. ಮಾಂತ್ರಿಕತೆ

೫. ವೈದ್ಯ

೬. ಕಾಲಜ್ಞಾನ

ವೇಲ್ಯಾಂಡ್ ಪ್ರಕಾರದ ವರ್ಗೀಕರಣ ಈ ಕೆಳಕಂಡಂತಿದೆ.

೧. ಮನುಷ್ಯ ಶರೀರ ಹಾಗೂ ವೈದ್ಯಕ್ಕೆ ಸಂಬಂಧಿಸಿದವು

೨. ಜೀವನ ಚಕ್ರಕ್ಕೆ ಸಂಬಂಧಿಸಿದವು

೩. ಆರ್ಥಿಕ ಮತ್ತು ಸಾಮಾಜಿಕ ಸಂಬಂಧಗಳು

೪. ಮಾಟ ಮತ್ತು ಮಂತ್ರವಿದ್ಯೆ

೫. ಭೂತಪ್ರೇತ, ಸಾವು ಮುಂತಾದವುಗಳಿಗೆ ಸಂಬಂಧಿಸಿದವು

೬. ಸಂಖ್ಯೆಗಳು ಮತ್ತು ಖಗೋಳ ಸಂಗತಿಗಳು

೭. ಬೇಸಾಯಕ್ಕೆ ಸಂಬಂಧಿಸಿದವು.

ಇದರೊಳಗೆ ಹವಾಮಾನ, ಪ್ರಾಣಿಸಾಕಣೆ, ಕೃಷಿ, ಬೇಟೆ ಇತ್ಯಾದಿ ಒಳಗೊಳ್ಳುತ್ತದೆ. ಈ ಮೇಲ್ಕಂಡ ವರ್ಗೀಕರಣಕ್ಕೆ ಸೇರದ ಅನೇಕ ನಂಬಿಕೆಗಳಿವೆ. ಒಂದರ ಒಳಗೆ ಇನ್ನೊಂದು ಒಳಗಾದವು ಇವೆ. ಮೈಸೂರು ವಿಶ್ವವಿದ್ಯಾಲಯದ ಕನ್ನಡ ವಿಶ್ವಕೋಶದ ವಿಭಜನೆ ಈ ಕೆಳಕಂಡಂತಿದೆ

೧. ಅತಿಮಾನುಷ

೨. ಮಾನುಷ

೩. ಪ್ರಾಣಿ

೪. ಪ್ರಕೃತಿ

೫. ಕೌಟುಂಬಿಕ

೬. ಸಂಕೀರ್ಣ

ಈ ನಿಟ್ಟಿನಲ್ಲಿ 'ದೇ.ಜ.ಗೌ.' ದಕ್ಷಿಣ ಭಾರತದ ನಂಬಿಕೆಗಳನ್ನು ಲಕ್ಷ್ಯದಲ್ಲಿರಿಸಿಕೊಂಡು ನಂಬಿಕೆಗಳನ್ನು ಹತ್ತು ಗುಂಪುಗಳಾಗಿ ವಿಂಗಡಿಸಿದ್ದು ಹೆಚ್ಚು ಸೂಕ್ತವಾಗಿದೆ.

೧. ಧಾರ್ಮಿಕ ನಂಬಿಕೆಗಳು

೨. ಐತಿಹ್ಯಾತ್ಮಕ ನಂಬಿಕೆಗಳು

೩. ಗೃಹ ನಂಬಿಕೆಗಳು

೪. ವೈದ್ಯಕೀಯ ನಂಬಿಕೆಗಳು

೫. ಔದ್ಯೋಗಿಕ ನಂಬಿಕೆಗಳು

೬. ನೈಸರ್ಗಿಕ ನಂಬಿಕೆಗಳು

೭. ಪ್ರಾಣಿ ನಂಬಿಕೆಗಳು

೮. ಮಂತ್ರ ಸಂಬಂಧಿ ನಂಬಿಕೆಗಳು

೯. ಜ್ಯೋತಿಷ್ಯಾತ್ಮಕ ನಂಬಿಕೆಗಳು

೧೦.ಸಂಕೀರ್ಣ ನಂಬಿಕೆಗಳು

**ಧರ್ಮೇಶ್ವರಸ್ವಾಮಿ ದೇವಾಲಯಕ್ಕೆ ಸಂಬಂಧಪಟ್ಟಂತಹ ನಂಬಿಕೆಗಳು**

**ವಿವಾಹ ಸಂಕಲ್ಪ:** ಮದುವೆಯಾಗದೇ ಇರುವವರು ಇಲ್ಲಿ ಬಂದು ಸಂಕಲ್ಪವನ್ನು ಮಾಡಿಕೊಂಡು ಹೋದವರಿಗೆ ಶೀಘ್ರವಾಗಿ ವಧು–ವರನು ಸಿಕ್ಕಿ ಬೇಗನೆ ವಿವಾಹವಾಗಿ ದಾಪಂತ್ಯ ಜೀವನಕ್ಕೆ ಕಾಲಿಟ್ಟ ಉದಾಹರಣೆಗಳು ಕೊಡುತ್ತಾರೆ ದೇವಾಲಯದಲ್ಲಿಯೇ ಮದುವೆಯಾಗಿ ಹೋಗುವ ಸಂಖ್ಯೆ ಹೆಚ್ಚು ಸಂತಾನ ಪ್ರಾಪ್ತಿ ಖಾಯಿಲೆಗಳ ನಿವಾರಣೆ, ಬರಗಾಲ ನಿವಾರಣೆ ಕುಂಭಾಬಿಷೇಕವು ನಡೆಯುತ್ತದೆ.

**ಘಾಟಿ ಶ್ರೀ ಸುಬ್ರಮಣ್ಯಸ್ವಾಮಿಗೆ ಸಂಬಂದ ಪಟ್ಟಂತಹ ನಂಬಿಕೆಗಳು**

ಘಾಟಿ ಸುಬ್ರಮಣ್ಯಸ್ವಾಮಿ ಕ್ಷೇತ್ರವು ಬಯಲು ಸೀಮೆಯ ಕುಕ್ಕೆಯಂತೆ ಪ್ರಸಿದ್ದಿ ಪಡೆದ ಯಾತ್ರಾ ಸ್ಥಳವಾಗಿದ್ದು, ಕುಕ್ಕೆ ಕ್ಷೇತ್ರದಲ್ಲಿ ನಡೆಯುಂತಹ ನಾಗಪ್ರತಿಷ್ಠಾಪನೆಯಿಂದ ನಾಗದೋಷವನ್ನು ಕಳೆದುಕೊಂಡು, ಅದೇ ರೀತಿಯಲ್ಲಿ ಸರ್ಪ ಸಂಸ್ಕಾರ, ಸರ್ಪದೋಷ, ನಿವಾರಣೆ ಆಚರಣೆಗಳು ಶ್ರೀ ಘಾಟಿ ಸುಬ್ರಮಣ್ಯಸ್ವಾಮಿ ಕ್ಷೇತ್ರದಲ್ಲಿ ನಡೆಯುತ್ತದೆ, ಈ ಆಚರಣೆಗಳಿಂದ ನಾಗದೋಷ ಮುಕ್ತವನ್ನು ಪಡೆದುಕೊಳ್ಳುತ್ತೇವೆಂಬ ನಂಬಿಕೆಗಳಿದ್ದು, ಆ ನಂತರ ವಿವಾಹ ಪ್ರಾಪ್ತಿ, ಸಂತಾನಪ್ರಾಪತಿ, ಚರ್ಮರೋಗ ಕಾಯಿಲೆಗಳು, ಇನ್ನು ಸಣ್ಣಪುಟ್ಟ ಕಾಯಿಲೆಗಳು ನಿವಾರಣೆ ಆಗುತ್ತದೆ ಎಂಬ ನಂಬಿಕೆಗಳು,

ರೈತರು ಜಾತ್ರಾ ಸಮಯಕ್ಕೆ ಸುಬ್ರಮಣ್ಯ ಸ್ವಾಮಿ ದೇವಾಲಯದಲ್ಲಿ ಪೂಜೆ ಸಲ್ಲಿಸಿ ಹೂವು ತೀರ್ಥ ತೆಗೆದುಕೊಂಡು ಹೋಗೆ ಮನೆಗಳಲ್ಲಿನ ದನಗಳ ಕೊಟ್ಟಿಗೆಯಲ್ಲಿ ಹಾಕಿದರೆ ತಮ್ಮ ರಾಸುಗಳಿಗೆ ಯಾವುದೇ ರೋಗ ರುಜುನುಗಳು ಬರುವುದಿಲ್ಲ ಅನ್ನುವಂತಹ ನಂಬಿಕೆಗಳು ಇವತ್ತಿಗೂ ನಡೆದುಕೊಂಡು ಬಂದಿದೆ,

**ಹುಲುಕುಡಿ ಬೆಟ್ಟಕ್ಕೆ ಸಂಬಂದ್ದ ಪಟ್ಟಂತಹ ನಂಬಿಕೆಗಳು**

ಹುಲುಕುಡಿ ಬೆಟ್ಟದಮೇಲಿರುವಂತಹ ಹುಲ್ಲನ್ನು ತಿಂದರೆ ರಾಸುಗಳಿಗೆ ದನಕರುಗಳಿಗೆ ಯಾವುದೇ ರೀತಿಯಾದಂತಹ ರೋಗ ರುಜುನುಗಳು ಬರುವುದಿಲ್ಲವೆನ್ನುವಂತಹ ನಂಬಿಕೆಗಳು

ಇವೆ, ಬ್ರಹ್ಮರಥೋತ್ಸವ ದಿನ ಬೆಟ್ಟದ ಸಮೀಪದ ಗ್ರಾಮಗಳಲ್ಲಿರುವ ದೇವಾಲಯಗಳಿಗೆ ಪ್ರತಿ ವರ್ಷ ಹುಲುಕಡ್ಡಿ ಬೆಟ್ಟದ ಗಿರಿ ಪ್ರದಕ್ಷಿಣೆಯನ್ನು ಮಾಡಿದಾಗ ವೀರಭದ್ರಸ್ವಾಮಿ, ಪ್ರಸನ್ನ ಭದ್ರಕಾಳಮ್ಮ, ಬ್ರಹ್ಮರಥೋತ್ಸವ ದಿನ ಸಾವಿರಾರು ಜನರು ಬಾಗವಹಿಸಿ ಪ್ರತಿ ಆಷಾಡ ಮಾಸದಲ್ಲಿ ಗಿರಿ ಪ್ರದಕ್ಷಿಣೆ ಮಾಡಿದರೆ ಬೆಟ್ಟದ ತಪ್ಪಲಿನ ವೀರಗಣಪತಿ ದೇವಾಲಯದಲ್ಲಿ ಪೂಜೆ ಸಲ್ಲಿಸುವ ಮುಖಾಂತರ ಗಿರಿ ಪ್ರದಕ್ಷಿಣೆ ಪ್ರಾರಂಭಮಾಡಿ ಹಳೇಕೋಟೆ, ತಂಬೇನಹಳ್ಳಿ, ಬೊಮ್ಮನಹಳ್ಳಿ, ಮಾಡೇಶ್ವರ ಮಾರ್ಗವಾಗಿ ಬಂದು ಹುಲುಕುಡಿ ಪ್ರವೇಶದ್ವಾರದ ಬಳಿಗೆ ಬಂದವರಿಗೆ ಮಾರ್ಗದ ಉದ್ದಕ್ಕು ಪಾನಕ, ಮಜ್ಜಿಗೆ, ಅನ್ನಸಂತರ್ಪಣೆ, ಮಾಡಿದರೆ ತಾವು ಮಾಡಿದ ಪಾಪಗಳನ್ನು ಕಳೆದುಕೊಳ್ಳುತ್ತೇವೆ ಎಂಬ ನಂಬಿಕೆಗಳು ಇದೆ, ಆನಂತರ ಹುಲುಕುಡಿ ಬೆಟ್ಟದ ಮೇಲೆ ಶ್ರೀ ವೀರಭದ್ರೇಶ್ವರಸ್ವಾಮಿ ನೆಲಸಿರುವುದರಿಂದ ಆಷಾಡ ಮಾಸದಲ್ಲಿ ಗಿರಿ ಪ್ರದಕ್ಷಿಣೆ ಮಡಿದರೆ ಕೈಲಾಸ ಪರ್ವತವನ್ನೇ ಸುತ್ತಿದಂತೆ ಎಂಬ ನಂಬಿಕೆ ಇದೆ.

### ೪.೩ ಸಂಪ್ರದಾಯಗಳು

ಸಂಪ್ರದಾಯ ಎಂದರೇ ಕಾಲಾನುಕಾಲವಾದ ಬದಲಾಗದೆ ಉಳಿದು ಬಂದ ರೂಡಿ ಎಂದರ್ಥ, ಪದ್ದತಿ ರೂಡಿ ಸಂಪ್ರದಾಯ ಇವೆಲ್ಲ ಹೆಚ್ಚು ಕಡಿಮೆ ಒಂದೇ ಅರ್ಥ ಧನಿಸುವಂತಹ ಪದಗಳು ಇಂಗ್ಲೀಷ್‌ನ Convention ಎಂಬ ಪದಕ್ಕೆ ಸಂವಾದಯಾಗಿ, ಸಂಪ್ರದಾಯ ಎಂಬ ಪದವನ್ನು ಬಳಸಬಹುದು, ಪ್ರತಿಯೊಂದು ಸಂಸ್ಕೃತಿಯಲ್ಲಿ ತನ್ನದೆಯಾದ ವಿಶಿಷ್ಟವಾದ ಸಂಪ್ರದಾಯಗಳಿರುತ್ತವೆ.

ಉದಾ: ಹಿಂದೂ ಸಂಸ್ಕೃತಿಯ ಸಂಪ್ರದಾಯಗಳಲ್ಲಿ ಕುಂಕುಮ ಇಡುವುದು, ಹೂ ಮುಡುವುದು, ಬಳೆ ತೊಡುವುದು, ಇವು ಭಾರತೀಯರ ಸ್ತ್ರೀ ಸಮಪ್ರದಾಯಗಳೂ, ಅಯಾ ಪ್ರದೇಶ, ಆಯಾ ಪ್ರದೇಶ, ಸಂಕ್ಕೃತಿಗಳು ಗುಣವಾಗಿ ಜಾತಿ, ವ್ಯಕ್ತಿಗಳಿಮನುಗುಣವಾಗಿ ಗುರುತಿಸಬಹುದು.

ಸಂಪ್ರದಾಯಗಳು ಕಾಲ ಕಾಲಕ್ಕೆ ತಕ್ಕ ಹಾಗೆ ಬದಲಾವಣೆ ಹೊದತ್ತಲಿದ್ದು ಚಲನಾತ್ಮಕವಾಗಿರುತ್ತದೆ, ಈ ಸಂಪ್ರದಾಯಗಳ ಅಬ್ಯಾಸದಿಂದ ಆಯಾ ಸಂಸ್ಕೃತಿಯ ವೈಶಿಷ್ಟ್ಯಗಳನ್ನು ತಿಳಿದುಕೊಳ್ಳಲು ಹಾಗೆಯೇ ಮಾನವನ ಸಾಂಸ್ಕೃತಿಕ ವಿಕಾಸದ ಹಂತಗಳನ್ನು ಗುರುತಿಸುವುದಕ್ಕೆ ಸಂಪ್ರದಾಯಗಳು ಅತಿ ಮುಖ್ಯವಾಗಿದೆ.

## ಘಾಟಿ ಸುಬ್ರಮಣ್ಯಸ್ವಾಮಿಗೆ ಸಂಬಂದ ಪಟ್ಟಂತಂಹ ಸಾಂಪ್ರದಾಯಗಳು

ಘಾಟಿ ಶ್ರೀ ಸುಬ್ರಮಣ್ಯಸ್ವಾಮಿ ಸಂಬಂದಪಟ್ಟಂತಹ ಒಂದು ವಿಶೇಷ ಸಂಪ್ರದಾಯವೆಂದರೆ ಸುಬ್ರಮಣ್ಯಸ್ವಾಮಿ ದರ್ಶನವಾದರೆ ಹಿಂಬದಿಯಲ್ಲಿನ ಕನ್ನಡಿಯಲ್ಲಿ ಲಕ್ಷ್ಮಿನರಸಿಂಹಸ್ವಾಮಿಯ ದರ್ಶನವನ್ನು ಪಡೆಯಬೇಕೆಂಬ ಸಾಂಪ್ರದಾಯವಿದೆ, ಆ ಸಾಂಪ್ರದಾಯದಿಂದ ಏಕ ಕಾಲಕ್ಕೆ ತ್ರಿಮೂರ್ತಿಗಳ ದರ್ಶನ ಭಾಗ್ಯ ಭಕ್ತರಿಗೆ ಲಭಿಸುತ್ತದೆ, ಹಾಗಾಗಿಯೇ ಇಲ್ಲಿ ಪ್ರತಿ ವರ್ಷ ಪುಷ್ಯ ಶುದ್ಧ ಶಷ್ಠಿಯಂದು ಬ್ರಹ್ಮರಥೋತ್ಸವ ನಡೆಯಬೇಕೆಂಬ ಸಾಂಪ್ರದಾಯವು ಇದೆ, ಇಲ್ಲಿ ಭಕ್ತಾದಿಗಳು ಪ್ರತಿ ನಿತ್ಯ ಅನ್ನದಾನವು ನಡೆಯುವ ಸಂಪ್ರದಾಯ ಮತ್ತು ರಥೋತ್ಸವದ ಮೂರು ದಿನ ದೀಪಾರಾಧನೆಗಳು ನಡೆಯ ಬೇಕೆಂಬ ಸಂಪ್ರದಾಯವಿದೆ.

ಅದೇ ರೀತಿಯಲ್ಲಿ ರೈತ ಕುಟುಂಬಗಳು ಘಾಟಿ ಜಾತ್ರೆಯಲ್ಲಿ ತಮ್ಮ ರಾಸುಗಳನ್ನು ಹೂವುಗಳಿಂದ ಅಲಂಕರಿಸಿ ಮಂಗಳವಾದ್ಯಗಳೊಂದಿಗೆ ಶ್ರೀ,ಸುಬ್ರಮಣ್ಯಸ್ವಾಮಿ ದೇವಸ್ಥಾನದವರೆಗೂ ಮೆರವಣಿಗೆಯಲ್ಲಿ ತೆರಳಿ ಪೂಜೆ ಸಲ್ಲಿಸುವುದನ್ನು ಸಾಂಪ್ರದಾಯವಾಗಿ ನಡೆಸುಕೊಂಡು ಬರುತ್ತಿದ್ದಾರೆ.

## ಶಿವಗಂಗೆಗೆ ಸಂಬಂಧಪಟ್ಟಂತಂಹ ಸಂಪ್ರದಾಯಗಳು

ದಕ್ಷಿಣ ಕಾಶಿ ಶಿವಗಂಗೆಯಲ್ಲಿ ಸ್ವರ್ಣಾಂಬ ಹೊನ್ನಮ್ಮ ದೇವಿಯ ಜಾತ್ರಾ ಪ್ರಯುಕ್ತ ಎಡೆಹಳ್ಳಿ ಗಂಗಪ್ಪನ ವಂಶಸ್ಥರು ಹಾಗೂ ಸರ್ಕಾರದ ವತಿಯಿಂದ ಆಚರಿಸುವ ಎಡೆಹಳ್ಳಿ ವಾನವು, ನೆಲಮಂಗಳ ತಾಲ್ಲೂಕಿನಲ್ಲಿ ಪ್ರಸಿದ್ದವಾದ ಉತ್ಸವಗಳಲ್ಲಿ ಎಡೆಹಳ್ಳಿವಾನ ಒಂದಾಗಿದೆ, ಹೊನ್ನಾದೇವಿಯನ್ನು ಸಿಂಹವಾಹನದಲ್ಲಿ ಕುಳಿಸಿ ಅತಿ ವಿಶೇಷವಾಗಿ ಅಲಂಕರಿಸಿ ಮತ್ತು ಗಂಗಾಧರೇಶ್ವರ ಸ್ವಾಮಿಗೆ ಕುದುರೆ ವಾಹನವಾಗಿ ಮಾಡಿ ಚಿನ್ನಾಭರಣಗಳಿಂದ ಅಲಂಕರಿಸಿ ರಾತ್ರಿ ಪೂರ್ತಿ ಸಿಂಹ ವಾಹನ ಮತ್ತು ಕುದುರೆ ಉತ್ಸವವನ್ನು ಶಿವಗಂಗೆಯ ರಾಜ ಬೀದಿಯಲ್ಲಿ ತಮಟೆ ವಾದ್ಯಗಳ ಸಮೇತ ಎಡೆಹಳ್ಳಿ ಗಂಗಪ್ಪನವರ ಕುಟುಂಬದವರಿಂದ ರಥೋತ್ಸವಕ್ಕೆ ಚಾಲನೆ ನೀಡುವ ಸಂಪ್ರದಾಯವಿದೆ, ಈ ಸಂಪ್ರದಾಯದಲ್ಲಿ ವಿಶೇಷವಾಗಿ ರಸಮಂಜರಿ ಕಾರ್ಯಕ್ರಮ, ನಂತರ ಹೂವಿನ ಅಲಂಕಾರ ವಿದ್ಯುತ್ ಅಲಂಕಾರ, ಕೀಲು ಕುದುರೆ ನೃತ್ಯ ನಾದಸ್ವರ, ತಮಟ ವಾದ್ಯ, ವೀರಗಾಸೆಯಂತಹ ಜಾನಪದ ಕಲಾತಂಡಗಳೊಂದಿಗೆ ಇಡೀ ರಾತ್ರಿ ಉತ್ಸವವನ್ನು ಶಿವಗಂಗೆಯ ರಾಜ ಬೀದಿಗಳಲ್ಲಿ ಮೆರವಣಿಗೆ ಬಂದ ವೇಳೆಯಲ್ಲಿ ಸಂಪ್ರದಾಯದಂತೆ ನಿವಾಸಿಗಳು ದೇವರಿಗೆ ಪೂಜೆ ಸಲ್ಲಿಸಿ

ಭಕ್ತಿಯನ್ನು ಮೆರೆಯುತ್ತಾರೆ. ಇಡೀ ಭಕ್ತಾದಿಗಳಿಗೆ ರಾತ್ರಿ ಇಡೀ ಪ್ರಸಾದ ವ್ಯವಸ್ಥೆಯ್ನನು ಎಡೆಹಳ್ಳಿ ಗಂಗಪ್ಪನವರು ಶಿವಗಂಗೆಯ ಗ್ರಾಮಸ್ಥರು ನೀಡುವ ಸಂಪ್ರದಾಯವನ್ನು ಇಂದಿಗೂ ಮಾಡುತ್ತಾ ಬಂದಿದ್ದಾರೆ,

## ೪.೪ ಜಾತ್ರೆಗಳು

ಹಬ್ಬ ಹಾಗೂ ಜಾತ್ರೆಗಳು ಸಾಮಾನ್ಯವಾಗಿ ಜನಪದ ಮತ್ತು ಶಿಷ್ಟ ಸಂಪ್ರದಾಯ ಎರಡರಲ್ಲೂ ಪರಸ್ಪರ ಪೂರಕವಾಗಿ ಕಂಡು ಬರುವುದಲ್ಲದೆ ತಮ್ಮದೇ ಆದ ನೆಲೆಗಳಲ್ಲಿ ಅವು ಅರ್ಥಪೂರ್ಣವೂ ವಿಶಿಷ್ಟವೂ ಆಗಿದೆ. ಹಿಂದೆ ಜನಪದ ನಂಬಿಕೆಗಳಿಂದ ಹಾಗೂ ಸಂಪ್ರದಾಯಗಳಿಂದ ಗುರುತಿಸಿಕೊಂಡ ಆಚರಣೆಗಳು ಇತ್ತೀಚಿಗೆ ಸಮಾಜ ಬದಲಾದಂತೆಲ್ಲಾ ಕಾಲದಿಂದ ಕಾಲಕ್ಕೆ ಮತ್ತಷ್ಟೂ ವಿಭಿನ್ನ ರೀತಿಯಲ್ಲಿ ಕ್ರಿಯಾಶೀಲವಾಗುತ್ತಿದೆ. ಹಾಗೂ ಶಿಷ್ಟಕಲ್ಪನೆಗೆ ಒಳಗಾಗುತ್ತಿದೆ. ಆದರೆ ಮೊದಲ ವೈಭವ, ಮೂಲ ನಿಲುವು ಹಾಗೂ ನಂಬಿಕೆಗಳನ್ನು ಕಳೆದುಕೊಳ್ಳುತ್ತಾ ಬರುತ್ತಿದೆ. ಆದ ಕಾರಣ ಇತ್ತೀಚೆಗೆ ಜನಪದ ಹಾಗೂ ಶಿಷ್ಟ ಎಂದು ವಿಭಾಗಿಸಿ ನೋಡುವುದೇ ಕೆಲವು ಬಾರಿ ಸರಿಯೆನಿಸದೆ ಹೋಗಬಹುದು.

"ಜಾತ್ರೆ ಎಂದರೆ ಒಂದು ನಿರ್ದಿಷ್ಟ ಪ್ರದೇಶದಲ್ಲಿ ನಿಗದಿತ ವೇಳೆಯಲ್ಲಿ ಜಾತಿ, ಮತ, ಭೇದ ಎನ್ನದೆ ಜನರಿಂದ ನೆರೆದ ವ್ಯಾಪಾರ ವ್ಯವಹಾರಗಳಿಂದ ಕೂಡಿದ, ದೇವರ ಧಾರ್ಮಿಕ ವಿಧಿ–ವಿಧಾನಗಳನ್ನು ಒಳಗೊಂಡ ಒಂದು ಸಂಕೀರ್ಣ ಚಟುವಟಿಕೆ. ಸಾಮಾನ್ಯವಾಗಿ ಜಾತ್ರೆಗಳು, ಜನಪದ ಮೌಲ್ಯಗಳನ್ನು ಜೀವಂತವಾಗಿರಿಸಿಕೊಂಡಿರುವ ಸಾಮಾಜಿಕ ಚಟುವಟಿಕೆಗಳಾಗಿ ಸಕ್ರಿಯವಾಗಿ ಇರುವುದಲ್ಲದೆ,"[೧೭] ದೈವಾರಾಧನೆಯ ಜೊತೆ ಜೊತೆಗೆ ಮನರಂಜನೆಯನ್ನೂ ದೊರಕಿಸಿಕೊಡುವ ಸಾಧನಗಳಾಗಿ ಇಂದಿಗೂ ಜೀವಂತಿಕೆಯಿಂದ ಕೂಡಿವೆ. "ಬಹುತೇಕ ಜಾತ್ರೆ ಮತ್ತು ಹಬ್ಬಗಳು ಬೇರೆಯಾಗಿ ಉಳಿದಿಲ್ಲ.ಹಬ್ಬಕ್ಕೂ ಜಾತ್ರೆಗೂ ನಿಕಟವಾದ ಸಂಬಂಧವಿದೆ. ಯಾತ್ರಾ, ಯಾತ್ರೆ, ಜಾತ್ರೆ, ಪರಿಸೆ, ಪರಿಷೆ ಮುಂತಾದ ಹೆಸರುಗಳಿಂದ ಗುರುತಿಸಲ್ಪಡುವ ಜಾತ್ರೆ ಬಹಳ ಸಂಕೀರ್ಣ ಸ್ವರೂಪವನ್ನು ಒಳಗೊಂಡಿದೆ. ಅಲ್ಲದೆ 'ತೀರ್ಥಕ್ಷೇತ್ರ ಪ್ರವಾಸ, ಹಬ್ಬ, ತೇರು, ಮೆರವಣಿಗೆ ಎಂಬ ನಾನಾರ್ಥಗಳನ್ನು ಒಳಗೊಂಡಿರುವ ಜಾತ್ರೆ ಬೇರೆ ಬೇರೆ ಸ್ಥಳಗಳಿಂದ ಯಾತ್ರಾರ್ಥಿಗಳನ್ನು ಆಕರ್ಷಿಸುವ ಊರಹಬ್ಬ ಅಥವಾ ನಾಡಹಬ್ಬ."[೧೮] ಹೀಗೆ ಜಾತ್ರೆ ಮತ್ತು ಹಬ್ಬಗಳು ಹಿಂದಿನಿಂದ ಬೆಸೆದುಕೊಂಡು ಬಂದಿವೆ. ಜಾತ್ರೆ ನಡೆಯುವಾಗಲೆಲ್ಲ ಹಬ್ಬವಿರುವುದು ಸಾಮಾನ್ಯ. ಆದರೆ ಹಬ್ಬ ನಡೆಯುವಾಗಲೆಲ್ಲ ಜಾತ್ರೆ ಇರಲೇಬೇಕೆಂದಿಲ್ಲ. ಕೆಲವೊಮ್ಮೆ ಹಬ್ಬವಿಲ್ಲದೆಯೂ ಜಾತ್ರೆ'

ನಡೆಯುವುದುಂಟ, ಸಾಮಾಜಿಕ, ಆರ್ಥಿಕ, ರಾಜಕೀಯ, ಧಾರ್ಮಿಕ ಹಾಗೂ ಔದ್ಯೋಗಿಕ ಸಂಬಂಧಗಳನ್ನು ಉತ್ತಮಗೊಳಿಸುವ ಪ್ರಮುಖ ಸಾಧನವಾಗಿ ಜಾತ್ರೆ ಇತ್ತೀಚಿನ ದಿನಗಳಲ್ಲಿ ರೂಢಿಗತವಾಗಿದೆ. ಹಿಂದೆ ದೇವರ ಜಾತ್ರೆಗಳನ್ನು ಕಾಣುತ್ತಲಿದ್ದ ಜನಪದರು ಇತ್ತೀಚಿಗೆ ದನಗಳ ಜಾತ್ರೆ ವಸ್ತುಪ್ರದರ್ಶನ ಜಾತ್ರೆ, ಮೋಜಿನ ಜಾತ್ರೆ ಇತ್ಯಾದಿಗಳನ್ನು ಕಾಣುತ್ತಲಿರುವುದೇ ಇದಕ್ಕೆ ಸಾಕ್ಷಿಯಾಗಿದೆ. ಹಿಂದೆ ಸಾಮಾಜಿಕ ಆಸಕ್ತಿ ಹಾಗೂ ಭಕ್ತಿಯ ಕಾರಣಕ್ಕೆ ವರ್ಷಕ್ಕೊಮ್ಮೆ ಆಚರಿಸಲ್ಪಡತ್ತಿದ್ದ ಜಾತ್ರೆಗಳು ಇತ್ತೀಚೆಗೆ ವರ್ಷದ ಪ್ರಾರಂಭದಿಂದ ಮೊದಲುಗೊಂಡು ವರ್ಷ್ಯಾಂತದವರೆಗೂ ನಡೆಯುವುದನ್ನು ಕಾಣಬಹುದು ಊರಿನ ಹಿತರಕ್ಷಣೆಗೆ, ಮಳೆ ಬೆಳೆ ಕಾರಣಕ್ಕೆ, ರೋಗ ರುಜಿನ ಮುಂತಾದವುಗಳ ನಿವಾರಣೆಗೆ ಜಾತ್ರೆ ನೆರವೇರಿಸಲಾಗುತ್ತದೆ.

ಜಾತ್ರೆಗಳನ್ನು ಸಾಮಾನ್ಯವಾಗಿ ಜನಜಂಗುಳಿ ಸೇರಲು ಸೌಕರ್ಯವಿರುವ ಪ್ರಾಂತ್ಯದಲ್ಲಿ ನೀರು, ನೆರಳು, ಆಹಾರ, ಸೌಕರ್ಯ ಗಮನಿಸಿ ನಡೆಸಲಾಗುತ್ತದೆ. ಆಹಾರ ಸರಬರಾಜು, ರಸ್ತೆ, ತಂಗುದಾಣ ಹೋಟೆಲುಗಳು, ಅಂಗಡಿ ಮುಂಗಟ್ಟುಗಳು, ವಿದ್ಯುತ್ ವ್ಯವಸ್ಥೆ, ಮನರಂಜನೆ ಇವೆಲ್ಲ ಸೌಲಭ್ಯಗಳೂ ಜಾತ್ರೆ ನಡೆಸುವ ನಿಗದಿತ ಸ್ಥಳದಲ್ಲಿ ಪ್ರಮುಖ ಅಗತ್ಯವಾಗಿದೆ. ಸಾಮಾನ್ಯವಾಗಿ ಅಪಾರ ಜನಸ್ತೋಮವನ್ನು ಆಕರ್ಷಿಸುವ ಜಾತ್ರೆಯಲ್ಲಿ ದೇವರು ಪ್ರಭಾವಶಾಲಿಯಾದರೆ ಶ್ರದ್ಧಾವಂತ ಭಕ್ತರ ಜನಜಂಗುಳಿ ನೆರೆದಿರುತ್ತದೆ. "ಹೀಗೆ ಧಾರ್ಮಿಕ ಸ್ವರೂಪವನ್ನು ಪಡೆದಿದ್ದ ಜಾತ್ರೆಗಳು ಕಾಲಕಳೆದಂತೆ ಸಾಂಸ್ಕೃತಿಕ ವ್ಯಕ್ತಿತ್ವವನ್ನು ಪಡೆದುಕೊಂಡು, ಕೊನೆಗೆ ವಾಣಿಜ್ಯ ಸ್ವರೂಪವನ್ನು ಮೈಗೂಡಿಸಿಕೊಂಡು ದಿನದಿಂದ ದಿನಕ್ಕೆ ವಿಕಸನದ ಹಾದಿ ಹಿಡಿಯುತ್ತಿದೆ. ಇಲ್ಲಿ ನಡೆಯಲ್ಪಡುವ ಮನರಂಜನೆಗಳು ಕೇವಲ ಮನರಂಜನೆಗಳಾಗಿರದೆ, ಜನಪದ ಸಂಸ್ಕೃತಿಯ ಮೂಲ ಸೊಗಡನ್ನು ಆಧುನಿಕ ಪ್ರಪಂಚಕ್ಕೆ ಕೊಂಡೊಯ್ಯುವ ರೂವಾರಿಗಳಾಗಿ ಸೇವೆ ಸಲ್ಲಿಸುತ್ತಿವೆ."[೧೯] ನಂದಿಕೋಲು, ಸೋಮನಕುಣಿತ, ಪಟಾಕುಣಿತ, ನಂದೀಧ್ವಜ, ಪಂಡರೀಭಜನೆ, ಕರಡಿಮಜಲು, ಹುಲಿವೇಷ, ಪೂಜಾಕುಣಿತ, ಎಲ್ಲಮ್ಮನಕುಣಿತ, ಕೋಲೆಬಸವನಾಟ, ಡೊಳ್ಳುಕುಣಿತ, ಕುಸ್ತಿ, ಗಮಕ, ನಾಟಕ, ಸಂಗೀತ, ನೃತ್ಯ, ದೇವರಉತ್ಸವ, ತೊಗಲು ಬೊಂಬೆಯಾಟ, ಕೋಲಾಟ, ಲಾವಣಿ, ಗಾರುಡಿಗನೃತ್ಯ, ಸರ್ಕಸ್, ಸಿನಿಮಾ ಹೀಗೆ ಕಲೆಯ ನಾನಾ ಪ್ರಕಾರಗಳನ್ನು ಅಪರೂಪವಾದ ಹಾಗೂ ಗತಿಹೋಗುತ್ತಿರುವ ಭಿನ್ನರುಚಿಯ ಜನಪದರ ಪ್ರಕಾರಗಳನ್ನು ಜಾತ್ರೆಯಲ್ಲಿ ಕಾಣಬಹುದಾಗಿದೆ. ಹೀಗೆ ಜಾತ್ರೆ ಜನಪದ ಸಂಸ್ಕೃತಿಯ ಮುಖ್ಯ ಕೊಂಡಿಯಾದರೆ ಶಿಷ್ಟರು ಆಚರಿಸುವ ಜಾತ್ರೆಗಳ ಸ್ವರೂಪವೇ ಬೇರೆ.

ಸಾಮಾನ್ಯವಾಗಿ ಶಿಷ್ಟರು ಆಚರಿಸುವ ಜಾತ್ರೆಗಳು ಪುರಾಣಗಳ ಹಿನ್ನೆಲೆಯನ್ನು ಹೊಂದಿರುವಂಥದ್ದಾಗಿದ್ದು ಅವುಗಳ ಪೂಜೆ ವಿಧಿ-ವಿಧಾನಗಳು ಅಗಮೋಕ್ತವಾಗಿ

ನಡೆಯುತ್ತವೆ. ನಿರ್ಧಿಷ್ಟವಾದ ತಿಥಿ, ನಕ್ಷತ್ರಗಳಿಗುಣವಾಗಿ ಅವು ಜರುಗುತ್ತವೆ. ಕೆಲವೊಮ್ಮೆ ಹೀಗೆ ಆಚರಣೆಗೊಳ್ಳುವ ಜಾತ್ರೆಗಳು ಸರ್ಕಾರದ ನೇತೃತ್ವದಲ್ಲಿ ನಡೆಯಬಹುದು. ಉದಾಹರಣೆ, ಬೆಂಗಳೂರು ಕರಗ, ತಲಕಾಡು ಜಾತ್ರೆ, ಶ್ರವಣಬೆಳಗೊಳದ ಗೊಮ್ಮಟ ಮಹೋತ್ಸವ ಮುಂತಾದವುಗಳು. ಹೀಗೆ ಸರ್ಕಾರದ ವತಿಯಿಂದ ಏರ್ಪಡಿಸುವ ಜಾತ್ರೆಗಳು ಜನರನ್ನು ಆಕರ್ಷಿಸುವಲ್ಲಿ ಯಶಸ್ವಿಯಾಗುತ್ತಿತ್ತು. ಕೆಲವು ದೇವಸ್ಥಾನಗಳನ್ನು ಸರ್ಕಾರದ ವತಿಯಿಂದ ಮುಜರಾಯಿ ಅನುಕೂಲಗಳನ್ನು ಮಾಡಲಾಗುತ್ತಿತ್ತು. ಕಲಾವಿದರ ತಂಡಗಳನ್ನು, ತಾತ್ಕಾಲಿಕ ಅಂಗಡಿಮಳಿಗೆಗಳನ್ನು ನಿಯೋಜಿಸಲಾಗುತ್ತಿತ್ತು.

ಹೀಗೆ ಜನವರಿಯಿಂದ ಮೇವರೆಗೆ ನಡೆಯುವ ಜಾತ್ರೆಗಳು ಒಕ್ಕಲುತನದ ಪರಿಸರಕ್ಕೆ ಹೊಂದಿಕೊಳ್ಳುವ ಜೊತೆಗೆ ರೈತನ ಬಿಡುವಿನ ವೇಳೆಯಾಗಿರುತ್ತಿತ್ತು. ವರ್ಷವಿಡೀ ನೊಂದು, ಬೆಂದು, ದಣಿದ ರೈತಾಪಿ ವರ್ಗಕ್ಕೆ ಜಾತ್ರೆಗಳು ಮನರಂಜನೆಯನ್ನು ನೀಡುವ ಜೊತೆಗೆ ಉಲ್ಲಾಸ–ಚೈತನ್ಯವನ್ನೂ ತುಂಬುವ ಸಾಧನವಾಗಿತ್ತು. ಈ ಚೈತನ್ಯ ಅವನ ಇಡೀ ವರ್ಷದ ದಣಿವನ್ನು ನಿವಾರಿಸಿ ಹೊಸ ಹುರುಪನ್ನು ತುಂಬುತ್ತಿತ್ತು. ಹೀಗೆ "ಜಡ ಬದುಕಿಗೆ ಭರವಸೆಯ ಚಿಲುಮೆಯಾಗಿ ಸ್ಫೂರ್ತಿದಾಯಕ, ರಂಗು ರಂಗಿನಿಂದ ಕೂಡಿದ ಜಾತ್ರೆ, ಜಾತಿ–ಭೇದಗಳನ್ನು ಮರೆಸಿ, ಗುಂಪು ಗುಂಪುಗಳ ಮಧ್ಯೆ ಬಾಂಧವ್ಯವನ್ನು ಬೆಸೆಯುತ್ತಿತ್ತು. ವಸ್ತು ವಿನಿಮಯಕ್ಕೆ ವಿಚಾರ ವಿನಿಮಯಕ್ಕೆ ಕಷ್ಟ ಸುಖಗಳನ್ನು ಹಂಚಿಕೊಳ್ಳಲು ನೆರವಾಗುತ್ತಿತ್ತು. ಅಲ್ಲದೆ ಜನರಲ್ಲಿ ನೈತಿಕ ಪ್ರಜ್ಞೆಯನ್ನು ಮೂಡಿಸುವಲ್ಲಿ ಯಶಸ್ವಿಯಾಗಿತ್ತ."[೨೦] ಹೀಗೆ ನಡೆಯುವ ಜಾತ್ರೆಗಳು ಶಿಷ್ಟ ಹಾಗೂ ಗ್ರಾಮೀಣ ಹಿನ್ನೆಲೆಯಲ್ಲಿ ಭಿನ್ನವಾಗಿ ನಿಲ್ಲುತ್ತಿದ್ದವು. ಶಿಷ್ಟದೇವತೆಗಳ ಜಾತ್ರೆಗಳು ಶಾಸ್ತ್ರಬದ್ಧವಾಗಿದೆ." 'ಆರ್ಯ ಮತ್ತು ಶಿಷ್ಟದೇವತೆಗಳ ಜಾತ್ರೆಗಳಿಗಿಂತ ದ್ರಾವಿಡ ಹಾಗೂ ಗ್ರಾಮದೇವತೆಗಳ ಜಾತ್ರೆಗಳು ವಿಭಿನ್ನವಾಗಿರುತ್ತಿದ್ದವು. ಜಾನಪದ ಸಂಸ್ಕೃತಿ ಹಾಗೂ ಶಿಷ್ಟ ಸಂಸ್ಕೃತಿಗಳಲ್ಲಿ ಹೆಚ್ಚಿನ ವ್ಯತ್ಯಾಸವಿಲ್ಲದಿದ್ದರೂ ಸಮಾನಾಂತರವಾಗಿಯೇ ವಿಕಾಸ ಹೊಂದುತ್ತಿವೆ ಎಂಬುದು ಇದರಿಂದ ಗೋಚರವಾಗುತ್ತದೆ."[೨೧] ಜಾತ್ರೆಗಳಲ್ಲೂ ಜಾನಪದ ಮತ್ತು ಶಿಷ್ಟಪದ ಎಂಬ ವಿಭಜನೆ ಸೂಕ್ತವಾಗಬಹುದೆನ್ನುತ್ತಾರೆ ವಿದ್ವಾಂಸರು. ಇಲ್ಲಿ ವೈಚಾರಿಕ ವೈರುಧ್ಯ ಸ್ಪಷ್ಟವಾಗಿದೆ.

ಒಟ್ಟಿನಲ್ಲಿ ದ್ರಾವಿಡ ಜನಾಂಗದ ಮೇಲೆ ವೈದಿಕರ ಪ್ರಭಾವ ಇತ್ತೆಂಬುದನ್ನು ಗಮನಿಸಬೇಕು. ಹಾಗಿದ್ದಾರೆ ಈ ಪ್ರಭಾವಕ್ಕೆ ಮೊದಲು ದ್ರಾವಿಡರಲ್ಲಿ ಜಾತ್ರೆಯಲ್ಲಿ ಸೂಚಿಸುವ ಪದ ಯಾವುದಾಗಿತ್ತು? 'ತೇರು' ದ್ರಾವಿಡ ಪದ, ಇದು ಜಾತ್ರೆಯ ನಿರ್ಧಿಷ್ಟವಾದ ಒಂದು ಕಾರ್ಯಕ್ರಮವನ್ನಷ್ಟೇ ಸೂಚಿಸುತ್ತದೆ. 'ತೇರು ಹರಿದ ಮೇಲೆ ಪರಸಿಗೇನು ಕೆಲಸ' ಎಂಬ

ಗಾದೆಯನ್ನು ತೇರು ಜಾತ್ರೆಯ ಮುಕ್ತಾಯವನ್ನು ಸೂಚಿಸುತ್ತದೆ. ಪರಸಿ ಎಂದರೆ ಜಾತ್ರೆ ಎಂದರ್ಥ, ಜಾತ್ರೆ ಜನಸಂದಣಿಯನ್ನು ಒಳಗೊಂಡಿರುತ್ತದೆ. ಎಂದರೆ ತೇರು ನಡೆವಾಗ ಊರ ತುಂಬ ಜಾತ್ರೆ ನೆರದಿರುತ್ತದೆ. ತೇರು ಮುಗಿದ ಮೇಲೆ ಜಾತ್ರೆಗೇನು ಕೆಲಸ, ಜನ ತಮ್ಮ ತಮ್ಮ ಮನೆಗಳಿಗೆ ಹಿಂದಿರುಗುತ್ತಾರೆ ಎಂಬ ಅರ್ಥವನ್ನು ಇದು ಸೂಚಿಸುತ್ತದೆ. ಸಾಮಾನ್ಯರು ಹಲವಡೆ 'ಜಾತ್ರೆಗೆಹೋಗು' ಎಂಬರ್ಥದಲ್ಲಿ 'ತೇರಿಹೋಗು' ಎಂದಾಗಿ ಬಳಸುತ್ತಾರೆ. ತೇರಿನ ಕಲ್ಪನೆಯೂ ಮೂಲ ಕೃಷಿಕರದ್ದಲ್ಲ, "ಜಾತ್ರೆ ಯಾತ್ರೆ, ಉತ್ಸವ, ವಿಧಿಯಾಚರಣೆಗಳ ಮಧ್ಯೆ ಸಂಬಂಧವಿರುವಷ್ಟೇ ವ್ಯತ್ಯಾಸಗಳೂ ಇವೆ. ಕೃಷಿಕ ದ್ರಾವಿಡರ ಆಚರಣೆ 'ಹಬ್ಬ'ವಾಗಿದೆ. ಆದರೆ ಹಬ್ಬ, ಜಾತ್ರೆಗಳೆರಡೂ ಒಂದೊಂದು ಸಲ ಸಮಾನಾರ್ಥಕವಾಗಿ ಬಳಸಲ್ಪಡುತ್ತದೆ."[೨೨]

ಹಬ್ಬ ಕೌಟುಂಬಿಕ ಮತ್ತು ಸಾಮೂಹಿಕ ಆಚರಣೆ. ಜಾತ್ರೆ ಮಾತ್ರ ಸಾಮಾಜಿಕ, ಸಾಮೂಹಿಕ ಆಚರಣೆಯಾಗಿದೆ. ಹಾಗಾಗಿ ಹಬ್ಬ ಮತ್ತು ಜಾತ್ರೆಗಳು ನಮ್ಮಲ್ಲಿ ಒಂದೇ ಪರಿಭಾಷೆಯಲ್ಲ. ಎರಡು ವಿಭಿನ್ನ ಸಂಸ್ಕೃತಿಗಳ ಮೂಲದಿಂದ ಹುಟ್ಟಿ ಬಂದ 'ಪ್ರತ್ಯೇಕ ಘಟಕಗಳು'. ಅದರೂ ಗ್ರಾಮೀಣ ಪ್ರದೇಶಗಳಲ್ಲಿ ಹಬ್ಬಗಳು ಮತ್ತು ಜಾತ್ರೆಗಳು ಒಟ್ಟೊಟ್ಟಿಗೇ ನಡೆಯುತ್ತವೆ. ಹಬ್ಬ ಮತ್ತು ಜಾತ್ರೆಯನ್ನು ಬೇರೆ ಬೇರೆಯೆಂದು ಪರಿಗಣಿಸುವುದು ಕಷ್ಟ, ಹಬ್ಬ ಜಾತ್ರೆಗಳು ಎರಡು ಭಿನ್ನಸಂಸ್ಕೃತಿ ಜನವರ್ಗಗಳ ಪರಂಪರೆಗಳಾಗಿದ್ದು ತದನಂತರದಲ್ಲಷ್ಟೇ ಅವುಗಳ ಸಂಯೋಗವಾಯಿತಾದರೂ ಪ್ರತ್ಯೇಕ ವೈಶಿಷ್ಟ್ಯಗಳು ಉಳಿದುಕೊಂಡೇ ಬಂದವು.

ಒಟ್ಟಿನಲ್ಲಿ ಜಾತ್ರೆ ಒಂದು ಭಾವೈಕ್ಯತೆಯ ತಾಣ, ಕಂಬ ನೆಡುವುದರಿಂದ ಹಿಡಿದು ಮರಿ ಹಬ್ಬಹುವರೆಗೆ ನಡೆಯುವ ಶಿಷ್ಟ ಮತ್ತು ಗ್ರಾಮದೇವತೆಯ ಆಚರಣೆಗಳು ಜಾತ್ರೆಯಲ್ಲಿಯೇ ನಡೆಯುತ್ತದೆ. ಪರಿಶುದ್ಧತೆಗೆ ಆದ್ಯತೆ ನೀಡಲಾಗುವ ಜಾತ್ರೆಗಳಲ್ಲಿ ಸಸ್ಯಾಹಾರವೇ ಪ್ರಮುಖ, ಜೊತೆಗೆ ಮಾಂಸಾಹಾರ, ನೆಂಟರಿಷ್ಟರನ್ನು ಸೇರಿ, ಹೊಸ ಬಟ್ಟೆ ಧರಿಸಿ, ವಿವಿಧ ಭಕ್ಷ ಭೋಜ್ಯಗಳನ್ನು ಸೇವಿಸಿ, ಜಯಘೋಷ ಮಾಡುತ್ತಾ ತೇರು ಎಳೆಯುವುದು ಇಲ್ಲಿ ವಾಡಿಕೆ, ಜಾತ್ರೆಯಲ್ಲಿ ತೇರು ಎಳೆದರೆ ಮಕ್ಕಳಾಗದವರಿಗೆ ಮಕ್ಕಳಾಗುವುದೆಂಬ ನಂಬಿಕೆ ಇಲ್ಲಿ ಇದೆ. ಅಚರಣೆಗಳಲ್ಲಿ ಬರುವ ಎಲ್ಲಾ ವಿಧಿ ನಿಷೇಧಗಳೂ ಜಾತ್ರೆಯ ಪ್ರಮುಖ ಲಕ್ಷಣವಾಗಿದೆ. ಜಾತ್ರೆಗೆ ಬಂದವರು ಅದು ಮುಗಿಯುವುದರೊಳಗೆ ಹೋಗಬಾರದೆಂಬ ನಿಷೇಧಗಳಿದೆ. ಇತ್ತೀಚೆಗೆ ನಾಡಿನಲ್ಲಿ ತಲೆದೋರಿದ ನಾನಾ ಬಗೆಯ ಪ್ರಗತಿಯನ್ನು ಪ್ರತಿಬಿಂಬಿಸುವಂಥ ವಸ್ತುಪ್ರದರ್ಶನಗಳನ್ನು ಸರ್ಕಾರದ ವತಿಯಿಂದ ಏರ್ಪಡಿಸುತ್ತಿರುವುದು ಜಾತ್ರೆಯ ಒಂದು ದೊಡ್ಡ ಆಕರ್ಷಗಣೆಯಾಗಿದೆ. ಇದರ ಮುಖಾಂತರ ಜನ ರಂಜನೆಯೊಂದಿಗೆ ಜನತಾ ಶಿಕ್ಷಣ ಒದಗಿದಂತಾಗಿದೆ. ನಮ್ಮಸ ನಾಡು ಹಾಗು ರಾಷ್ಟ್ರದ ಕಲೆ-ಸಂಸ್ಕೃತಿ ಸಂಗೀತದ ಪ್ರಸಾರ

ಸುಲಭವಾಗಿ ಜನಸಾಮಾನ್ಯರಿಗೆ ಮುಟ್ಟುತ್ತದೆ. ಹೀಗೆ ಬಹು ಜನೋಪಯೋಗಿಯಾಗಿರುವ ಜಾತ್ರೆಗಳ ಸಂಕೀರ್ಣ ಸ್ವರೂಪದಲ್ಲಿ ಬಹುಮುಖ ವ್ಯಕ್ತಿತ್ವಗಳನ್ನು ಪಡೆದಿದೆ. ಜಾತ್ರೆಗಳನ್ನು ಕುರಿತಂತೆ ಜನಪದರಲ್ಲಿ ಪ್ರಪಂಚದಲ್ಲಿರುವ ನಾಣ್ಣುಡಿಗಳು ಹೀಗಿವೆ,

'ಒಳ್ಳೆ ಜಾತ್ರೆಗೆ ಸೇರಿದ ಹಾಗೆ ಸೇರಿದರು'

'ಜನ ಮರುಳೋ ಜಾತ್ರೆ ಮರುಳೋ'

'ಜನರಿದ್ದರೆ ಜಾತ್ರೆ'

'ಕೇರಿಗೊಬ್ಬ ಹನುಮ, ಊರಿಗೊಂದು ಜಾತ್ರೆ'

ಹೀಗೆ ಜಾತ್ರೆಯ ಬಗ್ಗೆ ಇರುವ ಗಾದೆ ನುಡಿಗಳು ಜಾತ್ರೆಯ ಪ್ರಾಮುಖ್ಯವನ್ನು ಸಾರುತ್ತದೆ.

"ಜಾತ್ರೆಗಳು ಜಾನಪದ ಜೀವನದ ಅವಿಭಾಜ್ಯ ಅಂಗವಾಗಿರುವಂತಯೇ, ಜಾನಪದ ಸಂಸ್ಕೃತಿಯ ವಿಕಾಸಕ್ಕೆ ಚೈತನ್ಯದಾಯಿಗಳಾಗಿವೆ. ಅವುಗಳ ತಾಯಿ ಬೇರು ಭೂತಕಾಲದ ಗರ್ಭದಲ್ಲಿ ಹೂತುಕೊಂಡಿದ್ದರೂ, ಅವು ಆದಿಮಾನವನ ಕಾಲದಿಂದಲೇ ಧಾರ್ಮಿಕಾಚರಣೆಗಳ ಒಂದು ಪ್ರಮುಖ ಭಾಗವಾಗಿ ರೂಢಿಯಲ್ಲಿದ್ದಿರಬೇಕೆಂದು ತೋರುತ್ತದೆ. 'ಸಾಮಾನ್ಯವಾಗಿ ಆದಿ ಮಾನವನ ಕಾಲದ ದೇವತಾರಾಧನೆ, ಮೊದಲಾದ ಧಾರ್ಮಿಕ ಆಚರಣೆಗಳು ಸಾಮೂಹಿಕವಾಗಿಯೇ ನಡೆಯುತ್ತಿದ್ದಿರಬೇಕು. ಅವನು ನಿರಂತರವಾದ ಅಲೆಮಾರಿತನದಿಂದ ಪಾರಾಗಿ, ತಾತ್ಕಾಲಿಕವಾಗಿಯಾದರೂ ನೀರು ನೆರಳು ಹೇರಳವಾಗಿದ್ದ ನೆಲ ಕಂಡ ಕಡೆ ನೆಲೆಯೂರಿದನಂತರ ಅಲೆಮಾರಿ ಜನ ಬುಡಕಟ್ಟಿನ ಜನರಾಗಿ ಪರಿವರ್ತನೆಗೊಂಡ ಸಂದರ್ಭದಲ್ಲಿ ಜಾತ್ರೆಗಳು ಸರಳ ಮೂಲಾವಸ್ಥೆಯಲ್ಲಿ ಕಾಣಿಸಿಕೊಂಡಿರಬೇಕು."[೨೩] ಮೊದ ಮೊದಲು ಕುಣಿತ, ಹಾಡು, ಬಲಿ, ಮಂತ್ರ, ಮಾಟಗಳೇ ಪೂಜಾವಿಧಿಗಳಾಗಿದ್ದರಬೇಕು. ಕಾಲಕ್ರಮೇಣ ಸಮಾಜದ ರೀತಿ–ನೀತಿಗಳು ಬದಲಾವಣೆಗೊಂಡಂತೆ, ದೇವರ ಕಲ್ಪನೆ ವ್ಯತ್ಯಾಸಗೊಂಡಂತೆ, ಮತೀಯ ತತ್ವಗಳು ವಿಕಾಸಗೊಂಡಂತೆ ಧಾರ್ಮಿಕಾಚರಣೆಗಳು ಸಂಕೀರ್ಣವಾಗುತ್ತವೆ. ಜನಜೀವನ ಮಾರ್ಪಾಟಾದಂತೆ ಜಾತ್ರೆಗಳೂ ಪ್ರಾಚೀನರ ಕಲ್ಪನೆಗೂ ಎಟುಕದ ಹೊಸ ಹೊಸ ಸಂಗತಿಗಳನ್ನು ಗರ್ಭೀಕರಿಸಿಕೊಂಡು ಆಳತೆಯಿಲ್ಲದೆ ಬೆಳೆಯುತ್ತವೆ. ಅಂದಿನಿಂದ ಜನಪದರ ಅಗತ್ಯತೆಗಳನ್ನು ಪೂರೈಸುತ್ತವೆ.

ಸಂಸ್ಕೃತದ 'ಯಾತ್ರಾ' ಎಂಬ ಪದದ ತದ್ಭವ ರೂಪವೇ 'ಜಾತ್ರೆ'ಯಾಗಿದೆ. 'ಯಾತ್ರಾ' ಪದಕ್ಕೆ ಅನೇಕ ಅರ್ಥಗಳಿವೆ. ಚಲನೆ, ಪ್ರಯಾಣ, ಸೈನ್ಯಾಕ್ರಮಣ, ತೀರ್ಥಯಾತ್ರೆ, ಹಬ್ಬ, ಸಂತೆ, ಮೆರವಣಿಗೆ, ರಸ್ತೆ, ಮರಣ, ಸಾಧನ, ವಾಡಿಕೆ, ವಾಹನ, ನಾಟಕೀಯ ಮನರಂಜನೆ

ಮುಂತಾದವು ಕನ್ನಡದಲ್ಲಿ ಯಾತ್ರೆ ಮತ್ತು ಜಾತ್ರೆ ಎಂಬೆರಡು ಶಬ್ದಗಳೂ ರೂಢಿಯಲ್ಲಿದ್ದು, ಇವು ಹಬ್ಬ, ಸಂತೆ, ಮೆರವಣಿಗೆ, ಪರಿಷೆ, ಮನರಂಜನೆ ಮತ್ತು ಜನಸಮೂಹ ಸೂಚಿಸುತ್ತದೆ. ದೇವರ ರಥೋತ್ಸವವೂ ಜಾತ್ರೆಯಲ್ಲಿಯೇ ಅಡಕಗೊಳ್ಳುತ್ತದೆ. ಯಾತ್ರಾ ಸ್ಥಾನಗಳೆಲ್ಲ ಜಾತ್ರೆ ಸ್ಥಳಗಳಾಗಬೇಕಿಲ್ಲ. ಅಂತೆಯೇ ಎಲ್ಲಾ ಹಬ್ಬಗಳಲ್ಲಿ ಜಾತ್ರೆ ನಡೆಯಬೇಕಾಗಿಲ್ಲ, ಜಾತ್ರೆ ನೆರೆದಾಗಲೆಲ್ಲ, ಹಬ್ಬದ ಸಂಭ್ರಮವಿದ್ದೇ ಇರುತ್ತದೆ. ಹೀಗೆ ಜಾತ್ರೆ ವರ್ಷಕ್ಕೊಮ್ಮೆ ದೇವ–ದೇವತೆಯ 'ರಥೋತ್ಸವ' ಮತ್ತು ಸಂತ ಶರಣರ ಜಯಂತಿಯ ಹಿನ್ನೆಲೆಯಲ್ಲಿ ಸೇರುವ ಜನಮೇಳ. ಇದಕ್ಕೆ ಸಾಂಸ್ಕೃತಿಕ ಶೈಕ್ಷಣಿಕ ಮತ್ತು ವಾಣಿಜ್ಯ ಆಯಾಮಗಳಿರುತ್ತವೆ. ಜನಪದ ಬದುಕಿನಲ್ಲಿ ಜಾತ್ರೆಗಳಿಗೆ ಅತ್ಯಂತ ಮಹತ್ವದ ಸ್ಥಾನವಿದೆ. ಜಾತ್ರೆ ನಡೆಸದ ಜಾತ್ರೆ ನೋಡದ ಜನಪದ ಜನಾಂಗವನ್ನು ಕಲ್ಪಿಸಿಕೊಳ್ಳುವುದೇ ಅಸಾಧ್ಯ, ಜಾತ್ರೆ ಗ್ರಾಮೀಣ ಜೀವನದ ಅವಿಭಾಜ್ಯ ಅಂಗವಾಗಿದೆ. ಜಾತ್ರೆ ಎಂದರೆ ಕೇವಲ ದೇವರ ಪೂಜೆ, ಮೆರವಣಿಗೆ, ಊಟ ಅಷ್ಟೇ ಅಲ್ಲ, ಅದು ಅನೇಕ ಆಚರಣೆಗಳ ಮೊತ್ತ ಕಾಲಕಾಲಕ್ಕೆ ಒದಗಿ ಬಂದ ಸಾಮಾಜಿಕ, ಧಾರ್ಮಿಕ ಮೊದಲಾದ ಕಾರಣಗಳ ಒತ್ತಡದಿಂದಾಗಿ ಅನೇಕ ಸಾಂಸ್ಕೃತಿಕ ಸಂಗತಿಗಳು ಆಚರಣೆಯ ಮುಖವಾಡ ಹೊತ್ತು ಜಾತ್ರೆಯ ಧಾರ್ಮಿಕ ವಿಧಿಗಳಲ್ಲಿ ಒಂದಾಗಿರುತ್ತವೆ. ಹೀಗಾಗಿ ಜಾತ್ರೆ ಸಂಕೀರ್ಣವಾಗುತ್ತಾ ಹೋಗುತ್ತದೆ. ಜಾತ್ರೆಯ ಈ ಒಂದೊಂದು ವಿಧಿ ಅಂಗಗಳನ್ನು ವಿಭಜಿಸಿ, ವಿಶ್ಲೇಷಿಸಿ, ಸೂಕ್ಷ್ಮವಾಗಿ ಅಧ್ಯಯನ ಮಾಡಿದರೆ ಆ ಆಚರಣೆಗಳ ಅರ್ಥವನ್ನು ಅವುಗಳ ಜಾತ್ರೆಯಲ್ಲಿ ಸೇರಲು ಕಾರಣವಾದ ಹಿನ್ನೆಲೆಯನ್ನು ಸ್ವಲ್ಪ ಮಟ್ಟಿಗೆ ಪತ್ತೆ ಹಚ್ಚಬಹುದು. ಒಟ್ಟಾರೆ ಜಾತ್ರೆಗಳ ಅಧ್ಯಯನ ನಮ್ಮ ಸಂಸ್ಕೃತಿಯ ಒಳನೋಟಗಳ ಸೂಕ್ಷ್ಮ ಅಧ್ಯಯನಕ್ಕೆ ನಮ್ಮ ಜನರ ಮನೋಭೂಮಿಕೆಯನ್ನು ಅರ್ಥಮಾಡಿಕೊಳ್ಳುವುದಕ್ಕೆ ಅಮೂಲ್ಯವಾದ ಆಕರಗಳಾಗಿವೆ. ಒಟ್ಟಿನಲ್ಲಿ ಜಾತ್ರೆಗಳಲ್ಲಿ ಸಮೃದ್ಧಿಯನ್ನು, ವೈವಿಧ್ಯತೆಯನ್ನು ಕಾಣಬಹುದು. ಈ ಜಾತ್ರೆಯಿಂದ ಜನಪದ ಕಲೆಗಳ ಉಳಿವು ಕಂಡುಬರುತ್ತದೆ. ಜಾತ್ರೆಗಳ ಅಂಗವಾಗಿ ನಡೆಯುವ ವಸ್ತುಪ್ರದರ್ಶನಗಳು ಜನರಿಗೆ ನಾನಾ ವಿಷಯಗಳಲ್ಲಿ ತಿಳುವಳಿಕೆಯನ್ನು ಹಾಗೂ ಮನೋರಂಜನೆಯನ್ನು ನೀಡುತ್ತದೆ. ದನಗಳ ಜಾತ್ರೆಗಳಿಂದ ರೈತರಿಗೆ ಮಹದುಪಕಾರವಾಗುತ್ತದೆ. ಜಾತ್ರೆಗಳು ಸಾಂಸ್ಕೃತಿಕ ಕೇಂದ್ರಗಳಾಗುವುದರ ಜೊತೆಗೆ ಒಳ್ಳೆಯ ವ್ಯಾಪಾರೋದ್ಯಮಗಳಾಗಿಯೂ ಪರಿಣಮಿಸಿವೆ. ಒಮ್ಮೊಮ್ಮೆ ಅವು ಸುಗ್ಗಿಯ ಸುಖದ ಮಾಧ್ಯಮಗಳಾಗುವುದೂ ಉಂಟು.

ಅನೇಕ ಸಂದರ್ಭಗಳಲ್ಲಿ ಜಾತ್ರೆ ಮತ್ತು ಹಬ್ಬಗಳನ್ನು ಒಂದೇ ಅರ್ಥದಲ್ಲಿ ಬಳಸುವುದುಂಟು, ಆದರೆ ಅವೆರಡೂ ಬೇರೆ ಬೇರೆ ಅರ್ಥದಲ್ಲಿ ತಮ್ಮ ಅಸ್ತಿತ್ವವನ್ನು

ಕಾಯ್ದುಕೊಂಡಿದೆ. ಆದರೆ ಇವೆರಡಕ್ಕೂ ನಿಕಟವಾದ ಸಂಬಂಧವಿದೆ. ಹಾಗೆ ನೋಡಿದರೆ ಎಷ್ಟೋ ವೇಳೆ ಅವೆರಡರ ನಡುವಿನ ಭೇದವನ್ನು ಗುರುತಿಸುವುದೇ ಇಲ್ಲ. ಅನೇಕರು ದೃಷ್ಟಿಯಲ್ಲಿ ಜಾತ್ರೆಯೂ ಒಂದು ಹಬ್ಬ, ಹಬ್ಬವೆಂದರೆ, ಪರ್ವಕಾಲದ ಆಚರಣೆ, ಪ್ರತಿವರ್ಷ ವಿಶೇಷ ಸಂದರ್ಭಗಳಲ್ಲಿ ಸಾಮಾಜಿಕ ಕ್ಷೇಮಕ್ಕಾಗಿ ಇರುವ ಆಚರಣೆ, ಸಂಪ್ರದಾಯ, ಬಂಧು–ಬಳಗ, ಊರು–ಕೇರಿಗಳಲ್ಲಿ ಹತ್ತಿರ ತರುವ ಸಂದರ್ಭ, ಪುಣ್ಯದ ಸಂದರ್ಭ, ಸಂತೋಷದ ಸಂದರ್ಭ, ಜಾತ್ರೆಯೂ ಹೆಚ್ಚು ಕಡಿಮೆ ಅಂಥದೇ ಆಚರಣೆ, ದೇ.ಜವರೇಗೌಡರು ಹೇಳುವಂತೆ ಜಾತ್ರೆಯು ಯಾವುದಾದರೊಂದು ದೇವರ ಹೆಸರಿನಲ್ಲಿ ಅಗಾಗ್ಗೆ ನಡೆಯುವ, ಬೇರೆ ಬೇರೆ ಕಡೆಗಳಿಂದ ಯಾತ್ರಾರ್ಥಿಗಳನ್ನು ಆಕರ್ಷಿಸುವ ಹಬ್ಬ. ಹಿಂದೆ ಬೇಸಿಗೆಯ ಕಾಲದಲ್ಲಿ ಹಾಗೂ ಸುಗ್ಗಿಯ ಕಾಲದಲ್ಲಿ ಗ್ರೀಸ್ ದೇಶದಲ್ಲಿ ಹಬ್ಬದೂಟಗಳಿರುತ್ತಿದ್ದುವಂತೆ. ಆಗಲೇ ಜಾತ್ರೆ ಅಥವಾ ಪರಸೆಗಳು ನಡೆಯುತ್ತಿದ್ದವು. ಇಲ್ಲಿ ಒಂದೆರಡು ಮಾತುಗಳನ್ನು ಸೇರಿಸಬಹುದು. ಜಾತ್ರೆ ಹಬ್ಬಗಳೆರಡೂ ಜಾನಪದದ ಸಂಪ್ರದಾಯಕ್ಕೆ ಸೇರಿದವುಗಳು, ಎರಡೂ ಸಂಕೀರ್ಣ ವ್ಯವಸ್ಥೆಗಳು, ಎರಡೂ ಸಾರ್ವಜನಿಕ ಕ್ಷೇಮಕ್ಕಾಗಿ ಇವೆ. ಹೀಗಿದ್ದರೂ ಜಾತ್ರೆಗಳು ಬೇರೆ, ಹಬ್ಬಗಳು ಬೇರೆ, ದೇ.ಜವರೇಗೌಡರ ಮಾತಿನಲ್ಲಿ ಹೇಳುವುದಾದರೆ, 'ಜಾತ್ರೆ' ನಡೆಯುವಾಗಲೆಲ್ಲ ಹಬ್ಬವಿರುತ್ತದೆ. ಹಬ್ಬ ನಡೆಯುವಾಗಲೆಲ್ಲ ಜಾತ್ರೆಯಿರಬೇಕೆಂದಿಲ್ಲ. ಗೌರಿಗಣೇಶರ ಹಬ್ಬದಲ್ಲಿ ಜಾತ್ರೆ ನಡೆಯುವುದಿಲ್ಲ ಮಾರಿ ಜಾತ್ರೆಯಾಗಲಿ, ಇತರೆ ಯಾವುದೇ ಜಾತ್ರೆಯಾಗಲಿ ಹಬ್ಬ ಸೇರಿಕೊಂಡಿರುತ್ತದೆ. ಕೆಲವೊಮ್ಮೆ ಹಬ್ಬವಿಲ್ಲದೆಯೂ ಜಾತ್ರೆ ನಡೆಯುವುದುಂಟು. ಕೆಂಗಲ್ ಹನುಮಂತರಾಯನ ಜಾತ್ರೆಯನ್ನು ಇಲ್ಲಿ ಉದಾಹರಿಸಬಹುದು. ಇದರಲ್ಲಿ ಇನ್ನೂ ಒಂದೆರಡು ವ್ಯತ್ಯಾಸಗಳನ್ನು ಸೂಚಿಸಬಹುದು.

"ಹಬ್ಬವು ಮನೆಯೊಳಗೇ ಅಚರಿಸುವಂಥದು. ಜಾತ್ರೆ ಹಾಗಲ್ಲ ಊರು ಜನರೂ ಪರವೂರಿಂದ ಬಂದವರೂ ಒಂದೆಡೆ ನೆರೆಯದೆ ಜಾತ್ರೆಯಿಲ್ಲ. ಜಾತ್ರೆ ಹೋಗುವುದು ಎಂಬುದು ಪ್ರಯಾಣವನ್ನು ಸೂಚಿಸುತ್ತದೆ. ಹಬ್ಬವನ್ನು ಕುಳಿತಲ್ಲೇ ಆಚರಿದಬಹುದು, ಹಬ್ಬಕ್ಕೆ ಊಟ ಮುಖ್ಯ. ಅದಕ್ಕೆಂದೇ ಪ್ರಶಸ್ತವಾದ ಊಟಕ್ಕೆ ಹಬ್ಬದೂಟ ಎನ್ನುವುದು. ಜಾತ್ರೆ ಮೋಜು, ಮನರಂಜನೆ, ನೆರವಿ, ದೃಶ್ಯಗಳು ಮುಖ್ಯ, 'ಜಾತ್ರೆ ಕಣ್ಣಿಗೆ ಹಬ್ಬ' ಹೀಗಾಗಿ 'ಹಬ್ಬದೂಟ ಜಾತ್ರೆ ನೋಟ' ಎಂಬ ಗಾದೆ ಮಾತು ಬಂದಿದೆ."[೨೪]

ಈ ಸಂದರ್ಭದಲ್ಲಿ ಜಾತ್ರೆಯ ಪರಿಕಲ್ಪನೆಯನ್ನು ಇತರ ಕೆಲವು ಪರಿಕಲ್ಪನೆಗಳೊಡನೆ ತೂಗಿ ನೋಡವುದು ಸಂದರ್ಭೋಚಿತ ರೂಢಿಯಲ್ಲಿ ಜಾತ್ರೆ, ವಸ್ತುಪ್ರದರ್ಶನ, ಮೇಳ ಎಂಬ ಪದಗಳನ್ನು ಸಮಾನಾರ್ಥಕವಾಗಿ ಸಡಿಲ ಅರ್ಥದಲ್ಲಿ ಬಳಸುವುದುಂಟು. ಇಂಗ್ಲಿಷ್

ಭಾಷೆಯಲ್ಲಂತೂ ಈ ಮಾತು ಹೆಚ್ಚು ಅನ್ವಯಿಸುತ್ತದೆ. ಹೀಗೆ ಬಳಸಲು ಅಲ್ಲಿ ಜಾತ್ರೆ, ವಸ್ತು ಪ್ರದರ್ಶನಗಳಿಗೆ ಹೆಚ್ಚಿನ ವ್ಯತ್ಯಾಸ ಇಲ್ಲದಿರುವುದೇ ಕಾರಣವಿರಬಹುದು. ಅವರ ದೃಷ್ಟಿಯಲ್ಲಿ ಇಂಡಸ್ಟ್ರಿಯಲ್ ಫೇರ್, ಇಂಡಸ್ಟ್ರಿಯಲ್ ಎಕ್ಸಿಬಿಷನ್ ಎಲ್ಲಾ ಒಂದೇ. ಆದರೆ ಭಾರತೀಯ ಸಂದರ್ಭದಲ್ಲಿ ಜಾತ್ರೆಧರ್ಮಕ್ಕೆ ಸಂಬಂಧಿಸಿದ್ದು. ಅದು ಯಾತ್ರೆ, ಹಬ್ಬ-ಹುಣ್ಣಿಮೆಗಳ ಜಾತಿಗೆ ಸೇರಿದ್ದು. ಅದು ವ್ಯಾಪಾರ ವಹಿವಾಟಿಗೆ ನೇರವಾಗಿ ಸಂಬಂಧ ಹೊಂದಿದ್ದಲ್ಲ. ದೊಡ್ಡ ಜಾತ್ರೆಗಳಲ್ಲಿ ಲಕ್ಷಾಂತರ ರೂಪಾಯಿ ವ್ಯಾಪಾರವಾಗಬಹುದು. ದೊಡ್ಡ ಸಂಖ್ಯೆಯಲ್ಲಿಅಂಗಡಿ ಮುಂಗಟ್ಟುಗಳು ಬರಬಹುದು. ಆದರೆ ಹಿಂದೆ ಸೂಚಿಸಿದಂತೆ ಜಾತ್ರೆಯು ಒಂದಲ್ಲ ಒಂದು ದೈವಕ್ಕೆ ಸಂಬಂಧಿಸಿದ್ದು, ದೇವಾಲಯಗಳ ಸುತ್ತ ನೆರೆಯುವಂಥದ್ದು.

ಬಹು ಪ್ರಾಚೀನ ಕಾಲದಲ್ಲಿ ಏನಿಲ್ಲೆಂದರೂ ಎರಡೂವರೆ ಸಾವಿರ ವರ್ಷಗಳಷ್ಟು ಹಿಂದಿನ ಕಾಲದಲ್ಲಿ ಜನರು ತಮಗೆ ಬೇಕಾದ್ದಕ್ಕಿಂತ ಹೆಚ್ಚು ಉತ್ಪಾದಿಸುವುದನ್ನು ಕಲಿತಿದ್ದರು. ವಿವಿಧ ರೀತಿಯ ಕೌಶಲ್ಯಗಳನ್ನು ವೃತ್ತಿಗಳನ್ನೂ ಬೆಳೆಸಿಕೊಂಡಿದ್ದರು. ತಾವು ಬೆಳೆದ ಕೃಷಿ ವಸ್ತುಗಳನ್ನು ಹಾಗೂ ತಮ್ಮ ಕೈಯಿಂದ ರೂಪಿಸಿದ ತಯಾರಿಕೆಗಳನ್ನು ಇತರರಿಗೆ ಕೊಡುವ ಮತ್ತು ಇತರರ ತಯಾರಿಕೆಗಳನ್ನು ಅವರಿಂದ ಪಡೆದುಕೊಳ್ಳುವ ಅವಶ್ಯಕತೆ ಉಂಟಾಯಿತು. ಇದರೊಂದಿಗೆ ತಮ್ಮ ಕರಕೌಶಲ್ಯವನ್ನು ಪ್ರದರ್ಶಿಸುವ ಬಯಕೆಯೂ ಸೇರಿಕೊಂಡಿರಬೇಕು. “ಈ ಪ್ರಕ್ರಿಯೆಯಲ್ಲಿ ವಸ್ತು ವಿನಿಮಯ ಅಥವಾ ‘ನಿಮಾನ’ ಪದ್ಧತಿ ಬೆಳೆಯಿತು. ಅಂದರೆ ತಮ್ಮ ತಯಾರಿಕೆಗಳ ಬದಲಿಗೆ ಇನ್ನೊಬ್ಬರ ಉತ್ಪನ್ನಗಳನ್ನು ಕೈಬದಲು ಮಾಡಿಕೊಳ್ಳುವ ಪದ್ಧತಿ ಹುಟ್ಟಿಕೊಂಡಿತು. ಮುಂದೆ ಏನಾದರೊಂದು ವಸ್ತುವನ್ನು ಮೌಲ್ಯದ ಅಳತೆಯಾಗಿ ಅವರು ಬೆಳಸಿಕೊಂಡರು. ಬರಬರುತ್ತಾ ನಗದು ಹಣ ಅಥವಾ ನಾಣ್ಯವನ್ನು ಬಳಸಿ ಕ್ರಯ ವಿಕ್ರಯ ಮಾಡುವುದು ಆಗ ಸಾಧ್ಯವಿರಲಿಲ್ಲ. ಪ್ರಾಯಶಃ ಅವಶ್ಯವೂ ಇರಲಿಲ್ಲ. ಆದರೂ ತಾತವು ಬಳಸಿ ಮಿಗಿಸಿದ್ದನ್ನು ಇತರರಿಗೆ ಮಾರಲು ಹಾಗೂ ತಮ್ಮಲ್ಲಿಲ್ಲದ ವಿವಿಧ ವಸ್ತುಗಳನ್ನು ಪಡೆಯಲು ಏನಾದರೊಂದು ವ್ಯವಸ್ಥೆ ಮಾಡಿಕೊಳ್ಳಬೇಕಾಗಿತ್ತು. ವರ್ಷದ ಒಂದು ನಿರ್ದಿಷ್ಟ ಸ್ಥಳದಲ್ಲಿ ಜನರು ಸೇರಿ ಕ್ರಯವಿಕ್ರಯ ಮಾಡುವ ಸಂಪ್ರದಾಯ ಬೆಳೆದು ಜಾತ್ರೆಯ ರೂಪತಾಳಿತು. “ಆದರೆ ಹೀಗೆ ಜಾತ್ರೆಯ ಕಾಲ ಮತ್ತು ಸ್ಥಳಗಳನ್ನು ನಿರ್ದಿಷ್ಟ ಪಡಿಸಿದ್ದು ಹೇಗೆ? ಎಂಬುದಕ್ಕೆ ಉತ್ತರ ಅಂಥ ಸುಲಭವಾದ ಕೆಲಸವೇನಲ್ಲ. ವರ್ಷದಲ್ಲಿ ಸುಗ್ಗಿ ಮುಗಿದನಂತರ ಅಥವಾ ಇನ್ನೊಂದು ಪ್ರಶಸ್ತವಾದ ಕಾಲದಲ್ಲಿ ಜನರು ಹಿಂದಿನಿಂದಲೂ  ಹಬ್ಬ ಹುಣ್ಣಿಮೆ ಆಚರಿಸುತ್ತ ಬಂದಿದ್ದಾರೆ. ಇವು ಬಿಡುವಿನ ಅಥವಾ ರಜಾದಿನಗಳು ಅಂದರೆ ತಾವು ವರ್ಷದುದ್ದಕ್ಕೂ

ಮಾಡುತ್ತಾ ಬಂದಿರುವ ಕೆಲಸವನ್ನು ಮಾಡದೇ ಇರುವ ದಿನಗಳು. ಇಂಥ ದಿನಗಳಲ್ಲಿ ಜಾತ್ರೆ ನಡೆಸಿದಂತಾಯಿತು ಎಂದು ಅವರು ನಿರ್ಧರಿಸಿರಬಹುದು.

ಇನ್ನು ಜಾತ್ರೆ ಸೇರುವ ಸ್ಥಳವನ್ನು ನಿರ್ಧರಿಸಿದ್ದು ಹೇಗೆ? ಅದಕ್ಕೂ, ನಮ್ಮ ಪ್ರಾಚೀನರು ಉಪಾಯ ಹುಡುಕಿದರು. ಬೇರೆ ಬೇರೆ ಹಳ್ಳಿಗಳಿಂದ ಅಥವಾ ಆದಿವಾಸಿ ನೆಲೆಗಳಿಂದ ಪ್ರಾಣಿಗಳ ಮೇಲೆ ವಸ್ತುಗಳನ್ನು ಹೊರಿಸಿಕೊಂಡು (ಮುಂದಿನ ಕಾಲದಲ್ಲಿ ವಾಹನಗಳ ಮೇಲೆ ಹೇರಿಸಿಕೊಂಡು) ಬರುತ್ತಿದ್ದಾಗ ಇಂಥ ವ್ಯಾಪಾರದ ದಾರಿಗಳು ಕೂಡುವಲ್ಲಿ ಜಾತ್ರೆಗಳು ಸೇರಿದರೆ ಅನುಕೂಲವಾದೀತೆಂದು ಗ್ರಹಿಸಿ ಅಲ್ಲಿ ಜಾತ್ರೆಗಳನ್ನು ನಡೆಸಿದರು. ಹೇರಳ ಸರಕು ಬಂದಿಳಿದ ಅನುಕೂಲಕರ ತಾಣಗಳಲ್ಲಿ ಅಂಗಡಿ ಮುಂಗಟ್ಟುಗಳು ಬಂದವು. ಒಂದು ದಿನ ನಡೆಯುತ್ತಿದ್ದ ಜಾತ್ರೆ ಎರಡು ಮೂರು ಹತ್ತಿಪ್ಪತ್ತು ದಿನಗಳವರೆಗೂ ವಿಸ್ತರಿಸಿತು. ಅಲ್ಲಿ ಬಂದು ಸೇರುವ ವ್ಯಾಪಾರಿಗಳಿಗೂ ಗ್ರಾಹಕರಿಗೂ ಊಟೋಪಚಾರದ ವ್ಯವಸ್ಥೆಯಾಯಿತು. ವ್ಯಾಪಾರ ವಹಿವಾಟುಗಳಿಗೆ ಅವಶ್ಯವಾದ ಅಳತೆ–ತೂಕ, ಲೇವಾದೇವಿ, ಬಂದೋಬಸ್ತು ವ್ಯವಸ್ಥೆಗಳೂ ಹುಟ್ಟಿಕೊಂಡವು. ಮನರಂಜನೆಗೂ ಅನುವಾಯಿತು. ಕ್ರಯ ವಿಕ್ರಯವನ್ನು ನಿಯಂತ್ರಿಸಿ ತೆರಿಗೆ ವಸೂಲು ಮಾಡಲು ಮತ್ತು ವಾದವಿವಾದಗಳನ್ನು ಬಗೆಹರಿಸಲು ರಾಜನ ಅಧಿಕಾರಿಗಳು ನೇಮಿಸಲ್ಪಟ್ಟರು; ಸೆಟ್ಟಿ ಹೋದಲ್ಲೆಲ್ಲ ಪಟ್ಟಣವಾಯಿತು' ಎಂಬುದು ಹಳೆಯ ಗಾದೆ, ಸೆಟ್ಟಿ ಹೋದಲ್ಲೆಲ್ಲಾ ಜಾತ್ರೆಯೂನೆರೆಯಿತು ಎಂಬುದು ಇಲ್ಲಿಯ ಅಭಿಪ್ರಾಯವಾಗಿದೆ. ಇಲ್ಲಿ ಒಂದು ಪ್ರಶ್ನೆ ಏಳುತ್ತದೆ. ಆರ್ಥಿಕ ಪ್ರಚೋದನೆ ಅಥವಾ ವ್ಯಾಪಾರ ವಹಿವಾಟಿನ ಅಗತ್ಯವೇ ಜಾತ್ರೆಗೆ ಮೂಲ ಪ್ರೇರಣೆಯಾಗಿದ್ದರೆ ಪ್ರಾಚೀನ ಕಾಲದ ಜಾತ್ರೆಗಳು ಒಂದಲ್ಲ ಒಂದು ದೈವದ ನೆಲೆ ಅಥವಾ ಸಾಧು ಸತ್ಪುರುಷರ ಸಮಾಧಿಗಳ ಬಳಿಯೇ ಏಕೆ ನಡೆಯುತ್ತಿದ್ದವು? ಈ ಪ್ರಶ್ನೆಗೂ ಒಂದು ಸಮಾಧಾನವುಂಟು. ಅಂಥ ಸ್ಥಳಗಳನ್ನು ಆರಿಸಿಕೊಂಡರೆ ಯಾವುದಕ್ಕೂ ಜಗ್ಗದ ಮೋಸಗಾರರು ಇಲ್ಲಿರುವ ದೈವಗಳಿಗೆ ಅಥವಾ ಪ್ರೇತಾತ್ಮಗಳಿಗೆ ಹೆದರಿಕೊಂಡು ಯೋಗ್ಯರೀತಿಯಲ್ಲಿ ನಡೆಯಬಹುದು ಹಾಗೂ ಇಲ್ಲಿ ಶಾಂತಿ ಪಾಲನೆ ಸುಲಭವಾದೀತು ಎಂಬುದು ಜನರ ಭಾವನೆಯಾಗಿತ್ತು.

ಜಾತ್ರೆ ಸಮಾಜ ವ್ಯವಸ್ಥೆಯ ಸ್ತರಗಳಿಗೂ ನಿರ್ಬಂಧಗಳಿಗೂ ಅನುಗುಣವಾಗಿರುವುದನ್ನು ಕಾಣಬಹುದು. ಈ ದೇಶದಲ್ಲಿ ಪ್ರತಿಯೊಂದು ಜಾತಿ, ಉಪಜಾತಿಗಳಿಗೂ ತಮ್ಮದೇ ಆದ ರಕ್ಷಕ ದೇವರಿದ್ದಾರೆ. ಆ ದೇವರಿಗೆ ನಡೆದುಕೊಳ್ಳುವವರಲ್ಲಿ ಹೆಚ್ಚು ಜನರು ಒಂದೇ ಜಾತಿಗೆ ಸೇರಿದವರು. ಆ ದೇವರ ಜಾತ್ರೆಗೆ ಬರುವವರಲ್ಲಿ ಅವರ ಸಂಖ್ಯೆಯೇ ಹಚ್ಚು ಬೇರೆಯವರು ಬರಬಾರದೆಂದೇನೂ ಇಲ್ಲ. ಇತರ ಜಾತಿಯವರು ದೊಡ್ಡ

ಸಂಖ್ಯೆಯಲ್ಲಿ ಬಂದರೂ ಅವರಿಗೆ ದೇವರ ಬಗ್ಗೆ ಹೆಚ್ಚಿನ ಭಯವಾಗಲೀ ಹೆಚ್ಚಿನ ಭಕ್ತಿಯಾಗಲೀ ಇರುವುದಿಲ್ಲ. ಹೀಗೆ ಜಾತ್ರೆಯ ಮಹತ್ವದ ಬಗ್ಗೆ ಚರ್ಚಿಸುತ್ತಾ ಹೋದಂತೆಲ್ಲಾ ಅದು ಬಹು ಉಪಯೋಗಿ ಸಂಸ್ಥೆ ಎಂಬ ನಿರ್ಧಾರಕ್ಕೆ ತಲುಪಬಹುದು. ಈ ಜಾತ್ರೆಯನ್ನು ಗ್ರಾಮೀಣರು ಅಂದಿನಿಂದ ಇಂದಿನವರೆಗೆ ಹಲವು ವಿಧವಾಗಿ ದುಡಿಸಿಕೊಂಡು ಬಂದಿದ್ದಾರೆ.

ಅದರಿಂದ ವಿವಿಧ ಲಾಭಗಳನ್ನು ಪಡೆದಿದ್ದಾರೆ. ಅದು ಯಾವ ಪುರುಷಾರ್ಥಕ್ಕೆ ಎಂಬ ಕೊಂಕಿನ ಮಾತು ಬೇಡ ಅದು ಜಾನಪದಸ ಧರ್ಮ-ಅರ್ಥ-ಕಾಮ-ಮೋಕ್ಷಗಳಿಗೆ ಇಂಬು ಕೊಟ್ಟಿದೆ. ಅನೇಕ ಸಾವಿರ ವರ್ಷಗಳ ಇತಿಹಾಸವುಳ್ಳ ಈ ಸಂಸ್ಥೆ ಅನಿರೀಕ್ಷಿತವಾಗಿ ಹುಟ್ಟಲಿಲ್ಲ. ಮುಖ್ಯವಾಗಿ ಜನಪದರಿಗೆ ಅದು ಸಲ್ಲಿಸಿದ ಸೇವೆ ಮಾಡಿದ ಕಾರ್ಯಕ್ಕಾಗಿ ಇಲ್ಲಿ ಗಮನಾರ್ಹವಾಗಿದೆ.

"ಜಾತ್ರೆ 'ಧರ್ಮ'ವನ್ನು ಜನಪ್ರಿಯಗೊಳಿಸಿತು. ಭಕ್ತರನ್ನು ಒಂದೇ ದೇವರ ಒಕ್ಕಲುಗಳನ್ನು ಒತ್ತಟ್ಟಿಗೆ ತಂದಿತು. ಪೂಜೆ, ಹರಕೆ, ಕಾಣಿಕೆಗಳ ಮೂಲಕ ದೈವದ ನಂಟನ್ನು ಬಿಗಿಗೊಳಿಸಿತು. ಪಂಢರಪುರದ ವಿಠೋಬ, ಸವದತ್ತಿಯ ಎಲ್ಲಮ್ಮ. ಧರ್ಮಸ್ಥಳದ ಮಂಜುನಾಥ. ಇವರೆಲ್ಲ ನಮ್ಮ ಬೆನ್ನಿಗಿದ್ದಾರೆ ಎಂಬುದನ್ನು ಖಚಿತ ಪಡಿಸಿತು. ಕಾಯಿಲೆ, ಕಷ್ಟ-ಕಾರ್ಪಣ್ಯಗಳಲ್ಲಿ ದೇವರಿಗೆ 'ಮುಡಿಪಿಟ್ಟು' ಯಾತ್ರೆ ಜಾತ್ರೆ ಮಾಡುವ ಹರಕೆ ಹೊತ್ತರೆ ಮನಸ್ಸಿಗೆ ನೆಮ್ಮದಿ, ವರ್ಷಾವಧಿ ಜಾತ್ರೆಗೆ ಹೋಗಿ ಹರಕೆ ಸಂದಾಯ ಮಾಡುವುದು ನಮ್ಮ ಜನಪದರ ಕಷ್ಟಗಳಿಗೆ ಪರಿಹಾರ ಕೊಡುವ ಒಂದು ಮುಖ್ಯ ಉಪಾಯ. ಜಾತ್ರೆಯಿಂದ ಲಾಭವುಂಟು, ನಷ್ಟ ಎಂದೂ ಇಲ್ಲ ಎಂದು ನಮ್ಮವರ ಭಾವನೆ. ಊರಿನಲ್ಲಿ ಮಳೆ ಬೀಳದಿದ್ದಾಗ, ಬೆಳೆ ಹಾಳಾದಾಗ, ಬಾವಿಗಳ ನೀರು ಬತ್ತಿದಾಗ, ಜನರಿಗೂ ದನಕರುಗಳಿಗೂ ಸೋಂಕುರೋಗಗಳು ಬಂದಾಗ ಜಾತ್ರೆ ನೆರೆಯಿಸುವ ರೂಢಿಯುಂಟು. ಇದರಿಂದ ಸಾರ್ವಜನಿಕ ಕ್ಷೇಮವುಂಟು ಎಂಬುದು ಜನಪದ ನಂಬಿಕೆ, ಈ ನಂಬಿಕೆ ಅವರನ್ನು ಕಾಪಾಡುತ್ತಾ ಬಂದಿದೆ."[೨೬] ಅವರಿಗೆ ಸಂಕಟಗಳ ವಿರುದ್ದ ಹೋರಾಡುವ ಧೈರ್ಯಕೊಟ್ಟಿದೆ.

ಬಹುತೇಕ ಗ್ರಾಮಗಳ ಜಾತ್ರೆಗಳಲ್ಲಿ ಒಂದಲ್ಲ ಒಂದು ಜಾತಿಗೆ ಹೆಚ್ಚಿನ ಪ್ರಾಶಸ್ತ್ಯ ಸಿಗುತ್ತದೆ ಎಂಬುದು ವಾಸ್ತವ. ಗ್ರಾಮದ ಒಗ್ಗಟ್ಟು, ಸಮಗ್ರತೆ, ಅಭಿಮಾನ ಈ ಜಾತ್ರೆಗಳಲ್ಲಿ ಎಷ್ಟು ಜಾಗೃತವಾಗಿರುತ್ತದೆಂದರೆ ತಮ್ಮ ಊರು ಸಂಭಾವಿತರ ಊರು, ಉಪಕಾರಿಗಳ, ಊರು ಎಂದು ಹೊಗಳಿಸಿಕೊಳ್ಳಲು ಎಂಥ ತ್ಯಾಗ ಮಾಡಲೂ ಜನ ನಾಮುಂದು ತಾಮುಂದು ಎನ್ನುತ್ತಾರೆ. ಜಾತ್ರೆಗಳ ಧಾರ್ಮಿಕ ಮಹತ್ವವನ್ನು ಒತ್ತಿ ಹೇಳುವಾಗ ನಾವು ಅವುಗಳ ಆರ್ಥಿಕ ಮಹತ್ವವನ್ನು ಕಡೆಗಾಣಿಸುವಸಂಭವವುಂಟು. ಧರ್ಮ ಪ್ರಧಾನವೆನಿಸಿಕೊಳ್ಳುವ

ಭಾರತದಲ್ಲಯೂ ಪ್ರಾಚೀನ ಕಾಲದಲ್ಲಿ ಜಾತ್ರೆಗಳು 'ವಾಣಿಜ್ಯ' ವ್ಯವಹಾರಗಳಿಗಾಗಿ ಹೆಸರು ಪಡೆದಿದ್ದವು. ಜಾತ್ರೆಗಳು ಜನಪದರ ಕರಕೌಶಲ್ಯಗಳಿಗೆ ಕಲೆ ಮತ್ತು ಸಾಹಿತ್ಯಗಳಿಗೆ ಕೊಟ್ಟ ಪ್ರೊತ್ಸಾಹ ಆಶ್ರಯಗಳೇನೂ ಕಡಿಮೆಯಿಲ್ಲ. ಚಿನ್ನ, ಬೆಳ್ಳಿ, ಪಂಚಲೋಹ, ತಾಮ್ರ ಕಂಚುಗಳಿಂದ ತಯಾರಾದ ಬಗೆಬಗೆ ಒಡವೆಗಳು ಉಪಕರಣಗಳು ಜಾತ್ರೆಯಿಲ್ಲದಿದ್ದರೆ ಮೂಲೆ ಗುಂಪಾಗುತ್ತಿದ್ದವು. ಕುಸುರಿ ಕೆಲಸ, ಜರಿ ಕೆಲಸ, ಕಸೂತಿ, ಉಬ್ಬು ಚಿತ್ರಗಳು, ಮೂರ್ತಿ ಶಿಲ್ಪಗಳು, ಬಣ್ಣದ ಕೆಲಸ, ಮರ ಕೆತ್ತನೆಯ ಕೆಲಸ ಜಾತ್ರೆಗಳಿಲ್ಲದಿದ್ದರೆ ಬದುಕುವುದು ಹೇಗೆ? ನಮ್ಮ ಹಳ್ಳಿಯ ಜಾತ್ರೆಗಳಿಲ್ಲದಿರುತ್ತಿದ್ದರೆ ಹಳ್ಳಿಯ ನಾಟಕ, ತಮಾಶಾ, ಹಾಡುಗಾರಿಕೆಗಳು ಗಡೀಪಾರು ಆಗುತ್ತಿತ್ತು. ಜಾತ್ರೆ ಎಲ್ಲ ಕಲೆಗಳ ಸಮಾರಾಧನೆ, ಎಲ್ಲ ಕಲೆಗಳಿಗೆ ಚೈತನ್ಯದಾಯಿ, ಕೆಲವೊಮ್ಮೆ ಸಂಘಟಕರು ಪ್ರತ್ಯಕ್ಷವಾಗಿ ಪ್ರೋತ್ಸಾಹ ಕೊಡಬಹುದು. ಧರ್ಮಸ್ಥಳ ಕ್ಷೇತ್ರದ ಲಕ್ಷ ದೀಪೋತ್ಸವದಲ್ಲಿ ನಡೆಯುವ ಸರ್ವಧರ್ಮ ಮತ್ತು ಸಾಹಿತ್ಯ ಸಮ್ಮೇಳನಗಳು. ಇದಕ್ಕೆ ಒಂದು ಒಳ್ಳೆಯ ಉದಾಹರಣೆ. ಇಂಥ ಹೇರಳ ಉದಾಹರಣೆಗಳುಂಟು. ಕೆಲವೊಮ್ಮೆ ಇಂಥ ಪ್ರವರ್ತಕರಿಲ್ಲದೆಯೂ ಸಾರ್ವಜನಿಕರಿಂದ ಆಶ್ರಯ–ಪ್ರೋತ್ಸಾಹ ಸಿಗಬಹುದು.'

"ಧರ್ಮ ಅರ್ಥಗಳಂತೆ 'ಕಾಮ'ವೂ ನಮ್ಮವರ ಒಂದು ಮೌಲ್ಯ ಒಂದು ಪುರುಷಾರ್ಥ ಕಾಮವೆಂದರೆ ಕೇವಲ ಲೈಂಗಿಕ ತೃಪ್ತಿ ಅಥವಾ ದಾಂಪತ್ಯ ಸುಖ ಅಲ್ಲ. ಇಂದ್ರಿಯಗಳಿಗೆ ಸುಖ ಕೊಡುವುದೆಲ್ಲವೂ ಕಾಮ, ಸಂಗೀತ, ನೃತ್ಯ, ನಾಟಕ ಅಲಂಕಾರ, ದೃಶ್ಯಗಳೆಲ್ಲವೂ ಅದರ ಅಂಗ, ಜಾತ್ರೆಗಳು ಮನರಂಜನೆ ಒದಗಿಸುವ ಬಗ್ಗೆ ಈಗಾಗಲೇ ಹೇಳಿದ್ದೇವೆ. ಇನ್ನು ಹೆಣ್ಣು–ಗಂಡುಗಳ ಪ್ರೇಮ ಕಾಮಗಳನ್ನು ಅದು ಹೇಗೆ ತೃಪ್ತಿ ಪಡಿಸುತ್ತದೆ ಎಂಬ ಬಗೆಗೂ ಸ್ವಲ್ಪ ಹೇಳಬಹುದು. ಜಾತ್ರೆಗಳು ಯೌವನದಲ್ಲಿರುವ ಹೆಣ್ಣು–ಗಂಡುಗಳು ಪರಸ್ಪರ ಸಂಧಿಸಲು ಒಳ್ಳೆಯ ಅವಕಾಶ ಕಲ್ಪಿಸಿ ಕೊಡುತ್ತವೆ."[೨೭] ಪಾಲಕರ ನಿತ್ಯದ ಬಿಗುವು ಜಾತ್ರೆಯ ಮಟ್ಟಿಗಾದರೂ ಕಡಿಮೆಯಾದಾಗ ಅವರ ಸಲುಗೆ ಹೆಚ್ಚುತ್ತದೆ. ಇಲ್ಲಿ ಎಷ್ಟೋ ಯುವತಿ–ಯುವಕರು ಪರಸ್ಪರ ಮೆಚ್ಚಿಕೊಂಡು ತಮ್ಮ ತಮ್ಮವರಿಗೆ ಇದರ ಸುಳುಹು ಕೊಡುತ್ತಾರೆ. ಇದು ಮುಂದೆ ಅವರ ದಾಂಪತ್ಯಕ್ಕೆ ದಾರಿಮಾಡಿಕೊಡುತ್ತದೆ.

ಇನ್ನು ಜಾನಪದ ಸಂದರ್ಭದಲ್ಲಿ 'ಮೋಕ್ಷ'ದ ಬಗ್ಗೆ ಹೇಳುವುದು ಉತ್ಪ್ರೇಕ್ಷೆಯಾಗಬಹುದು. ಈಗಿನ ಜಾತ್ರೆಯಲ್ಲ. ಆದರೆ ಆಗಿನ ಯಾತ್ರೆಗಳು ಮೋಕ್ಷದಾಯಕ ಎಂಬ ಭಾವನೆ ಪ್ರಚಲಿತವಾಗಿತ್ತು. 'ಹಿಂದೂ ಆಗಿ ಹುಟ್ಟಿದವನು ತನ್ನ ಆಯುಷ್ಯದಲ್ಲಿ ಒಂದಾದರೂ ಯಾತ್ರೆಗೆ ಹೋಗಬೇಕು, ಮುಸಲ್ಮಾನನು ದೂರದ ಹಜ್ ಯಾತ್ರೆಗೆ ಹೋಗಲಾದಿದ್ದರೆ ಹತ್ತಿರದ ಉರುಸ್‌ಗೆ ಹೋಗಬೇಕು. ಯಾತ್ರೆಯಂತೆ ಜಾತ್ರೆಯೂ ಪುಣ್ಯ

ಸಂಚಯಕ್ಕೆ ದಾರಿ ಎಂಬುದು ಜನರ ನಂಬಿಕೆ. ಜೈನರಲ್ಲೂ ಇಂಥ ನಂಬಿಕೆಗಳಿವೆ. ಹಿಂದೂಗಳಿಗೆ ನಾಲ್ಕು ಧರ್ಮಗಳು, ಮೂರು ಸ್ಥಳಗಳು, ಏಳು ಪುರಗಳು, ಹನ್ನೆರಡು ಜ್ಯೋತಿರ್ಲಿಂಗಗಳು, ಐವತ್ತೆರಡು ಶಕ್ತಿ ಪೀಠಗಳಿವೆ. ಇವು ಮುಖ್ಯವಾಗಿ ಶಿಷ್ಟರಿಗೆ ಸಂಬಂಧಿಸಿದ್ದರೆ ಗ್ರಾಮೀಣರಿಗೆ ಗ್ರಾಮ ದೇವತೆಗಳ ಜಾತ್ರೆಗಳುಂಟು, ಮೋಕ್ಷದ ಸಂಪೂರ್ಣ ಕಲ್ಪನೆ ಅವರಿಗೆ ಇರಲಿ ಬಿಡಲಿ, ತಾವು ಕಣ್ಣು ಮುಚ್ಚುವ ಮೊದಲು ಒಂದಾದರೂ ಜಾತ್ರೆಯನ್ನು ನೋಡಬೇಕೆಂದು ಅವರು ಬಯಸುತ್ತಾರೆ. ದುಡ್ಡು ದುಗ್ಗಾಣಿಗಳನ್ನು ಸೇರಿಸಿ ದೇವರ ಗಂಟು, ಕೂಡಿಸಿಕೊಂಡು ಜಾತ್ರೆಗೆ ಹೋಗಿ ಕಾಣಿಕೆ ಒಪ್ಪಿಸಿ ಬರುತ್ತಾರೆ.

ಹೀಗೆ ಜಾತ್ರೆ ಒಂದು ಸಂಪ್ರದಾಯವಾಗಿ ಬೆಳೆದುಬಂದಿದೆ. ಸಂಪ್ರದಾಯವು ಜನ ರೂಢಿಯಲ್ಲಿರುವ ವಿಶಿಷ್ಟವಾದ ಆಚರಣೆ. ಅದು ಇಂದು ಹುಟ್ಟಿ ಬೆಳೆದುಬಂದುದಲ್ಲ. ಅದರ ಬೇರುಗಳು ಜನಾಂಗದ ರಕ್ತದಲ್ಲಿ ಸೇರಿಹೋಗಿದೆ. ಒಮ್ಮೊಮ್ಮೆ ಜನರು ಧರ್ಮವನ್ನು ಮರೆಯಬಹುದು. ಆದರೆ ಸಂಪ್ರದಾಯವನ್ನುಮರೆಯುವುದು ಕಷ್ಟವಾಗುತ್ತದೆ. ಇನ್ನೊಂದು ವಿಶೇಷವೆಂದರೆ ಜಾತ್ರೆಗಳು ಇಂದು ಸಾಮಾಜಿಕ ಭಾವೈಕ್ಯದ ಸಂಕೇತಳಾಗಿವೆ.ಇದರೊಂದಿಗೆ ಜಾತ್ರೆಗಳು ಸಾಮಾಜಿಕ ತಿಳುವಳಿಕೆಯನ್ನುನೀಡುವಲ್ಲಿ ಯಶಸ್ವಿಯಾಗುತ್ತಿದೆ. ಅಲ್ಲದೆ ಆರೋಗ್ಯ ನೀತಿ, ಮನೆ ಮತ್ತು ಗ್ರಾಮದ ಸ್ವಚ್ಚತೆ, ಮಕ್ಕಳ ಪೋಷಣೆ, ಸಾಂಕ್ರಾಮಿಕ ರೋಗಗಳು ಹಬ್ಬದಂತೆ ಮುನ್ನೆಚ್ಚರಿಕೆ, ಹೊಸ ವೈಜ್ಞಾನಿಕ ಬೇಸಾಯ ಪದ್ಧತಿ, ಇವುಗಳನ್ನು ತನ್ನೋಳಗೆ ಅಳವಡಿಸಿಕೊಂಡು ಇಂದು ಜಾತ್ರೆ ಬೆಳೆಯುತ್ತಿದೆ. ಕುಸ್ತಿ ಕಸರತ್ತುಗಳನ್ನು, ಜಾನುವಾರು ಪ್ರದರ್ಶನಗಳನ್ನು, ರಸಗೊಬ್ಬರಗಳ ಬಳಕೆಯನ್ನು, ಉತ್ತಮ ಹಣ್ಣು ತರಕಾರಿಗಳನ್ನು ಬೆಳೆಸುವ ವಿಷಯಗಳನ್ನು ಗುಡಿ ಕೈಗಾರಿಕೆಗಳನ್ನು, ಹೀಗೆ ಅನೇಕ ವಿಷಯಗಳನ್ನು ಪ್ರೋತ್ಸಾಹಿಸುತ್ತಾ ಅಧುನೀಕತೆಗೆ ಹೊಂದಿಕೊಂಡು, ತನ್ನ ಅಸ್ತಿತ್ವವನ್ನು ಉಳಿಸಿಕೊಂಡು ಬರುತ್ತಿದೆ. ಈ ಹಿನ್ನೆಲೆಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಜಾತ್ರೆಗಳನ್ನು ಗಮನಿಸಬಹುದು.

ಜಾತ್ರೆಗಳು ಈ ಜಾತ್ರೆಯಲ್ಲಿ ದೈವ ಹಾಗೂ ಧರ್ಮ ಸಂಬಂಧಿ ಆಚರಣೆಗಳು ಮುಖ್ಯ. ಈ ದೈವ ಸಂಬಂಧವಾದ ಆಚರಣೆಗಳು ಧಾರ್ಮಿಕವಾಗಿ ಅನುಷ್ಠಾನಗೊಳ್ಳಬೇಕು. ಇದರಿಂದ ಸಾಮಾಜಿಕ, ರಾಜಕೀಯ ಬಾಂಧವ್ಯಗಳು ಉತ್ತಮಗೊಳ್ಳುತ್ತವೆ. ಅನೇಕ ಮಂದಿ ಒಟ್ಟಿಗೆ ಒಂದೆಡೆ ಕಲೆತು ವಿಚಾರ ವಿನಿಮಯ ನಡೆಸಲು ಸುಖ, ದುಃಖಗಳನ್ನು ಹಂಚಿಕೊಳ್ಳಲು ಈ ಜಾತ್ರೆ ಒಂದು ಸಾಧನ. ಹೀಗೆ ಸೇರುವುದರಿಂದ ಅನ್ಯರ ಧರ್ಮ ಹಾಗೂ ಆಚರಣೆಗಳ ಅರಿವು ಇತರರಿಗೂ ಆಗುವುದಿಲ್ಲದೆ, ಎರಡು ಮತದವರ ನಡುವೆ ಬಾಂದವ್ಯ ಏರ್ಪಡಿಸಲು

ಕಾರಣವೂ ಆಗುತ್ತದೆ. ಅದಲ್ಲದೆ ಸಾಂಘಿಕವಾಗಿ ನಡೆಸುವ ಹಬ್ಬ ಆಚರಣೆಗಳು ಗ್ರಾಮ, ಊರುಗಳಿಗೆ ವಿಶಿಷ್ಟವಾದ್ದರಿಂದ ಅವುಗಳಿಗೆ ಸ್ಥಳೀಯ ಮಹತ್ವವಿದೆ.

"ಆಚರಣೆಗಳು ಹಾಗೂ ನಂಬಿಕೆಗಳು ಮನುಷ್ಯನ ದಿನನಿತ್ಯದ ಬದುಕಿನ ಎರಡು ಮುಖಗಳು. ನಂಬಿಕೆ ಮಾತಿನ ಮೂಲಕ ವ್ಯಕ್ತಿಗೆ ಸ್ಫೂರ್ತಿ ನೀಡಿದರೆ, ಆಚರಣೆಗಳು ಕ್ರಿಯೆಯ ಮೂಲಕ ಆತನಿಂದ ವಿಶಿಷ್ಟ ಸ್ಥಾನವನ್ನು ಪಡೆದುಕೊಳ್ಳುತ್ತದೆ. ಯಾವುದೇ ದೇಶದ, ಜನಾಂಗದ, ಸಂಸ್ಕೃತಿಯ ಪೋಷಣೆಗೆ ನಾಗರೀಕತೆಯ ಬೆಳವಣಿಗೆಗೆ ಇವೆರಡೂ ಮುಖ್ಯ ಅಂಗಗಳಾಗಿವೆ.

ಒಟ್ಟಿನಲ್ಲಿ ಅಗೋಚರವಾದ ಶಕ್ತಿಗಳನ್ನು ವಶಪಡಿಸಿಕೊಳ್ಳಲು ಅವುಗಳ ಕ್ರೂರ ದೃಷ್ಟಿಯಿಂದ ಪಾರಾಗಲು ಆಚರಣೆಗಳಲ್ಲಿ ನಂಬಿಕೆ ಇಟ್ಟಿದ್ದಾನೆ. ಸಮಾಜದ ಎಲ್ಲಾ ಸ್ತರಗಳಲ್ಲೂ ನಂಬಿಕೆ ಹಾಗೂ ಆಚರಣೆಗಳು ಅಸ್ತಿತ್ವದಲ್ಲಿವೆ. ಇವು ಜೀವನದಷ್ಟೇ ಜಟಿಲವೂ ಸಂಕೀರ್ಣವೂ ಆಗಿದ್ದು ಹೀಗೆ ಎಂದು ಸಮರ್ಪಕವಾಗಿ ಹೇಳಲಾಗುವುದಿಲ್ಲ. ಆಯಾ ಕಾಲಕ್ಕೆ ಆಯಾ ದೇಶದ ಜನರಿಗೆ ಭಿನ್ನ ಸ್ವರೂಪದಿಂದ ಕೂಡಿದ್ದ, ವಿಭಿನ್ನ ರೀತಿಯಲ್ಲಿ ಆಚರಿಸಲ್ಪಡುತ್ತದೆ. "ಆಚರಣೆಗಳಲ್ಲಿ ಕೆಲವು ನೈತಿಕವಾಗಿ, ಕೆಲವು ಶಾಸ್ತ್ರೋಕ್ತವಾಗಿ ಮತ್ತೆ ಕೆಲವು ಮೂಢನಂಬಿಕೆಗಳ ಆಧಾರದ ಮೇಲೆ ಬೆಳೆದುಬಂದಿದೆ. ಇವುಗಳ ಸ್ತೂಲವಾದ ಅಧ್ಯಯನಕ್ಕಾಗಿ ನಾಲ್ಕು ಭಾಗಗಳನ್ನು ಮಾಡಿಕೊಳ್ಳಬಹುದು.

೧. ರೋಗ ನಿವಾರಕ ಆಚರಣೆಗಳು

೨. ಮಳೆ, ಬೆಳೆ, ಭೂಮಿಗಳಿಗೆ ಸಂಬಂಧಿಸಿದ ಆಚರಣೆಗಳು

೩. ಹಬ್ಬ, ಜಾತ್ರೆ, ಉತ್ಸವ, ತೇರುಗಳಿಗೆ ಸಂಬಂಧಿಸಿದ ಆಚರಣೆಗಳು

೪. ಇನ್ನೂ ಕೆಲವು ವಿಶಿಷ್ಟ ಆಚರಣೆಗಳು

ಹೀಗೆ ಸ್ಥೂಲವಾದ ಅಧ್ಯಯನವನ್ನು ಕೈಗೊಳ್ಳುವುದಿಂದ ಸಮಗ್ರವಾಗಿ ಎಲ್ಲಾ ಬಗೆಯ ಆಚರಣೆಗಳನ್ನು ಪರಿಶೀಲಿಸಿದಂತೆ ಆಗುತ್ತದೆ.

ಹೀಗೆ ಆಚರಣೆಗಳ ಬಗ್ಗೆ ಹೇಳಿದಷ್ಟು ಸಾಲದು. ಮಾನವ ಜನನದಿಂದ ಮರಣದವರೆಗೆ ಅನೇಕ ಆಚರಣೆಯ ವಿಧಾನಗಳನ್ನು ಅನುಸರಿಸುವುದನ್ನು ಕಾಣಬಹುದು. ಎಲ್ಲಾ ಜನಾಂಗಗಳಲ್ಲಿ ಈ ಆಚರಣೆಗಳು ಅಲ್ಪ ಸ್ವಲ್ಪ ವ್ಯತ್ಯಾಸಗಳೊಂದಿಗೆ ಕಂಡುಬರುತ್ತದೆ. ಗ್ರಾಮೀಣ ಪ್ರದೇಶಗಳಲ್ಲಿ ಹಬ್ಬಗಳು ಮತ್ತು ಜಾತ್ರೆಗಳು ಒಟ್ಟೊಟ್ಟಿಗೆ ನಡೆಯುತ್ತವೆ. ಹಬ್ಬ ಹಾಗೂ ಜಾತ್ರೆ ಪ್ರತ್ಯೇಕವೆನಿಸುವುದಿಲ್ಲ. ಊರಮ್ಮನ ಜಾತ್ರೆ ಯುಗಾದಿ ಆಸುಪಾಸಿನಲ್ಲಿ ಬರುತ್ತದೆ. ಹೀಗೆ ಆಚರಣೆಗಳು ಒಟ್ಟಿಗೆ ಹಬ್ಬ, ಜಾತ್ರೆಗಳಲ್ಲಿ ತಲೆದೋರುತ್ತವೆ. ಆದಕಾರಣ ಇವುಗಳನ್ನು ಬೇರೆ

ಬೇರೆ ಎಂದು ಪರಿಗಣಿಸುವುದು ಕಷ್ಟದ ಕೆಲಸ. "ಜಾತ್ರೆಗಳ ತಾಯಿ ಬೇರು ಭೂತಕಾಲದ ಗರ್ಭದಲ್ಲಿ ಹೊತ್ತುಕೊಂಡಿದ್ದರೂ ಅವು ಆದಿ ಮಾನವನ ಕಾಲದಿಂದಲೇ ಧಾರ್ಮಿಕ ಆಚರಣೆಗಳ ಒಂದು ಪ್ರಮುಖ ಭಾಗವಾಗಿ ರೂಢಿಯಲ್ಲಿದ್ದಿರಬೇಕೆಂದು ತೋರುತ್ತದೆ"

ಜಾತ್ರೆಗಳು, ದ್ರಾವಿಡ ಸಾಂಸ್ಕೃತಿಕ ವೈಶಿಷ್ಟ್ಯ ಹಬ್ಬಗಳು ಪ್ರಮುಖವಾಗಿ ಪ್ರತಿ ಜನಪದ ಕುಲದೇವತೆಯ ಆರಾಧನೆಯಾಗಿದ್ದು ಅದು ಕೌಟುಂಬಿಕ ವಲಯಕ್ಕೆ ಸೀಮಿತವಾಗುವಂತಹದು. ಹಬ್ಬಗಳು ಕಡ್ಡಾಯ ಮತ್ತು ನಿಯಮಿತವಾಗಿರುವಂತೆ ಜಾತ್ರೆಗಳಿರುವುದಿಲ್ಲ. ಇದೂ ಸಹ ವಲಸೆಗಾರರ ಅನಿಶ್ಚಿತ ಬದುಕಿಗೆ ಸಹಜವಾದ ಸ್ಥಿತಿ, ಜಾತ್ರೆಗಳನ್ನು ಬೇಕೆಂದರೆ ಹಲವಾರು ವರ್ಷ ಮುಂದೂಡಲು ಸಾಧ್ಯ. ಅಂದರೆ ಕೆಲವು ಜಾತ್ರೆಗಳು ನಿಯಮಿತವಾಗಿದ್ದರೂ ಸಹಾ ಬೇಕೆಂದಾಗ ನಡೆಸಿಕೊಂಡು ಹೋಗುವ ಲಕ್ಷಣದಿಂದ ಹೊರತಾಗಿಲ್ಲ. ಆದರೆ ಹಬ್ಬಗಳು ಹಾಗಲ್ಲ. ಅವು ಸ್ಥಿರವಾಗಿ ನಡೆದುಕೊಂಡು ಹೋಗುವ ಮೂಲಕ ತಮ್ಮ ಸ್ಥಿರತೆಯನ್ನು ಕಾಯ್ದುಕೊಂಡಿವೆ.

ಒಟ್ಟಿನಲ್ಲಿ ಪ್ರತಿಯೊಂದು ಆಚರಣೆಯ ಉದ್ದೇಶ ಭಿನ್ನವಾಗಿರುತ್ತದೆ. "ವೈಯಕ್ತಿಕ ಕಾರಣಗಳನ್ನು ಮೊದಲುಗೊಂಡು ಮಳೆ, ಬೆಳೆಗಳಿಗಾಗಿ ನಡೆಸುವ ಈ ಆಚರಣೆಗಳಲ್ಲಿ ಊರುಕೇರಿಯ ಒಳಿತಿಗೆ ಸಂಬಂಧಿಸಿದ ಧ್ಯೇಯೋದ್ದೇಶಗಳಿವೆ. ಪ್ರಾದೇಶಿಕವಾಗಿ ಆಚರಣೆಗಳು ಭಿನ್ನವಾಗಿದ್ದರೂ ಉದ್ದೇಶ ಒಂದೇ. ಪ್ರತಿಯೊಂದು ಆಚರಣೆಯೂ ಸಾಂಕೇತಿಕವಾದ ಅರ್ಥವನ್ನು ಹೊಂದಿರುತ್ತದೆ. ಸಂಸ್ಕೃತಿ ಭಿನ್ನವಾದರೂ ಭಾಷೆ ಭಿನ್ನವಾದರೂ ಆಚರಣೆಗಳು ಮಹತ್ವ ಇಂದಿಗೂ ಪ್ರಸ್ತುತವಾಗಿದೆ. ಈ ಆಚರಣೆಗಳು ಹಲವಾರು ಕಾರಣಗಳಿಂದ ಬೇಸಿಗೆ ಕಾಲದ ಏಪ್ರಿಲ್ ಹಾಗೂ ಮೇ ತಿಂಗಳಲ್ಲಿ ನೆರವೇರುತ್ತದೆ. ಈ ತಿಂಗಳು ಹಬ್ಬ ಹಾಗೂ ಜಾತ್ರೆಗಳಿಗೆ ಪ್ರಶಸ್ತವಾಗಿದ್ದು."[೨೮] ಬಹುತೇಕ ಆಚರಣೆಗಳು ಹುಣ್ಣಿಮೆಯ ರಾತ್ರಿಯಲ್ಲಿ ನಡೆಸಲ್ಪಡುತ್ತವೆ. ಹುಣ್ಣಿಮೆ ರಾತ್ರಿ ಆಚರಣೆಗಳಿಗೆ ಪ್ರಶಸ್ತಕಾಲ. ಬೆಳದಿಂಗಳು ಸುಖ, ಸಮೃದ್ಧಿ, ಶಾಂತಿಯ ಸಂಕೇತವಾಗಿದೆ. ಹಳ್ಳಿಯ ಜನ ಸುಗ್ಗಿಯಾಚರಿಸುವ ಕಾಲವಿದು, ವರ್ಷವೆಲ್ಲ ದುಡಿದು, ಫಸಲನ್ನು ಪಡೆದ ಶ್ರಮಿಕ ತನ್ನ ಶ್ರಮದಾನ ಇಂಗಿಸಿಕೊಳ್ಳಲು ನಡೆಸುವ ಆಚರಣೆಗಳಲ್ಲಿ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಆಚರಣೆಗಳೇ ಹೆಚ್ಚು. ಇವು ಸಂಸ್ಕೃತಿಯನ್ನು ಬಿಂಬಿಸುವ ಜೊತೆಗೆ ಮನೋಲ್ಲಾಸವನ್ನು ನೀಡುತ್ತ ಬಂದಿದೆ. ದೇವರ ಸ್ಮರಣೆಯ ಜೊತೆ ಜೊತೆಗೆ ಬಂಧುಬಾಂಧವರ ಸಾಮೀಪ್ಯವೂ ಒದಗಿಸುತ್ತದೆ. ಈ ಹಬ್ಬ ಹಾಗೂ ಆಚರಣೆಗಳು ನಿಗದಿತ ಸಮಯದಲ್ಲಿ ಆಚರಿಸಲ್ಪಡುತ್ತವೆ. ಇವುಗಳಲ್ಲಿ ಸ್ತ್ರೀ ಸಂಬಂಧಿ ಆಚರಣೆಗಳೇ

ಹೆಚ್ಚಾಗಿದ್ದು, ಇವು ಲಾಭದಾಯಕವೂ ತೃಪ್ತಿಕರವೂ ಆಗಿರುತ್ತದೆ. ಜೊತೆಗೆ ಮಕ್ಕಳ ಭಾಗವಹಿಸುವಿಕೆಯೂ ಹೆಚ್ಚಾಗ್ಗಿರುತ್ತದೆ.

ಈ ಆಚರಣೆಗಳಿಂದ ಮಾನಸಿಕ ತೃಪ್ತಿ ದೊರಕುವುದಲ್ಲದೆ ಇಡೀ ವರ್ಷ ದಣಿದ ಮನಗಳಿಗೆ ಸುಗ್ಗಿಯ ಕಾಲ ಇದಾಗಿದೆ. ಸ್ತ್ರೀ–ಪುರುಷರು ಸಂತೃಪ್ತಿಯಿಂದ ಕೂಡಿ ನಲಿದು ಈ ಆಚರಣೆಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಳ್ಳುತ್ತಾರೆ. ಹೀಗೆ ಆಚರಣೆಗಳು ಮಾನವನ ಮಾನಸಿಕ, ಭೌತಿಕ ಅಗತ್ಯವಾಗಿ ಬೆಳೆದು ಉಳಿದುಕೊಂಡಿದೆ. ಹಾಗೂ ದೇವತೆಗಳ ಪ್ರತಿಷ್ಠೆಯನ್ನು ಹೆಚ್ಚಿಸುವುದರಲ್ಲಿ ಶ್ರೇಷ್ಠ ಪಾತ್ರವಹಿಸುತ್ತಿವೆ.

## ಘಾಟಿ ಸುಬ್ರಮಣ್ಯ ಸ್ವಾಮಿಯ ದನಗಳ ಜಾತ್ರೆ

ಘಾಟಿ ಸುಬ್ರಮಣ್ಯ ಸ್ವಾಮಿಯ ಜನರ ಪರಿಸೆಯು ಧನಗಳ ಜಾತ್ರೆ ನಡೆದ ಒಂದು ತಿಂಗಳಿಗೆ ನಡೆಯುತ್ತದೆ. ಈ ಜಾತ್ರೆ ವಿಶೇಷವೆಂದರೆ ಆ ಜಾತ್ರೆಯಲ್ಲಿ ಕೊಂಡ ಧನಗಳನ್ನು ಎತ್ತಿನಗಾಡಿ ಕಟ್ಟಿಕೊಂಡು ಕುಟುಂಬದ ಸದಸ್ಯರೆಲ್ಲರೂ ಜಾತ್ರೆಗೆ ಹೋಗಿ ಅಲ್ಲಿಯೇ ಆಹಾರವನ್ನು ಬೇಯಿಸಿ ತಿಂದು ದೇವರ ದರ್ಶನ ಮಾಡಿ ಸಂಜೆ ಊರಿಗೆ ವಾಪಸ್ಸು ಆಗುವ ಪದ್ಧತಿ ಇದೆ. ಈ ಜಾತ್ರೆಯ ದಿನ ಹೆಂಗಸರು ಉಪವಾಸವನ್ನು ಮಾಡಿ ದೇವರ ದರ್ಶನವನ್ನು ಪಡೆದು ಹುತ್ತಕ್ಕೆ ಹಾಲನ್ನು ಏರೆದು ತಮ್ಮ ಬೇಡಿಕೆಯನ್ನು ಈಡೇರಿಸುವಂತೆ ದೇವರಲ್ಲಿ ಪ್ರಾರ್ಥಿಸಿಕೊಳ್ಳುತ್ತಾರೆ.

ಆ ದಿನ ೧೨ ಗಂಟೆಗೆ ರಥೋತ್ಸವ ನಡೆಯುತ್ತದೆ ಭಕ್ತರು ಬಾಳೆ ಹಣ್ಣಿಗೆ ದವನವನ್ನು ಚುಚ್ಚಿ ತೇರಿಗೆ ಬಾಳೆಯ ಹಣ್ಣನ್ನು ಎಸೆದು ತನ್ನ ಅರಿಕೆಯನ್ನು ಒಪ್ಪಿಸಿದರೆ ಮತ್ತು ಕೆಲವರು ಕೇಶಮುಂಡನವನ್ನು ಮಾಡಿಸಿಕೊಂಡು ಅರಿಕೆಯನ್ನು ತೀರಿಸುತ್ತಾರೆ. ಈ ಪರಿಸೆಗೆ ಗಾಡಿಯನ್ನು ಕಟ್ಟಿಕೊಂಡು ಬರುವ ಸಂಖ್ಯೆ ಗಣನೀಯವಾಗಿ ಕಡಿಮೆಯಾಗಿದ್ದು ಬಸ್ಸುಗಳು ಮತ್ತುಇತರೇ ವಾಹನಗಳಲ್ಲಿ ಬಂದು ರಥೋತ್ಸವ ಮತ್ತು ದೇವರದರ್ಶನ ಮಾಡಿಕೊಂಡು ಹೋಗುತ್ತಾರೆ. ಇಲ್ಲಿ ಸಾಂಸ್ಕೃತಿಕ ರೀತಿಯಾದ ಪೌರಾಣಿಕ ನಾಟಕಗಳು, ಕಲೆಗಳು ಈ ಜಾತ್ರೆಯಲ್ಲಿ ನಡೆಯುವುದಿಲ್ಲವೆಂದು ಹೇಳುತ್ತಾರೆ.

# ಅಡಿಟಿಪ್ಪಣಿಗಳು

೧. ಡಾ॥ ಕೆ ಸಿದ್ದಲಿಂಗಯ್ಯ ಗ್ರಾಮದೇವತೆಗಳು ಪುಟ ಸಂ ೪೧

೨. ಅದೇ. ಪುಟ ಸಂ ೪೨

೩. ಅದೇ. ಪುಟ ಸಂ ೪೨-೪೩

೪. ಡಾ॥ ಎಸ್.ಎಂ ವೃಷಬೇಂದ್ರ ಸ್ವಾಮೀಜಿ, ಜಾನಪದ ಸಾಹಿತ್ಯ ದರ್ಶನ ಪುಟ ಸಂ ೪೪

೫. ದೇ ಜವರೇಗೌಡ ಜಾನಪದ ಅದ್ಯಾಯನ ಪುಟ ಸಂ ೨೯೩

೬. ಅದೇ. ಪುಟ ಸಂ ೧೦೭

೭. ಸೂರ್ಯನಾಥ್ ಕಾಮತ್ ಬೆಂ ಗ್ರಾ ಜಿ ಗೆಜಿಟಿಯರ್ ಪು ಸಂ ೧೩೦

೮. ದೇ ಜವರೇಗೌಡ ಜಾನಪದ ಅದ್ಯಾಯನ ಪುಟ ಸಂ ೧೦೭

೯. ಎಚ್.ಎಲ್.ನಾಗೇಗೌಡ (ಸಂ) ಕನ್ನಡ ಜಾನಪದ ಕೋಶ ಪುಟ ಸಂ ೫೦

೧೦. ಅದೇ. ಪುಟ ಸಂ ೫೫೧

೧೧. ಅದೇ. ಪುಟ ಸಂ ೬೦೪

೧೨. ಅದೇ. ಪುಟ ಸಂ ೪೩೩

೧೩. ಡಾ॥ ಹಾ.ಮಾ.ನಾಯಕ್ (ಸಂ) ಕರ್ನಾಟಕ ವಿಷಯ ವಿಶ್ವಕೋಶ ಪುಟ ಸಂ ೬೫೫

೧೪. ಡಾ॥ ಹಾ ಮಾ ನಾಯಕ್ (ಸಂ) ಕರ್ನಾಟಕ ವಿಷಯ ವಿಶ್ವಕೋಶ ಪುಟ ಸಂ ೧೫೬೭

೧೫. ಡಾ॥ ಹೆಚ್ ತಿಪ್ಪೇರುದ್ರಸ್ವಾಮಿ (ಸಂ) ಮಲೆನಾಡ ಜಾನಪದ ಪುಟ ಸಂ ೧೩೦

೧೬. ಅದೇ. ಪುಟ ಸಂ ೧೫೯

೧೭. ಅದೇ. ಪುಟ ಸಂ ೧೬೨

೧೮. ಎಸ್.ಎಸ್. ಹೀರೇಮಠ್ ಕರ್ನಾಟಕ ದಲಿತ ಸಂಸ್ಕೃತಿ ಪರಂಪರೆ ಭಾಗ–೨ ಜಾತ್ರೆಗಳು ಪುಟ ಸಂಖ್ಯೆ ೭೧

೧೯. ಡಾ॥ ಸಿದ್ದಲಿಂಗಯ್ಯ ಗ್ರಾಮದೇವತೆಗಳು ಪುಟ ಸಂ ೭೧

೨೦. ಅದೇ. ಪುಟ ಸಂ ೭೧

೨೧. ಕೆ.ಲಕ್ಷ್ಮಣ ತಿಗಳ ಜಾತಿಯ ಜನಾಂಗದ ಇತಿಹಾಸ ಮತ್ತು ಶಕ್ತ್ಯೋತ್ಸವ ಪುಟ ಸಂ ೫೫

೨೨. ಅದೇ. ಪುಟ ೫೬

೨೩. ಅದೇ. ಪುಟ ೧೪

೨೪. ಡಾ॥ ಹೆಚ್ ತಿಪ್ಪರುದ್ರಸ್ವಾಮಿ (ಸಂ) ಮಲೆನಾಡ ಜಾನಪದ ಪುಟ ಸಂ ೧೯೭

೨೫. ಡಾ॥ ಹಾ ಮಾ ನಾಯಕ್ (ಸಂ) ಕರ್ನಾಟಕ ವಿಷಯ ವಿಶ್ವಕೋಶ ಪುಟ ಸಂ ೬೩೫

೨೬. ಡಾ॥ ಹಾ ಮಾ ನಾಯಕ್ (ಸಂ) ಕರ್ನಾಟಕ ವಿಷಯ ವಿಶ್ವಕೋಶ ಪುಟ ಸಂ ೬೩೫

೨೭. ಸೂರ್ಯನಾಥ್ ಕಾಮತ್ ಬೆಂಗಳೂರು ಗ್ರಾ ಜಿಲ್ಲಾ ಗೆಜಿಟಿಯರ್ ಪುಟ ಸಂ ೮೪೪

೨೮. ಅದೇ. ಪುಟ ಸಂ ೮೪

## ಅಧ್ಯಾಯ-೫

## ಸ್ಥಳ ಪ್ರಧಾನ ಐತಿಹ್ಯಗಳು

ನಮ್ಮ ಭಾರತದೇಶದ ಪ್ರತಿಯೊಂದು ಸ್ಥಳಕ್ಕೂ ಒಂದೊಂದು ಇತಿಹಾಸವಿರುತ್ತದೆ ಅದರಂತೆಯೇ ಅದಕ್ಕೆ ಅನುಗುಣವಾಗಿ ಐತಿಹ್ಯವೂ ಇರುತ್ತದೆ. ಒಂದೊಂದು ಸ್ಥಳಕ್ಕೂ ಅದರದ್ದೇ ಆದ ಮಹತ್ವವನ್ನು ಪಡೆದುಕೊಂಡಿರುತ್ತದೆ.

ಸ್ಥಳ ಪ್ರಧಾನ ಐತಿಹ್ಯಗಳು ಆಯಾ ಪ್ರದೇಶದ ಸಂಸ್ಕೃತ ಮತ್ತು ನಾಗರೀಕತೆಯ ಜೀವಂತ ಪಳೆಯುಳಿಕೆಗಳಿಂದ ಹೇಳಬಹುದು. ಆಯಾ ಪ್ರದೇಶದಲ್ಲಿ ಆಗಿಂದಾಗ್ಗೆ ನಡೆದಿರುವ ಚಾರಿತ್ರಿಕ ಭೌಗೋಳಿಕ ಸಾಮಾಜಿಕ ಹಾಗೂ ಸಾಂಸ್ಕೃತಿಕ ಬದಲಾವಣೆಗಳನ್ನು ನಾವು ಕಾಣಬಹುದಾಗಿದೆ. ಒಂದು ಸ್ಥಳಕ್ಕೆ ನಾನಾರ್ಥಗಳು ಮಾಡಿ ಐತಿಹ್ಯವಾಗಲುಬಹುದು.

ಸ್ಥಳ ಪ್ರಧಾನ ಐತಿಹ್ಯಗಳಲ್ಲಿ ಪ್ರಧಾನವಾಗಿ ವ್ಯಕ್ತಿಗಳಿಗಿಂತ ಸ್ಥಳಕ್ಕೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಲಾಗುತ್ತದೆ. ಸ್ಥಳದ ವಿಶಿಷ್ಟತೆ ಅಥವಾ ಅಸಾಮಾನ್ಯತ್ವವೇ ಐತಿಹ್ಯಗಳಿಗೆ ತಳಹದಿಯಾಗಿ ಕೆಲಸ ಮಾಡುತ್ತದೆ. ಒಂದು ಸ್ಥಳಕ್ಕೆ ಇರುವ ಹೆಸರಿನ ಉತ್ಪತ್ತಿಯನ್ನು ಇಂಥ ಐತಿಹ್ಯಗಳಿಗೆ ನಿದರ್ಶನವಾಗಿದೆ.

ಕರ್ನಾಟಕದ ಬಯಲು ಸೀಮೆಯ ಇತರ ಪ್ರದೇಶಗಳಂತೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಸ್ಥಳ ಪ್ರಧಾನ ಐತಿಹ್ಯಗಳಾದ ಆವತಿ, ಶಿವಗಂಗೆ, ಕೊಯಿರಾ, ಸೂಳೆಬಂಡೆ, ಶ್ರೀರಾಮನಹಳ್ಳಿ, ಉಪವಾಸಪುರ, ಕಾವಲುಗುಡ್ಡ, ಇನ್ನೂ ಮುಂತಾದವನ್ನು ಸ್ಥಳ ಪ್ರಧಾನ ಐತಿಹ್ಯಗಳನ್ನು ವಿಶ್ಲೇಷಣೆಗೆ ಒಳಪಡಿಸಿದ್ದೇನೆ.

### ಆವತಿಯ ಐತಿಹ್ಯ

ನೇಗಿಲು ಹಿಡಿದ ಕೈಗಳಲ್ಲೆ ಖಡ್ಗ ಹಿಡಿದು ದಕ್ಷ ಆಡಳಿತಗಾರರಾಗಿ ಒಕ್ಕಲಿಗರು ಪ್ರಜಾಪಾಲನೆ ಮಾಡಲು ಬೀಜಾಂಕುರವಾದ ಕರ್ಮಭೂಮಿ ಆವತಿ ಎಂಬ ಪುಟ್ಟಹಳ್ಳಿ ಬೆಂಗಳೂರು ಬಳ್ಳಾರಿ ರಾಷ್ಟ್ರೀಯ ಹೆದ್ದಾರಿಯ ಏಳರ ಪಕ್ಕದಲ್ಲೇ ಕಣ್ಣಿಗೆ ಬೀಳುತ್ತದೆ. ಬೆಂಗಳೂರು ನಿರ್ಮಾಪಕ ಹಿರಿಯಕೆಂಪೇಗೌಡನ ಪೂರ್ವಜರು ನೆಲೆಯೂರಿದ್ದ ಈ ಊರು ರಾಜಧಾನಿಯಿಂದ ಕೆಲವೇ ಕಿಲೋಮೀಟರ್‌ಗಳು ದೂರದಲ್ಲಿದೆ. ಆದರೆ ಇದರ ಐತಿಹಾಸಿಕ ದೊಡ್ಡಸ್ತಿಕೆ ಗೌಣವಾಗಿಯೇ ಉಳಿದು ಯಾವುದೇ ರಚನಾತ್ಮಕ ಸವಲತ್ತುಗಳಿಗೆ ಭಾಜನವಾಗದೆ ಈಗಲು ಕುಗ್ರಾಮವಾಗಿಯೆ ಮುಂದುವರೆದಿರುವುದು ಮಾತ್ರ ಸೋಜಿಗದ ಸಂಗತಿ.

ನಂದಿಗಿರಿಯಲ್ಲಿ ಉಗಮಿಸುವ ಪಾಲರ್ ನದಿ ಪೂರ್ವಾಭಿಮುಖವಾಗಿ ಪ್ರವಹಿಸಿ ಕೋಲಾರ ಜಿಲ್ಲೆಯ ಬೇತಮಂಗಲ, ರಾಮಸಾಗರ ಕೆರೆಗಳ ಮೂಲಕ ತಮಿಳುನಾಡಿನ ಆರ್ಕಾಟ್ ಜಿಲ್ಲೆಯನ್ನು ಪ್ರವೇಶಿಸಿ ಕೊನೆಗೆ ಬಂಗಾಳಕೊಲ್ಲಿಯಲ್ಲಿ ಸಂಗಮಿಸುತ್ತದೆ. ಸಾಹಸಿಗಳು ಪ್ರವಾಹದ ವಿರುದ್ದ ಸೆಣಸಿ ಜಯಿಸುತ್ತಾರೆ ಎಂಬ ಪುರುಷೋಕ್ತಿಗೆ ಪೂರಕವಾಗಿ ಕಂಚಿಯ ಯಣಮಂಜಿ ಪುತ್ತೂರಿನಲ್ಲಿ ನೆಲೆಸಿದ್ದ ರಣಭೈರೇಗೌಡ ಮತ್ತವನ ಸಹೋದರರು ಪರಿವಾರ ಸಮೇತ ಈ ನದಿಯ ವಿರುದ್ಧ ದಿಕ್ಕಿನಲ್ಲಿ ಪಶ್ಚಿಮದ ನಾಡಿಗೆ ವಲಸೆ ಹೊರಡುತ್ತಾರೆ. ತಮ್ಮ ವಂಶದ ಕುಡಿ ಏಕಮಾತ್ರ ಪುತ್ರಿ ದೊಡ್ಡಮ್ಮನನ್ನು ಆ ಪ್ರಾಂತದ ಪಾಳೆಯಗಾರ ಸೆಲ್ವಾನಾಯಕನು ಬಯಸಿದಾಗ ಆ ಆಘಾತದಿಂದ ತುರ್ತಾಗಿ ಪಾರಾಗಲು ರಾತ್ರೋರಾತ್ರಿ ಬಂಧುಬಳಗವನ್ನೆಲ್ಲ ಬೆನ್ನಿಗೆ ಕಟ್ಟಿಕೊಂಡು ಎತ್ತಿನ ಬಂಡಿಗಳಲ್ಲಿ ಪುತ್ತೂರನ್ನು ತೊರೆಯುತ್ತಾರೆ. ಭೋರ್ಗರೆವ ಕ್ಷೀರನದಿ ದಾರಿಗೆ ಅಡ್ಡಬಂದಾಗ ದೊಡ್ಡಮ್ಮನ ಆತ್ಮಭಕ್ತಿಯ ಮುಂದೆ ಅದು ಕೂಡ ಕೆಲಕಾಲ ಶಾಂತಗೊಂಡು ಬಂಡಿಗಳಿಗೆ ದಾರಿ ಮಾಡಿಕೊಡುತ್ತದೆ. ಆನಂತರ ಹಲವಾರು ದಿನಗಳ ದಾರಿ ಸವೆಸಿ ನಂದಿ ಬೆಟ್ಟದ ಸಮೀಪವೇ ಇರುವ ಎಂಬ್ರಹಳ್ಳಿ ಗುಡ್ಡದ ಬಳಿಗೆ ಬಂದಾಗ ತಮ್ಮ ಕಷ್ಟದ ಪಯಣಕ್ಕೆ ವಿರಾಮಕೊಟ್ಟು, ಅಲ್ಲೇ ನೆಲೆಸಲು ನಿರ್ಧರಿಸಿದರು. ಈ ಗುಡ್ಡದ ತಪ್ಪಲಲ್ಲಿಯೇ ಏಳು ಗುಡಿಸಿಲುಗಳನ್ನು ಕಟ್ಟಿಕೊಂಡು ವಾಸಿಸತೊಡಗಿದರು. ಹೀಗಿರಲೊಂದು ದಿನ ತಾವು ನೆಲೆಸಿದ್ದ ಪ್ರದೇಶದಲ್ಲೆ ದೊಡ್ಡ ತಾಮ್ರದ ಕೊಡದ ತುಂಬ ಚಿನ್ನದ ನಾಣ್ಯಗಳು ಮತ್ತು ಮಧ್ಯೆ ಶ್ರೀದೇವಿ ಸಹಿತ ಚನ್ನಕೇಶವನ ವಿಗ್ರಹಗಳು ಭೂಮಿಯಲ್ಲಿ ಲಭಿಸುತ್ತವೆ. ಮತ್ತದೇ ಜಾಗದಲ್ಲಿ ಚಿನ್ನದ ನಾಣ್ಯಗಳು ತುಂಬಿದ ಏಳುಕೊಪ್ಪರಿಗೆಗಳು ಹಾಗೂ ವೇಣುಗೋಪಾಲ ಸ್ವಾಮಿಯ ವಿಗ್ರಹವೂ ಕೂಡಾ ದೊರಕುತ್ತದೆ. ಹೀಗೆ ದೊರೆತ ನಿಧಿಯನ್ನು ಈ ಗೌಡರುಗಳು ಆ ಪ್ರದೇಶದ ಜನತೆಯ ಪುರೋಭಿವೃದ್ಧಿಗಾಗಿ ಮೀಸಲಿಡುತ್ತಾರೆ. ಜೊತೆಗೆ ದೇವಿಯ ಸಮೇತ ಚೆನ್ನಕೇಶವ ಸ್ವಾಮಿಯನ್ನು ಆವತಿಯಲ್ಲಿ ಗುಡಿ ಕಟ್ಟಿಸಿ ಪ್ರತಿಷ್ಠಾಪಿಸಿದರೆ ವೇಣು ಗೋಪಾಲನನ್ನು ಹತ್ತಿರದ ದೇವನಹಳ್ಳಿಯಲ್ಲಿ ಸುಂದರ ದೇವಾಲಯದಲ್ಲಿ ನೆಲೆಗೊಳಿಸುತ್ತಾರೆ.

ಆನಂತರ ನಡೆದುದ್ದೆಲ್ಲ ರೋಚಕ ಇತಿಹಾಸ! ಹಿರಿಯನಾದ ರಣಬೈರೇಗೌಡ ಆವತಿಯಲ್ಲೇ ಉಳಿದುಕೊಂಡು ಮುಂದೆ ಅವನ ಮಗನೆ ದೇವನಹಳ್ಳಿ, ದೊಡ್ಡಬಳ್ಳಾಪುರ ಮತ್ತು ಚಿಕ್ಕಬಳ್ಳಾಪುರ ಸಂಸ್ಥಾನಗಳನ್ನು ಸ್ಥಾಪಿಸಿದ ಕೀರ್ತಿಗೆ ಭಾಜನನಾದ. ಇನ್ನೊಬ್ಬ ಸಹೋದರ ಸಣ್ಣಬೈರೇಗೌಡ ಹೊಳವನಹಳ್ಳಿ ಪ್ರಾಂತದ ಕಡೆ ತೆರಳಿ ಕೊರಟಗೆರೆ ಸ್ಥಾಪಿಸಿ ಕಾಲಾಂತರದಲ್ಲಿ ಕೋಲಾರ ಮತ್ತು ಪುಂಗನೂರುಗಳ ಆಡಳಿತವನ್ನು ಸಹ ನಡೆಸಿದನು.

ಹೊಸಕೋಟೆಯನ್ನು ಕಟ್ಟಿದವನೂ ಈ ತಮ್ಮೇಗೌಡನೆ. ಆನೇಕಲ್ಲು ಸ್ಥಾಪಿಸಿದ್ದೂ ಇವನ ಸಂತತಿತಯವರಿಂದಲೇ, ಉಳಿದ ಮೂವ್ವರ ವಿವರಗಳು ಚರಿತ್ರೆಯ ಪುಟಗಳಲ್ಲಿ ದಾಖಲಾಗಿರುವುದಿಲ್ಲ. ಆದರೆ ಏಳನೇಯವನಾದ ಜಯಗೌಡ ಯಲಹಂಕ ಸಂಸ್ಥಾನದಲ್ಲಿ ನೆಲೆಗೊಂಡ. ಇವನ ನಂತರ ಮಗ ಗಿಡ್ಡೇಗೌಡ, ಆನಂತರ ಇವನ ಮಗ ಕೆಂಪ ನಂಜೇಗೌಡ ಕ್ರಿ.ಶ.೧೫೧೩ ರವರೆಗೆ ಪಾಲಿಸಿದರು. ಆನಂತರವೇ ಬೆಂಗಳೂರು ನಿರ್ಮಾಪಕ ಕೀರ್ತಿಗೆ ಭಾಜನನಾದ ಹಿರಿಯ ಕೆಂಪೇಗೌಡ ಗದ್ದುಗೆಗೆ ಏರಿದುದು. ಹೀಗೆ ಕಂಚಿ ಬಳಿಯಿಂದ ವಲಸೆ ಬಂದ ಒಕ್ಕಲಿಗರು ನಾಡ ಪ್ರಭುಗಳಾಗಿ ಕ್ರಿ.ಶ.೧೩೦೦ ರಿಂದ ೧೭೮೧ ರ ವರೆವಿಗೂ ವಿವಿಧ ಪ್ರಾಂತಗಳಲ್ಲಿ ಆಡಳಿತ ನಡೆಸಿದರು. ಧರ್ಮ ಪ್ರಭುಗಳಾಗಿ, ಪ್ರಜಾ ಪಾಲಕರಾಗಿ ವಿಜಯನಗರ ರಾಜದ ಆಪ್ತ ಮಾಂಡಲೀಕರಾಗಿ ಅಪಾರ ಸೇವೆಯನ್ನು ಸಲ್ಲಿಸಿದರು. ಇವರ ಆಡಳಿತಾವಧಿಯಲ್ಲಿ ನಿರ್ಮಿಸಲಾದ ಕೆರೆ ಕಟ್ಟೆಗಳು, ದೇವಾಲಯಗಳು, ಕೋಟೆ ಕೊತ್ತಲುಗಳು ಮುಂತಾದವು ಇವರ ಹೆಸರನ್ನು ಚಿರ ಸ್ಥಾಯಿಗೊಳಿಸಿವೆ. ಆದರಿಂದ ಐತಿಹಾಸಿಕ ಪುರುಷರು ನಡೆದಾಡಿದ ಜಾಗಗಳು ಅವಜ್ಞೆಗೆ ಒಳಗಾಗಿರುವುದು ಮಾತ್ರ ಯಾರು ಕೂಡ ಮೆಚ್ಚುವಂತಹದ್ದಲ್ಲ.

## ಹಾವತ್ತಿ-ಆವತಿಯ ಆಗಿರಯವ ಕಥೆ

ಆವತಿ ಮತ್ತದರ ಸುತ್ತಲ ಪ್ರದೇಶ ಪುಣ್ಯ ಭೂಮಿಯೂ ಹೌದು. ನಂದೀಶ್ವರನು ಕನಸಿನಲ್ಲಿ ಬಂದು ಇಲ್ಲಿಯೇ ನೆಲೆ ನಿಲ್ಲಲು ಆದೇಶಿಸಿದ್ದರಿಂದಲೇ ರಣಬೈರೇಗೌಡ ಈ ಭೂ ಭಾಗದಲ್ಲಿಯೇ ತಳ ಊರಲು ನಿಮಿತ್ತವಾಯಿತು ಎಂಬ ಪ್ರತೀತಿ. ಈ ಜಾಗಕ್ಕೆ ಆವತಿ ಎಂಬ ಹೆಸರು ಬರಲು ಮೂಲವಾದ ರೋಚಕ ಘಟನೆಯು ಕೂಡ ಒಂದು ವಿಸ್ಮಯವೇ! ಈ ಪ್ರದೇಶದಲ್ಲಿ ವಾಸಿಸುತ್ತಿರುವಾಗ ಒಂದು ದಿನ ರಣಬೈರೇಗೌಡನ ಗಂಡು ಮಗುವನ್ನು ಅತ್ತಿ ಮರಕ್ಕೆ ಜೋತು ಹಾಕಿದ್ದ ತೊಟ್ಟಿಲಲ್ಲಿ ಮಲಗಿಸಿದ್ದು, ಮಗುವಿನ ಮೇಲೆ ತೀಕ್ಷ್ಣವಾದ ಬಿಸಿಲು ಬಿದ್ದಿತ್ತು. ಆಗ ಅತ್ತಿ ಮರದಲ್ಲಿ ಸರ್ಪ ಹೆಡೆ ಬಿಚ್ಚಿ ಮಗುವಿಗೆ ನೆರಳು ಮಾಡಿದ್ದತಂತೆ. ಹೀಗೆ ಹಾವು ಅತ್ತಿ ಮರದಿಂದ ನೆರಳು ನೀಡಿದ್ದರಿಂದ ಈ ಊರಿಗೆ 'ಹಾವು ಅತ್ತಿ' ಎಂದು ರೂಢಿಯಾಗಿ ಕ್ರಮೇಣ ಜನರ ಬಾಯಲ್ಲಿ ಆವತಿ ಎಂದು ಬದಲಾಯಿತೆಂಬ ಪತೀತಿ ಇಲ್ಲಿನ ಜನರಲ್ಲಿದೆ.

ಆವತಿ ಗ್ರಾಮದಲ್ಲೀಗ ಗೌಡ ಪಭುಗಳ ಕುರುಹಾಗಿ ಉಳಿದಿರುವುದೆಂದರೆ ಪುಟ್ಟ ಚೆನ್ನಕೇಶವ ದೇವಾಲಯ. ಭೂದೇವಿ ಶ್ರೀದೇವಿ ಸಹಿತ ಚನ್ನೆಕೇಶವನ ದೇವತಾ ಮೂರ್ತಿಗಳು

ಎರಡು ಅಡಿ ಎತ್ತರವಿದ್ದು ಬಲು ಆಕರ್ಷಕವಾಗಿವೆ. ಈ ದೇವಾಲಯದ ಎದುರಿಗೆ ಎತ್ತರದ ನಾಲ್ಕು ಸ್ಥಂಭಗಳ ಉಯ್ಯಾಲೆ ಮಂಟಪವಿದ್ದು ತನ್ನ ಕುಸುರಿ ಕೆಲಸದಿಂದಾಗಿ ಗಮನ ಸೆಳೆಯುತ್ತದೆ. ಆವತಿ ಗ್ರಾಮಕ್ಕೆ ಹೊಂದಿಕೊಂಡಂತೆ ಇರುವ ಬೆಟ್ಟದ ಮೇಲೆ ಬಯಲು ಸಹ ಇದ್ದು ಇದನ್ನು ದೊಡ್ಡ ಬೀಡು ಎಂದು ಕರೆಯಲಾಗುತ್ತದೆ. ಈ ಜಾಗದಲ್ಲಿಯೇ ಗೌಡ ಪ್ರಭುಗಳ ವಾಸದ ಗೃಹಗಳಿದ್ದವು ಎಂಬ ನಂಬಿಕೆ. ಈ ಬೆಟ್ಟದ ದೊಡ್ಡಬೀಡಿನಲ್ಲಿಯೆ ಒಕ್ಕಲಿಗರ ಬಹು ಮುಖ್ಯ ಜಾತ್ರೆಯಾದ ಕರಗದ್ಯಾವರನ್ನು ಆಚರಿಸುತ್ತಿದ್ದರು ಎಂಬ ಪ್ರತೀತಿ. ಹೀಗಾಗಿ ಈ ಜಾಗದಲ್ಲಿ ಈಗಲು ಕರಗದ ಕುಡಿಕೆಗಳು ಕಾಣ ಸಿಗುತ್ತವೆ.

**ಸೂಳೆಬಂಡೆ –ಘಾಟಿಯ ಐತಿಹ್ಯ**

"ಸೂಳೆಬಂಡೆ" ಎಂಬ ದೊಡ್ಡದಾದ ಕಲ್ಲಿದ್ದು ಅಲ್ಲಿ ಹಿಂದೆ ಯಾರೋ ಒಬ್ಬಳು ಸೂಳೆಯು ಒಬ್ಬ ಗಂಡಸಿನೊಂದಿಗೆ ಸಂಸಾರವನ್ನು ಸಾಗಿಸುತ್ತಿದ್ದು ಅನೇಕ ವರ್ಷಗಳ ಕಾಲ ಅವರ ಸುಖ–ಸಂತೋಷದಿಂದ ಬಾಳ್ವೆಯನ್ನು ನಡೆಸುತ್ತಿದ್ದು ನಂತರ ದಿನಗಳಲ್ಲಿ ಇಬ್ಬರಲ್ಲಿ ವಿರಸ ಉಂಟಾಗಿ ಪರಸ್ಪರ ಒಬ್ಬರನೊಬ್ಬರು ಇರಿದುಕೊಂಡು ಸತ್ತಿದ್ದು, ಅವರು ಇರಿದುಕೊಂಡಾಗ ಅವರ ರಕ್ತವು ಕೋಡಿಯಾಗಿ ಹರಿದಿದ್ದು ಎಂದು ಆ ಕಲ್ಲಿನ ಮೇಲೆ ಕೆಂಪು ಬಣ್ಣವನ್ನು ತೋರಿಸಿ ಅದರ ಬಗ್ಗೆ ಕಥೆಯನ್ನು ಇಲ್ಲಿ ಜನರು ಹೇಳುತ್ತಾರೆ. ಈ ಬಂಡೆಯ ಪಕ್ಕದಲ್ಲಿ ಒಂದು ಗುಹೆಯಿದ್ದು ಅವರು ಸತ್ತ ನೆನಪಿಗಾಗಿ ವೀರಗಲ್ಲನ್ನು ನಡೆಲಾಗಿದೆ.

ಈಗಲೂ ಈ ಸೂಳೆ ಬಂಡೆಯ ಆಸುಪಾಸಿನಲ್ಲಿ ಜಾತ್ರೆಯು ನಡೆಯುವ ಸಂದರ್ಭದಲ್ಲಿ ಎತ್ತುಗಳನ್ನು ಪಕ್ಕದಲ್ಲಿ ಕಟ್ಟುವ ಪದ್ದತಿಯಿದ್ದು, ಜಾತ್ರೆಗೆ ಬರುವಂತಹ ಸಮಯದಲ್ಲಿ ಜನರು ಸೂಳೆ ಬಂಡೆ ಇರುವ ಮಾರ್ಗದಲ್ಲಿಯೇ ಹಾದು ಬರಬೇಕಾಗಿದೆ. ಪ್ರತಿಯೊಬ್ಬರು ಸೂಳೆ ಬಂಡೆಗೆ ಕಲ್ಲನ್ನು ಎಸೆದು ಮಂದೆ ಹೋಗುತ್ತಾರೆ. ಕಲ್ಲನ್ನು ಎಸೆಯುವ ಪದ್ದತಿ ಇಂದಿಗೂ ನಡೆಯುವುದರಿಂದ ಸೂಳೆಬಂಡೆಯು ಇಂದು ಸಣ್ಣ ಕಲ್ಲುಗಳಿಂದ ತುಂಬಿದ ಗುಡ್ಡೆಯಂತಾಗಿದೆ.

ಈ ಕಲ್ಲು ಎಸೆಯುವ ಪದ್ದತಿ ಅತಿ ಹೆಚ್ಚಿನ ಜನರಿಗೆ ತಿಳಿಯದಿದ್ದರೂ ಪದ್ದತಿಯಂತೆ ಅಲ್ಲಿಗೆ ಬಂದಾಗ ಕಲ್ಲು ಎಸೆಯುವುದು ಸಾಮಾನ್ಯ, ಪದ್ದತಿಯಂತೆ ಕಂಡು ಬರುತ್ತಿದೆಯಾದರೂ ಇಂದಿಗೂ ಅದರ ನಿರ್ದಿಷ್ಟ ಉದ್ದೇಶ ತಿಳಿದು ಬಂದಿಲ್ಲ. ಆದರೆ ಸಂಪ್ರದಾಯ ಕುಟುಂಬದ ಹೆಣ್ಣುಮಕ್ಕಳು ದೇವದಾಸಿ ಪದ್ದತಿಯನ್ನು ವಿರೋಧಿಸಿ ಕಲ್ಲನ್ನು ಎಸೆದಿರಬೇಕು ಆಗಾಗಿ ಅದು ಒಂದು ಪದ್ದತಿಯಂತೆ ಬೆಳೆದು ಬಂದಿರಬೇಕು.

ಈಕೆಯು ದಿನ ನಿತ್ಯದ ಚಟುವಟಿಕೆ ಏನು? ದೇವಾಲಯದ ಪೂಜಾ ಚಟುವಟಿಕೆಗಳಲ್ಲಿ ನೇಮಿಸಲ್ಪಟ್ಟಿದವಳೇ ಎಂಬ ಪ್ರಶ್ನೆಗಳಿಗೆ ಖಚಿತವಾದ ಉತ್ತರವನ್ನು ನೀಡಲು ಆಧಾರಗಳಲ್ಲಿ ಈ ಸಂಗತಿಯು ವಿಜಯನಗರ ಅರಸರ ಕಾಲದಲ್ಲಿ ದೇವದಾಸಿಯರನ್ನು ದೇವಾಲಯದ ಪೂಜಾ ಕಾರ್ಯಗಳಿಗೆ ನೇಮಿಸುತ್ತಿರುವ ಸಂಗತಿಗೆ ಹತ್ತಿರವಾದದ್ದು ಆಗಿದೆ ಇದು ಸ್ಥಳ ಪ್ರಧಾನ ಹಿನ್ನೆಲೆಯ ಪ್ರಮುಖ ಐತಿಹ್ಯವಾಗಿದೆ.

## ಕೊಯಿರಾ ಗ್ರಾಮದ ಸಾರಂಗಧಾರ ರಾಜನ ಐತಿಹ್ಯ

ನಮ್ಮ ದೇಶದಲ್ಲಿ ಹಳ್ಳಿಗಳಿಗೇನು ಕೊರತೆಯಿಲ್ಲ. ಒಂದೊಂದು ಹಳ್ಳಿಯ ಹಿನ್ನೆಲೆಯನ್ನೂ ಬೆನ್ನಟ್ಟಿಹೋದರೆ ಸಾಲು ಸಾಲು ಕತೆಗಳು ಹುಟ್ಟಿಕೊಳ್ಳುತ್ತವೆ. ಇತಿಹಾಸದಲ್ಲಿ ಗತಿಸಿಹೋದ ಘಟನೆಗಳೆಲ್ಲ ಗರಿ ಬಿಚ್ಚಿಕೊಳ್ಳುತ್ತವೆ. ಕೆಲವು ಕತೆಗಳು ಬಾಯಿಂದ ಬಾಯಿಗೆ, ತಲೆಮಾರಿನಿಂದ ತಲೆಮಾರಿಗೆ ಬೆಳೆದು ಬಂದು ಜನಪದರ ಬದುಕಿನಲ್ಲಿ ಹಾಸುಹೊಕ್ಕಾಗಿರುತ್ತವೆ. ಇವುಗಳಿಗೆ ಸಾಕಷ್ಟು ಸಾಕ್ಷಿಗಳು-ಪುರಾವೆಗಳು ಸಿಗುವುದಿಲ್ಲ. ಇವೇ ದಂತಕಥೆಗಳು.

ಸುಮಾರು ನಾಲ್ಕುನೂರು-ಐದುನೂರು ವರ್ಷಗಳ ಹಿಂದೆ ನಡೆದಿದೆ ಎನ್ನಲಾದ ದೇವನಹಳ್ಳಿ ತಾಲ್ಲೂಕು ಕೊಯಿರಾ ಗ್ರಾಮಕ್ಕೆ ಸಂಬಂಧಿಸಿದ ಒಂದು ದಂತಕಥೆ ಇಲ್ಲಿದೆ.

ಕೊಯಿರಾ ಬೆಟ್ಟದಿಂದ ಪಶ್ಚಿಮಕ್ಕೆ ಸುಮಾರು ಎಂಟ್ಹತ್ತು ಮೈಲಿ ದೂರದಲ್ಲಿ ರಾಜಘಟ್ಟ ಎಂಬ ಹಳ್ಳಿಯಿದೆ. ಅಲ್ಲಿ ನರೇಂದ್ರ ಎಂಬ ರಾಜ ಆಡಳಿತ ನಡೆಸುತ್ತಿದ್ದ. ಈ ನರೇಂದ್ರ ರಾಜನಿಗೆ ರತ್ನಾಂಗಿ ಎಂಬ ಹೆಂಡತಿಯಿದ್ದಳು. ಈ ದಂಪತಿಗಳಿಗೆ ಸಾರಂಗಧಾರ ಸಕಲ ವಿದ್ಯಾ ಪಾರಂಗತನಾಗಿ, ಸುರಸುಂದರಾಂಗನಾಗಿ ಬೆಳೆದ. ಇವನಿಗೆ ಮದುವೆಯ ವಯಸ್ಸು ಪ್ರಾಪ್ತವಾಯಿತು.

ನರೇಂದ್ರ ರಾಜನು ಸಂಪ್ರದಾಯದಂತೆ ಮಗನಿಗೆ ಹೆಣ್ಣನ್ನು ಹುಡುಕುತ್ತಾ ಹೊರಟ. ದೂರದ ರಾಜ್ಯದಲ್ಲಿ ಒಬ್ಬ ಸುಂದರ ತರುಣಿಯನ್ನು ನೋಡಿದನು ಆ ಸುಂದರಿಯ ಹೆಸರು ಚಿತ್ರಾಂಗದೆ. ಆಗಿನ ಒಂದು ಸಂಪ್ರದಾಯ ಹೇಗಿತ್ತೆಂದರೆ ಖಡ್ಗವನ್ನೇ ವರನೆಂದು ಭಾವಿಸಿ ಖಡ್ಗದ ಜೊತೆ ಕನ್ಯೆಯನ್ನು ಮೊದಲು ವಿವಾಹ ಮಾಡಿಕೊಂಡು ಬಂದು, ನಂತರ ವಧು-ವರರಿಗೆ ವಿಧಿವತ್ತಾಗಿ ಮದುವೆ ಮಾಡುತ್ತಿದ್ದರು. ಹೀಗೆ ಖಡ್ಗಕ್ಕೆ ಮದುವೆ ಮಾಡಿಕೊಂಡು ಬಂದ ನರೇಂದ್ರ ರಾಜನು ಚಿತ್ರಾಂಗದೆಯ ಮೋಹಕ ಚೆಲುವಿಗೆ ಮರುಳಾಗಿ ಆ ಕನ್ಯೆಯನ್ನು ತಾನೇ ವಿವಾಹ ಮಾಡಿಕೊಂಡು ಬಿಟ್ಟನು.

ತನ್ನ ಈ ವಿವಾಹದ ವಿಚಾರವನ್ನು ತನ್ನ ಹೆಂಡತಿ ಮಕ್ಕಳಿಗೂ ತಿಳಿಸಲಿಲ್ಲ. ಹೀಗೆಯೇ ರಾಜ್ಯಭಾರ ಮಾಡಿಕೊಂಡು ನರೇಂದ್ರರಾಜ ಕಾಲಕಳೆಯುತ್ತಿದ್ದ.ರಾಜರು ಬೇಟೆಗೆ ಹೋಗುವುದು ಹಿಂದಿನಿಂದಲೂ ಬೆಳೆದುಬಂದ ರೂಢಿ. ಹೀಗೆ ಬೇಟೆಗೆ ಹೋದಾಗ ಅನೇಕ ದಿನಗಳೇ ಕಳೆದು ಹೋಗುತ್ತಿದ್ದವು. ಒಂದು ದಿನ ನರೇಂದ್ರ ರಾಜನೂ ಸಹ ಬೇಟೆಗೆಂದು ಕಾಡಿಗೆ ಹೋದನು.

ಹೋಗುವ ಮುನ್ನ ತನ್ನ ಎರಡನೇ ಹೆಂಡತಿಯಾದ ಚಿತ್ರಾಂಗದೆಯನ್ನು ತಂದು ಅರಮನೆಯಲ್ಲಿರಿಸಿ ಹೋದನು. ಇತ್ತ ಅರಮನೆಯಲ್ಲಿ ಚಿತ್ರಾಂಗದೆ ಒಬ್ಬ ಸುಂದರ ಪುರುಷನನ್ನು ನೋಡಿದಳು. ಮನ್ಮಥನ ಪ್ರತಿರೂಪದಂತಿದ್ದ ಆ ಯುವಕನನ್ನು ನೋಡಿ ಚಿತ್ರಾಂಗದೆ ಮೋಹಿತಳಾದಳು. "ಈತನೇ ನನ್ನನ್ನು ಮದುವೆಯಾಗಬೇಕಾಗಿದ್ದ ರಾಜಕುಮಾರ. ಇಂಥಹ ಸುಂದರಾಂಗನನ್ನು ಪತಿಯಾಗಿ ಪಡೆಯುವ ಭಾಗ್ಯ ನನ್ನದಾಗಲಿಲ್ಲ. ಆದರೂ ಚಿಂತೆಯಿಲ್ಲ ಈತನನ್ನು ಹೇಗಾದರೂ ಒಲಿಸಿಕೊಂಡು ನನ್ನ ಕಾಮ ತೃಷೆಯನ್ನು ತೀರಿಸಿಕೊಳ್ಳುತ್ತೇನೆ" ಎಂದು ಪಣತೊಟ್ಟಳು. "ಕಾಮಾತುರಾಣಾಂ ನ ಭಯಂ ನ ಲಜ್ಜಾ" ಎಂಬ ಸಂಸ್ಕೃತ ಗಾದೆಯೊಂದಿದೆ. ಕಾಮಾತುರನಾದವನಿಗೆ ಭಯವಾಗಲೀ ನಾಚಿಕೆಯಾಗಲೀ ಇರುವುದಿಲ್ಲ.

ಸಾರಂಗಧಾರನು ಏಕಾಂತನಾಗಿದ್ದ ಸಮಯದಲ್ಲಿ ಚಿತ್ರಾಂಗದೆ ಸಾರಂಗಧಾರನ ಬಳಿ ಹೋಗಿ "ಸ್ವಾಮಿ, ನಿಮ್ಮ ತಂದೆ ನರೇಂದ್ರರಾಜನು ನಿಮ್ಮ ಜೊತೆ ಮದುವೆ ಮಾಡಿಕೊಡಬೇಕಾಗಿದ್ದ ನನ್ನನ್ನು ನೋಡಿ, ನನ್ನ ಸೌಂದರ್ಯಕ್ಕೆ ಮನಸೋತು ಬಲವಂತವಾಗಿ ನನ್ನನ್ನು ಅವರೇ ಮದುವೆ ಮಾಡಿಕೊಂಡರು. ರಾಜಾಜ್ಞೆಯನ್ನು ಮೀರಲಾರದ ನನ್ನ ತಂದೆ ತಾಯಿಗಳು ಜೀವ ಭಯದಿಂದ ಈ ಮದುವೆಗೆ ಅಡ್ಡಿಪಡಿಸದೆ ಸುಮ್ಮನಾದರು. ಸ್ವಾಮಿ ನಿಜವಾಗಿಯೂ ನಾನು ನಿಮಗೆ ಸೇರಬೇಕಾದವಳಾಗಿದ್ದೆನೆ. ನನ್ನ ವಿರಹ ಬಾಧೆಯನ್ನು ನೀವು ತೀರಿಸಬೇಕು" ಎಂದು ಹೇಳಿ ಕಾಮೋದ್ರೇಕದಿಂದ ಅವನನ್ನು ಬಿಗಿದಪ್ಪಿದಳು. ಈ ಸನ್ನಿವೇಶವನ್ನು ಕಂಡು ದಿಗ್ಭ್ರಾಂತನಾದ ಸಾರಂಗಧಾರನು ಕ್ಷಣಕಾಲ ವಿಚಲಿತನಾದನು. ನಂತರ ಎಲ್ಲವನ್ನು ಸಮಾಧಾನ ಚಿತ್ತದಿಂದ ಆಲೋಚಿಸಿ "ತಾಯಿ ತಪ್ಪು ತಿಳಿಯಬೇಡಿ. ನೀವು ನನ್ನ ತಾಯಿಯಾದ ರತ್ನಾಂಗಿಯ ಸಮಾನರು. ನನ್ನ ತಂದೆ ಕೈಹಿಡಿದ ಧರ್ಮಪತ್ನಿ. ನಾನು ನಿಮ್ಮ ಮಗನೇ ಆದೆನು. ನೀವು ಈ ರೀತಿ ಮಗನನ್ನು ಮೋಹಿಸುವುದು ಸರಿಯಲ್ಲ. ಮಹಾಪಾಪ" ಎಂದು ಬುದ್ದಿವಾದ ಹೇಳಿ ಆಕೆಯನ್ನು ತಿರಸ್ಕರಿಸಿದನು.

ಯಾವಾಗ ಸಾರಂಗಧಾರ ತನ್ನ ಮನೋಭಿಲಾಷೆಯನ್ನು ಈಡೇರಿಸಲು ನಿರಾಕರಿಸಿದನೋ ಆಗ ಚಿತ್ರಾಂಗದೆ ಹತಾಶಳಾದಳು. ಸಾರಂಗಧಾರನ ಮೇಲಿನ ವಿರಹ ಬಾಧೆಯನ್ನು ತಾಳಲಾರದೆ ಹುಚ್ಚಿಯಂತೆ ಆರ್ಭಟಿಸಿದಳು. ಅವಳ ಪ್ರೇಮ–ಕಾಮಗಳು, ಮದ ಮತ್ಸರಗಳಾಗಿ ಪರಿವರ್ತನೆಯಾದವು. ಸಾರಂಗಧಾರನ ಮೇಲೆ ಸೇಡಿನ ಭಾವನೆ ಬೆಳೆಸಿಕೊಂಡಳು. ಬೇಟೆಗೆ ಹೋಗಿದ್ದ ನರೇಂದ್ರ ರಾಜನು ಬರುವವರೆಗೂ ಕಾದಿದ್ದು, ತಲೆಕೂದಲನ್ನು ಕೆದರಿಕೊಂಡು, ಕೈಯಲ್ಲಿದ್ದ ಬಳೆಗಳನ್ನು ಒಡೆದುಕೊಂಡು, ಹಣೆಯಲ್ಲಿದ್ದ ಕುಂಕುಮವನ್ನು ಅಳಿಸಿಕೊಂಡು, ರಾಜನ ಬರುವಿಕೆಗಾಗಿ ಕಾದು ಕುಳಿತ್ತಿದ್ದಳು. ನರೇಂದ್ರ ರಾಜನು ಅರಮನೆಗೆ ಹಿಂತಿರುಗಿ ಬಂದು ತನ್ನ ಪತ್ನಿಯ ದುರವಸ್ಥೆಯನ್ನು ಕಂಡು ದಿಗ್ಭ್ರಾಂತನಾಗಿ "ಪ್ರಿಯೆ ಏಕೆ ಚಿಂತಾಕ್ರಾಂತಳಾಗಿರುವೆ? ನಿನ್ನ ಈ ದುಃಸ್ಥಿತಿಗೆ ಕಾರಣವಾದ್ರೂ ಏನು? ನನ್ನೊಡನೆ ಹೇಳಬಾರದೆ?" ಎಂದು ಕೇಳಿದನು. ಆಗ ನಟನಾ ಶಿರೋಮಣಿಯಾದ ಚಿತ್ರಾಂಗದೆ ಜೋರಾಗಿ ಅಳುತ್ತಾ "ಸ್ವಾಮಿ, ನಾನು ಅಂತಃಪುರದಲ್ಲಿ ಏಕಾಂತವಾಗಿರುವುದನ್ನು ಗಮನಿಸಿದ ನಿಮ್ಮ ಪುತ್ರನಾದ ಸಾರಂಗಧಾರನು ನನ್ನ ಅನುಮತಿಯಿಲ್ಲದೆ ಅಂತಃಪುರವನ್ನು ಪ್ರವೇಶಿಸಿ, ತನ್ನನ್ನು ಮೋಹಿಸುವಂತೆ ಪರಿಪರಿಯಾಗಿ ಪೀಡಿಸಿದನು, ನಾನು ನಿನ್ನ ತಾಯಿಯ ಸಮಾನ. ತಾಯಿಯನ್ನು ಮಗನು ಮೋಹಿಸುವುದು ಮಹಾಪಾಪ ಎಂದು ಪರಿಪರಿಯಾಗಿ ಬೇಡಿಕೊಂಡು ಅವನನ್ನು ಸಮಾಧಾನ ಪಡಿಸಲು ಪ್ರಯತ್ನಿಸಿದೆ ನನ್ನ ಮಾತುಗಳನ್ನು ಕೇಳದೆ ಬಲವಂತವಾಗಿ ನನ್ನನ್ನು ಎಳೆದಾಡಿ ನಾನಾರೀತಿ ಹಿಂಸಿಸಿದನು" ಎಂದು ಸಾರಂಗಧಾರನ ಮೇಲೆ ಇಲ್ಲಸಲ್ಲದ ಅಪವಾದವನ್ನು ಹೊರಿಸಿದಳು. ಚಿತ್ರಾಂಗದೆ ಹೇಳಿದ ಮಾತುಗಳನ್ನು ಕೂಲಂಕುಶವಾಗಿ ವಿಚಾರಮಾಡಿ ಪರಿಶೀಲಿಸದ ನರೇಂದ್ರ ರಾಜನು ಅದನ್ನು ನಿಜವೆಂದೇ ನಂಬಿದನು. ಮಗನ ಮೇಲೆ ಕೋಪೋದ್ರಿಕ್ತನಾದನು. 'ಆತುರಗಾರನಿಗೆ ಬುದ್ದಿಮಟ್ಟ' ಎಂಬಂತೆ ರೋಷಾವೇಷದಿಂದ ರಾಜಭಟರನ್ನು ಕರೆಸಿ ನನ್ನ ಮಗನಾದ ಸಾರಂಗಧಾರನು ರಾಜದ್ರೋಹಿ, ಅವನನ್ನು ಎಲ್ಲಿಗಾದರೂ ದೂರ ಕರೆದುಕೊಂಡು ಹೋಗಿ ಅವನ ರುಂಡ–ಮುಂಡಗಳು ಬೇರೆ ಬೇರೆಯಾಗುವಂತೆ ಶಿರಚ್ಛೇದನ ಮಾಡಿ ಎಂದು ರಾಜಾಜ್ಞೆಯನ್ನಿತ್ತನು.

ರಾಜಾಜ್ಞೆಯಂತೆ ರಾಜಭಟರು ಸಾರಂಗಧಾರನನ್ನು ಬಂಧಿಸಿ ಹೆಡೆಮುರಿ ಕಟ್ಟಿ ರಥದಲ್ಲಿ ಹಾಕಿಕೊಂಡು ಪೂರ್ವಾಭಿಮುಖವಾಗಿ ಹೊರಟರು. ಎಂಟ್ಹತ್ತು ಮೈಲಿಗಳ ದೂರ ಕ್ರಮಿಸಿದ ನಂತರ ಒಂದು ಹಳ್ಳಿ ದೊರೆಯಿತು. ಆ ಹಳ್ಳಿಯಲ್ಲಿ ಸಾರಂಗಧಾರನನ್ನು ಕತ್ತರಿಸಿ ಹಾಕಲು ಸಂಚು ರೂಪಿಸಿದರು. ಆದರೆ ಅಲ್ಲಿ ಸಂಚು ಫಲಿಸಲಿಲ್ಲ. ಆದ್ದರಿಂದ ಆ ಊರಿಗೆ ಗುಡಿಶೆಟಿಹಳ್ಳಿ ಎಂದು ಹೆಸರಿಟ್ಟರು. ಅಲ್ಲಿಂದ ಪ್ರಯಾಣ ಬೆಳೆಸಿ ಮತ್ತೊಂದು ಹಳ್ಳಿಗೆ ಸೇರಿದರು.

ಆ ಗ್ರಾಮದಲ್ಲಿ ಮತ್ತೆ ಮಾತುಕತೆಯನ್ನು ಮುಂದುವರೆಸಿದರು. ಆ ಹಳ್ಳಿಯಲ್ಲಿಯೂ ಸರಿಯಾದ ತೀರ್ಮಾನ ತೆಗೆದುಕೊಳ್ಳಲಾಗಲಿಲ್ಲ. ಅರೆ ಮಾತೂಕತೆ, ಅರೆ ತೀರ್ಮಾನವಾಯಿತು. ಆದ್ದರಿಂದ ಆ ಹಳ್ಳಿಗೆ ಅರುವನಹಳ್ಳಿ ಎಂದು ನಾಮಕರಣ ಮಾಡಿ ಮುಂದಿನ ಹಳ್ಳಿಗೆ ಪ್ರಯಾಣ ಬೆಳೆಸಿದರು. ಆ ಹಳ್ಳಿಯಲ್ಲಿ ಉಳಿದ ಅರ್ಧ ಮಾತುಕತೆಯನ್ನು ಮುಂದುವರೆಸಿ ಸಾರಂಗಧಾರನ ಕೈಕಾಲುಗಳನ್ನು ಕತ್ತರಿಸಲು ಮನನೊಂದ'ು ತೀರ್ಮಾನ ತೆಗೆದುಕೊಂಡರು. ಆದುದರಿಂದ ಆ ಹಳ್ಳಿಗೆ ಮನಗೊಂಡನಹಳ್ಳಿ ಎಂದು ನಾಮಕರಣ ಮಾಡಿ ಮುಂದಿನ ಪ್ರಯಾಣ ಬೆಳೆಸಿದರು.

ಅಲ್ಲಿಂದ ಸ್ವಲ್ಪ ದೂರದಲ್ಲೆ ಒಂದು ಹಳ್ಳಿ, ಆ ಹಳ್ಳಿಯ ಪಕ್ಕದಲ್ಲೆ ಒಂದು ಬೆಟ್ಟ ಎದುರಾಯಿತು. ಅ ಬೆಟ್ಟದಲ್ಲಿ ಸಾರಂಗಧಾರನ ಕೈಕಾಲುಗಳನ್ನು ಮತ್ತು ತಲೆಯನ್ನು ಕೊಯ್ದು ಕತ್ತರಿಸಲಾಯಿತು. ಆ ಬೆಟ್ಟದಲ್ಲಿ ಸಾರಂಗಧಾರನನ್ನು ಕೊಯ್ದಿದ್ದರಿಂದ ಆ ಬೆಟ್ಟದ ಪಕ್ಕದಲ್ಲೆ ಇದ್ದ ಆ ಹಳ್ಳಿಗೆ 'ಕೊಯಿರಾ' ಎಂದು ನಾಮಕರಣ ಮಾಡಿದರು. ರಾಜಾಜ್ಞೆಯನ್ನು ಪಾಲಿಸಿದ ನಂತರ ರಾಜಭಟರು ತಮ್ಮ ರಾಜಧಾನಿಗೆ ಹಿಂತಿರುಗಿ ರಾಜನಿಗೆ ಸುದ್ದಿ ಮುಟ್ಟಿಸಿದರು.

ಇಂತಹ ದಂತಕತೆಗಳು ಪುರಾಣ ಇತಿಹಾಸಗಳಲ್ಲಿ ಸಿಗುವುದನ್ನು ಮೆಲುಕು ಹಾಕಬಹುದು. ಮಹಾಭಾರತದ ಅರ್ಜುನ-ಊರ್ವಶಿಯರ ಕಥೆಯಲ್ಲಿ ಇದರ ಮೂಲಬಿಂಬ ಕಾಣಸಿಗುತ್ತದೆ. ಇಂದ್ರನ ಅಂಶದ ಮಗ ಅರ್ಜುನ. ಊವರ್ಶಿ ಇಂದ್ರನ ಪ್ರಿಯತಮೆ. ಹೀಗಿದ್ದೂ ಊರ್ವಶಿ ಇಂದ್ರನನ್ನು ಕ್ಷಣಕಾಲ ಮರೆತು ಅರ್ಜುನನಲ್ಲಿ ಅನುರಕ್ತಳಾಗುತ್ತಾಳೆ. ಮೋಹಪರವಶಳಾಗುತ್ತಾಳೆ. ಕಾಮೋದ್ರೇಕದ ಭರದಲ್ಲಿ ಅವಳು ಕೊಚ್ಚಿ ಹೋಗುತ್ತಾಳೆ. ಆದರೆ ತನ್ನ ಕಾಮ ತೃಷೆಯನ್ನು ತೀರಿಸದ ಅರ್ಜುನನನ್ನು ಊರ್ವಶಿ ಶಪಿಸುತ್ತಾಳೆ. ಅವಳ ಶಾಪದಿಂದ ಅರ್ಜುನ ಒಂದು ವರ್ಷ ಅಜ್ಞಾತವಾಸ ಕಾಲದಲ್ಲಿ ಬೃಹನ್ನಳೆಯಾಗಿ ಶಿಕ್ಷೆ ಅನುಭವಿಸಬೇಕಾಯಿತು.

ಇಂಥದ್ದೇ ಇನ್ನೊಂದು ಕತೆ ನಂಜುಡ ಕವಿ ರಚಿಸಿದ "ಕುಮಾರ ರಾಮ ಚರಿತೆ" ಸಾಂಗತ್ಯ ಕಾವ್ಯದಲ್ಲೂ ಸಿಗುತ್ತದೆ. ಕಂಪಿಲರಾಯನಿಗೆ ಇಬ್ಬರು ಮಡದಿಯರು ಹಿರಿಯವಳು ಹರಿಹರದೇವಿ, ಕಿರಿಯವಳು ರತ್ನಾಜಿ. ಕುಮಾರರಾಮ ಹರಿಹರ ದೇವಿಯ ಮಗ ಕುಮಾರರಾಮ ಸ್ಫುರದ್ರೂಪಿ, ಪರಾಕ್ರಮಿ, ಇಂತಹ ಚಿಗುರು ಮೀಸೆಯ ಚೆಲುವನನ್ನು ರತ್ನಾಜಿ ಮೋಹಿಸುತ್ತಾಳೆ. ಅಸಹನೀಯ ಕಾಮುಕ ಪ್ರವೃತ್ತಿಗೆ ಎಳೆಯಲು ಪ್ರಯತ್ನಿಸುತ್ತಾಳೆ. ಕುಮಾರ ರಾಮನ ಪುರುಷ ವ್ರತದ ಮುಂದೆ ರತ್ನಾಜಿಯ ಬೇಳೆ ಬೇಯಲಿಲ್ಲ. ಅವಳ ಕಾಮಾತುರ ಮತ್ತು ವಿರಹೋದ್ರೇಕಗಳು ನುಚ್ಚು ನೂರಾದವು. ರೋಷ ಉಕ್ಕಿ ದ್ವೇಷ ಬೆಳೆದು ತಾನು

ಮಾಡಿದ ಅಕಾರ್ಯಗಳನ್ನೆಲ್ಲ ಕುಮಾರರಾಮನ ಮೇಲೆ ಹೇರಿ, ನಾರಿಯಾಗಿದ್ದವಳುಮಾರಿಯಾಗಿ ಸೇಡಿಗೆ ಹಾತೊರೆಯುತ್ತಾಳೆ. ದೇವನಹಳ್ಳಿಯ ಕೊಯಿರಾ ಗ್ರಾಮವು ಪ್ರಮುಖವಾದ ಸ್ಥಳ ಪ್ರಧಾನವಾದ ಐತಿಹ್ಯವಾಗಿದೆ.

## ಪಾರಿವಾಳಗುಟ್ಟ (ಗುಡ್ಡ) ಐತಿಹ್ಯ

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೇವನಹಳ್ಳಿ ಪಟ್ಟಣದ ಉತ್ತರ ಭಾಗದಲ್ಲಿ ಚಿಕ್ಕಬಳ್ಳಾಪುರ ರಸ್ತೆಯ ರಾಷ್ಟ್ರೀಯ ಹೆದ್ದಾರಿ ಏಳರ ಎಡಭಾಗದಲ್ಲಿ ಒಂದು ಗುಟ್ಟ ಕಾಣಿಸುತ್ತದೆ. ಈ ಗುಟ್ಟವನ್ನು ಹಲವಾರು ಹೆಸರುಗಳಿಂದ ಕರೆಯುತ್ತಾರೆ. ಪಾರ್ವಾಟಗುಟ್ಟ, ಪರ್ವತಗುಟ್ಟ, ಪಾರಿವಾಳ ಗುಟ್ಟ ಎಂದು ಕರೆಯಲಾಗುತ್ತದೆ. ಕಳೆದ ೧೫-೨೦ ವರ್ಷಗಳ ಹಿಂದೆ ಈ ಪರ್ವತ ಗುಟ್ಟದ ತುದಿಯಲ್ಲಿ ಆಲದ ಮರ ಮತ್ತು ಮಂಟಪ ಕಾಣುತ್ತಿತ್ತು. ಈ ಒಂಟಿ ಗುಡ್ಡದ ಒಂಟಿ ಮರ ೪-೫ ಕಿ.ಮೀ. ದೂರದಿಂದಲೇ ಕಾಣುತ್ತಿತ್ತು. ಈಗ ಅಲ್ಲಿ ಮರವಿದ್ದರೂ ಕಾಣದಂತಾಗಿದೆ. ಅಲ್ಲದೇ ದೊಡ್ಡ ಎರಡು ಬಂಡೆಗಳ ನಡುವೆ ಇರುವ ಆಂಜನೇಯಸ್ವಾಮಿ ಆಲಯ ಇಲ್ಲಿನ ಪ್ರಮುಖ ಆಕರ್ಷಣೆ. ಈ ಗುಟ್ಟ ಇರುವ ಬಂಡೆಗಳಿಂದ ಕೂಡಿದ್ದು ಇಲ್ಲಿ ಗಿಡಗಂಟಿಗಳಲ್ಲದೆ ಔಷಧಿಯುಕ್ತವಾದ ಗುಲಗಂಜಿ, ಬೆಟ್ಟದ ನೆಲ್ಲಿಕಾಯಿ ಹಾಗೂ ಇತರ ಔಷಧಿ ಸಸ್ಯಗಳು ಎಲ್ಲೆಂದರಲ್ಲಿ ಬೆಳೆದಿದ್ದವು.

ಈ ಗುಟ್ಟಕ್ಕೆ ಪರ್ವತಗುಟ್ಟ, ಪಾರ್ವಾಟಗುಟ್ಟ ಎಂಬ ಹೆಸರು ಹೇಗೆ ಬಂದಿರಬಹುದು ಎಂದು ತಿಳಿಯ ಬಹುದಾದರೆ ಸುಮಾರು ೫೦೦ ರಿಂದ ೬೦೦ ವರ್ಷಗಳ ಹಿಂದೆ ಈ ಗುಟ್ಟಕ್ಕೆ ಶ್ರೀಶೈಲ ಕ್ಷೇತ್ರದಿಂದ ಗುರುಗಳೊಬ್ಬರು ಆಗಮಿಸಿ ಈ ಗುಟ್ಟದ ಗುಹೆಯಲ್ಲಿ ವಾಸಿಸುತ್ತಿದ್ದರಂತೆ. ಈ ಪರ್ವತ ಸ್ವಾಮಿಗಳು ಇಲ್ಲಿನ ಕಲ್ಯಾಣಿಯಲ್ಲಿ ಮಿಂದು ಹುಲಿಯ ವಾಹನದ ಮೇಲೆ ಗುಟ್ಟದ ಗುಹೆಯೊಳಗೆ ಕುಳಿತು ಶಿವಪೂಜೆ ಮಾಡುತ್ತದ್ದರಂತೆ. ಹೀಗಾಗಿ ಈ ಗುಟ್ಟಕ್ಕೆ ಪರ್ವತ ಗುಟ್ಟ ಎಂಬ ಹೆಸರು ರೂಢಿಯಾಗಿದೆ.

ಪ್ರತಿ ದಿನ ಇಲ್ಲಿರುವ ಶ್ರೀರಾಮ ದೇವಾಲಯಕ್ಕೆ ಆಗಮಿಸುವ ಭಕ್ತರಿದ್ದಾರೆ. ಇಲ್ಲಿ ಪ್ರತಿ ವರ್ಷ ಕಾರ್ತಿಕ ಮಾಸದ ಕಡೆಯ ಸೋಮವಾರ ಆಂಜನೇಯಸ್ವಾಮಿ ವಿಶೇಷ ಪೂಜೆ ಮತ್ತು ಕಡಲೆಕಾಯಿ ಪರಿಷೆ ನಡೆಯುತ್ತದೆ. ಈ ಪರಿಷೆಗೆ ಸುತ್ತ ಮುತ್ತ ಗ್ರಾಮಗಳಿಂದ ಹಾಗೂ ದೇವನಹಳ್ಳಿ ಪಟ್ಟಣದಿಂದ ಸಾವಿರಾರು ಭಕ್ತಾಧಿಗಳು ಆಗಮಿಸಿ ದೇವರ ದರ್ಶನ ಪಡೆಯುತ್ತಾರೆ ಎಂಬ ಪ್ರತೀತಿ.

ಪರ್ವತ ಸ್ವಾಮಿಗಳು ತಪಸ್ಸು ಮಾಡಿಕೊಂಡಿದ್ದು, ಪವಾಡ ಪುರುಷರಾಗಿದ್ದರು ಎನ್ನಲಾದ ಈ ಗುಟ್ಟದಿಂದ ದಕ್ಷಿಣಕ್ಕೆ ಕೆಳಗಡೆ ಸುಂದರವಾದ ಕಲ್ಯಾಣಿ ಇದೆ (ಈಗ ಪಾಳೂ ಬಿದ್ದಿದೆ) ಈ ಕಲ್ಯಾಣಿಯಲ್ಲಿ ಗುರುಗಳು ಧ್ಯಾನ ಮತ್ತು ಶಿವಪೂಜೆ ಮಾಡುತ್ತಿದ್ದ ಸ್ಥಳವನ್ನು ಈಗಲೂ ಕಾಣಬಹುದು. ಇವರ ಕಾಲವಾದ ನಂತರ ಪಟ್ಟಣದ ಮಧ್ಯದಲ್ಲಿ ಮಹಂತರ ಮಠ ಇದ್ದು ಅದರ ಸಮೀಪವೇ ಪರ್ವತ ಗುರುಗಳ ಗದ್ದುಗೆ ಇದೆ. ನಂತರ ಇದು ಪರ್ವತೇಶ್ವರ ದೇವಸ್ಥಾನ ಆಗಿದೆ.

ಇಲ್ಲಿನ ಮಹಂತರ ಮಠ ಹಾಗೂ ವರ್ಪತಮರದ ಸಾಕಷ್ಟು ಜಮೀನು ಹುಣಸಮಾರನಹಳ್ಳಿ ಮಠಕ್ಕೆ ಸೇರಿದ್ದಾಗಿದೆ. ಈ ಮಠಕ್ಕೆ ಸೇರಿದ ಜಮೀನಿನಲ್ಲಿ ಅನೇಕ ಮಂದಿ ಮನೆಗಳನ್ನು ಕಟ್ಟಿಕೊಂಡು ಆ ಸ್ಥಳಕ್ಕೆ ಪರ್ವತಪುರ ಎಂದು ಕರೆಯುತ್ತಾರೆ. ದೇವನಹಳ್ಳಿಯ ಪರ್ವತ ಗುಟ್ಟದ ಹೆಸರಿನ ಜೊತೆಯಲ್ಲಿ ಪರ್ವತಪುರ. ಪರ್ವತೇಶ್ವರ ದೇವಸ್ಥಾನ ಇರುವುದರಿಂದ ಪರ್ವತ ಎನ್ನುವ ಪದ ಒಂದಕ್ಕೊಂದು ಸಾಮ್ಯತೆ ಇದೆ. ಪರ್ವತ ಸ್ವಾಮಿಗಳು ಗುಟ್ಟದಲ್ಲಿ ತಪಸ್ಸು ಮಾಡಿದ್ದರಿಂದ ಈ ಗುಟ್ಟಕ್ಕೆ ಪರ್ವತ ಗುಟ್ಟ ಎಂಬ ಹೆಸರು ಪ್ರಚಲಿತದಲ್ಲಿದೆ ಎನ್ನಬಹುದು.

ಈ ಹಿಂದೆ ಇಲ್ಲಿನ ಪರ್ವತ ಗುಟ್ಟದಲ್ಲಿ ಆನೇಕ ಸಾಧು ಸಂತರು ಯಜ್ಞ ಯಾಗಾಧಿಗಳನ್ನು ನಡೆಸಿಕೊಂಡು ಬಂದಿದ್ದು, ಈ ಬೆಟ್ಟದ ಪಕ್ಕ ಗುಟ್ಟಹಳ್ಳಿ ಎಂಬ ಗ್ರಾಮವಿದ್ದು, ಇಲ್ಲಿ ಸಾಧು ಸಂತರ ಸಮಾಧಿಗಳ ಕುರುಹುಗಳಿವೆ. ಅಲ್ಲದೆ ಈ ಗುಟ್ಟದ ಬಳಿ ಬೃಹದಾಕಾರದ ಏಕ ಶಿಲೆಯಿದ್ದು ಇದನ್ನು ಸನ್ಯಾಸಿ ಗುಂಡು ಎಂದು ಕರೆಯುವರು. ಚೌಕಾಕಾರದ ಬಾವಿಗಳಿದ್ದು ಅವುಗಳನ್ನು ಮುಚ್ಚಲಾಗಿದೆ.

ದೇವನಹಳ್ಳಿ ಟೌನಿನ ಹಾಲು ಮತಸ್ಥ ಜನಾಂಗದ ಪಟೇಲು ಚಿಕ್ಕವೀರಪ್ಪನವರು ಗುಟ್ಟದಲ್ಲಿ ತಪಸನ್ನಾಚರಿಸುತ್ತಿದ್ದಂತಹ ಸಾಧು ಸಂತರಿಗೆ ಭೋಜನ ವ್ಯವಸ್ಥೆ ಮಾಡುತ್ತಿದ್ದರು. ಈಗಲೂ ಈ ಪಿಟೇಲು ಚಿಕ್ಕವೀರಪ್ಪ ನವರ ಸಮಾಧಿಯು ಶ್ರೀ ಭೀರಲಿಂಗೇಶ್ವರ ದೇವಾಲಯದ ಪಕ್ಕದಲ್ಲಿದೆ.

ದೇವನಹಳ್ಳಿ ಪಟ್ಟಣದಲ್ಲಿರುವ ಇತಿಹಾಸ ಪ್ರಸಿದ್ಧ ಕೋಟೆ ನಿರ್ಮಾಣ ಮಾಡಲು ಪಾಳೇಗಾರರು ಅಂದಿನ ಕಾಲದ ಸಂತರನ್ನು ಕೋಟೆಯ ಪಾಯ ಹಾಕಲು ಶುಭ ಲಗ್ನವನ್ನು ಕೇಳಿದಾಗ ಪಾರಿವಾಳ ಗುಟ್ಟದ ದೇವಾಲಯದಿಂದ ಒಳ್ಳೆಯ ಶುಭಲಗ್ನ ವೇಳೆಗೆ ಶಂಕು ನಾದದ ನುಡಿ ಕೇಳಿದ ವೇಳೆಗೆ ಸರಿಯಾಗಿ ಕೋಟೆಯ ಪಾಯ ಪೂಜೆಮಾಡಿ ಪಾಯ ಹಾಕಿ ಕೋಟೆ ಕಟ್ಟಲು ಹೇಳಿ ಅದರಂತೆ ದೇವನಹಳ್ಳಿ ಕೋಟೆ ನಿರ್ಮಾಣ ಮಾಡಿರುವರು ಎಂಬ

ಪ್ರತೀತಿ ಇದೆ. ಪಾರಿವಾಳ ಗುಟ್ಟದ ಈಶಾನ್ಯ ಭಾಗದಲ್ಲಿ ಗುಂಡು ಆಂಜನೇಯಸ್ವಾಮಿ ದೇವಾಲಯವಿದ್ದು ಅದರ ಪಕ್ಕದಲ್ಲಿಯೇ ಒಂದು ಡೈಮಂಡ್ ಆಕೃತಿಯ ಗುಂಡು ಇದೆ. ಪಾರಿವಾಳ ಗುಟ್ಟದ ಆಂಜನೇಯಸ್ವಾಮಿ ದೇವಾಲಯದ ಶಿಲೆಯು ದಕ್ಷಿಣಕ್ಕೆ ಕಪ್ಪೆಯಾಕಾರ ಪೂರ್ವಕ್ಕೆ ನಂದಿ ಆಕಾರ ಹಾಗೂ ಮನುಷ್ಯನ ರೂಪಗಳಲ್ಲಿ ಭಾಸವಾಗುತ್ತದೆ. ಇದೀಗ, ಈ ಪಾರಿವಾಳ ಗುಟ್ಟದ ಮೇಲೆ ೨೪ ತೀರ್ಥಂಕರರನ್ನು ಒಳಗೊಂಡಂತೆ ಅಮೃತಶಿಲೆಯಲ್ಲಿ (pink colour) ದೇವಾಲಯ ಸಮುಚ್ಚಯವನ್ನು ನಿರ್ಮಿಸುತ್ತಿದ್ದು ಪೂರ್ಣಗೊಳ್ಳುವ ಹಂತದಲ್ಲಿರುತ್ತದೆ. ಈಗ ಇಲ್ಲಿ ಈ ತೀರ್ಥಂಕರರ ಮಂದಿರಗಳಿಂದಾಗಿ ಈ ಗುಟ್ಟವು ಜನಾಕರ್ಷಣೆಯ ಪ್ರವಾಸಿ ಕೇಂದ್ರವಾಗಿ ಬೆಳೆಯುತ್ತಿದೆ. ಇಂದು ಜೈನಧರ್ಮಕ್ಕು, ಹಿಂದೂ ಧರ್ಮಕ್ಕೂ ಪರ್ವತಗುಟ್ಟವು ಜನಾಕರ್ಷಣೆಯ ಪ್ರಮುಖ ಐತಿಹ್ಯವಾಗಿದೆ.

## ಸೂಲಿಬೆಲೆ

ಸೂಲಿಬೆಲೆಯ ಕಾಶಿ ವಿಶ್ವೇಶ್ವರ ಮತ್ತು ಪ್ರಸನ್ನ ಪರಮೇಶ್ವರ ದೇವಾಲಯಗಳು ಸಹ ಸುಗಟೂರು ವಂಶಸ್ಥರ ಕಾಲದಲ್ಲಿ ನಿರ್ಮಾಣಗೊಂಡ ದೇವಾಲಯಗಳು 'ಸೂಲಿಬೆಲೆ' ಎಂಬುದಕ್ಕೆ 'ಶಿವನ–ಬೇಲಿ' ಎಂಬುದಾಗಿ ವಿವರಣೆ ನೀಡುತ್ತಾರೆ, ಈ ಗ್ರಾಮವು ಶಿವಕ್ಷೇತ್ರವಾಗಿತ್ತು, ಶಿವನ ರಕ್ಷಣೆ ಈ ಭಾಗಕ್ಕಿತ್ತು ಎನ್ನಲಾಗಿದೆ, ಶೂಲಿ–ಶಿವ, ಬೇಲಿ–ಬೆಲೆ ಎಂಬುದು ನಂತರದಲ್ಲಿ ಸೂಲಿಬೆಲೆಯಾಗಿ ಪರಿವರ್ತನೆಗೊಂಡಿದೆ ಎನ್ನುವರು. ಇಲ್ಲಿನ ಕಾಶಿ ವಿಶ್ವೇಶ್ವರ ದೇವಾಲಯದಲ್ಲಿನ ಶಿವ ಲಿಂಗವನ್ನು ಕಾಶಿ ಸುಬ್ಬಣ್ಣನವರು ವಾರಣಾಸಿಯಿಂದ ತಂದು ಪ್ರತಿಷ್ಠಾಪಿಸಿದ್ದರಿಂದ ಕಾಶಿ ವಿಶ್ವೇಶ್ವರ ಎಂಬುದಾಗಿ ಕರೆಯುತ್ತಾರೆ. ಕಾಲ್ಪನಿಕವಾಗಿಯು ಇಂತಹ ಕಥೆಗಳನ್ನು ಪೂರ್ವಿಕರು ಶಿವಶರಣರಾದ "ಮರಿಸ್ವಾಮಿ" ಎಂಬುವರ ಗದ್ದುಗೆಯು ಇದ್ದುದಾಗಿ ತಿಳಿದು ಬರುತ್ತದೆ. ಆದರೆ ಈಗ ಆ ಸ್ಥಳದಲ್ಲಿ ಅದರ ಅವಶೇಷಗಳೂ ಕಂಡಬರುತ್ತಿಲ್ಲ. ಈ ಎಲ್ಲ ಅಂಶಗಳನ್ನು ಗಮನಿಸಿದರೆ ಬಹುಶಃ ಸೂಲಿಬೆಲೆಯು ಶೈವಭಕ್ತರ, ಶರಣರ ತಾಣವಾಗಿದ್ದಿರಬಹುದು ಎಂದು ಊಹಿಸಿಲಿಕ್ಕೆ ಸಾಧ್ಯವಿದೆ.

## ಕಾವಲು ಗುಡ್ಡದ ಐತಿಹ್ಯ

ಪ್ರಸ್ತುತ ಕ್ಷೇತ್ರ ಕಾರ್ಯದಲ್ಲಿ ಹೊಸಕೋಟೆ ತಾಲ್ಲೂಕಿನ ನಂದಗುಡಿಯ ಪ್ರದೇಶವನ್ನು ಮುದ್ರಾ ವಿಶಾಖದತ್ತನ ರಾಕ್ಷಸ ನಾಟಕದಲ್ಲಿ ಬರುವ ಪ್ರಾಚೀನವಾದ ಪಾಟಲೀಪುರಕ್ಕೆ ಸೇರಿದ

ಪ್ರದೇಶವಾಗಿತ್ತು ಎಂದು ಹೇಳಲಾಗುತ್ತದೆ. ಈ ಪ್ರದೇಶದಲ್ಲಿ ಉತ್ತುಂಬಜುರಾಯನಿಂದ ಬಂಧಿತರಾದ ನವನಂದರನ್ನು ಸೆರೆಯಲ್ಲಿಡಲಾಗಿತ್ತು ಆನಂತರದಲ್ಲಿ ಪ್ರಸಿದ್ಧ ಬ್ರಾಹ್ಮಣನಾದ ಚಾಣುಕ್ಯ ನವನಂದರನ್ನು ಬಂಧಮುಕ್ತಗೊಳಿಸಿ ಮುಂದೆ ನಂದರ ಸಾಮ್ರಾಜ್ಯವನ್ನು ನಿರ್ಮಾಣ ಮಾಡಿಸಿದನು ಎಂಬುದಾಗಿ ನಂದಗುಡಿಯ ಸುತ್ತಮುತ್ತ ಹರಡಿರುವ ಜಂಬು ಮಣ್ಣಿನ ಪ್ರದೇಶ ನಂದರ ಸಾಮ್ರಾಜ್ಯಕ್ಕೆ ಸೇರಿದ್ದವೆಂದು ಹೇಳುತ್ತಾರೆ,

ಈ ಕಥೆಯನ್ನು ಕೆಲವು ಕಡೆ ದಾಖಲಿಸಲಾಗಿದೆ ಮತ್ತು ಇದಕ್ಕೆ ಸಂಬಂಧಿಸಿದಂತೆ ಕಾವಲು ಗುಡ್ಡದ ಮೇಲೆ ನವನಂದರು ಆಳ್ವಿಕೆ ನಡೆಸಿ ಶೀಥಿಲಗೊಂಡಿರುವ ಹಲವು ಅವಶೇಷಗಳನ್ನು ಕಾಣಬಹುದು, ಈ ಕೋಟೆ ಶಿಥಲವಾಯಿತು ಎನ್ನುವುದಕ್ಕೆ ಇಲ್ಲಿನ ಸ್ಥಳೀಯರು ಅದಕ್ಕೆ ಸಂಬಂಧಿಸಿದಂತೆ ಕಥೆಯನ್ನು ಹೇಳುತ್ತಾರೆ. ನವನಂದರು ದೇವನಹಳ್ಳಿ ಸಮೀಪ ಇರುವ ನಲ್ಲೂರು ಕೋಟೆಯಿಂದ ಹೆಣ್ಣನ್ನು ತಂದು ನವನಂದರ ಕೋಟೆಗೆ ಮದುವೆ ಮಾಡಿಕೊಂಡು ಬರುತ್ತಾರೆ. ಕೆಲಕಾಲದ ನಂತರ ನವನಂದರಿಗೂ ನಲ್ಲೂರು ಕೋಟೆಯವರಿಗೂ ಆಂತರಿಕ ಕಲಹಗಳು ಉಂಟಾಗಿ ಶತ್ರುಗಳಾಗಿ ಮಾರ್ಪಡುತ್ತಾರೆ, ಆಗ ನಲ್ಲೂರು ಕೋಟೆಯ ಪಾಳೇಗಾರರರು ನವನಂದರನ್ನು ಸೋಲಿಸಲು ಎಷ್ಟೇ ಪ್ರಯತ್ನ ಪಟ್ಟರು ನಲ್ಲೂರು ಪಾಳೇಗಾರರಿಂದ ಆಗುವುದಿಲ್ಲ ಆ ಕೋಟೆಯ ಒಳ ಪ್ರವೇಶಿಸಲು ಸಹ ಸಾಧ್ಯವಾಗುವುದಿಲ್ಲ ಆಗ ನಲ್ಲೂರಿನ ಪಾಳೇಗಾರರು ಸೋಲನ್ನು ಒಪ್ಪುವ ಭೀತಿಯಲ್ಲಿ ಇರುವಾಗ ನವನಂದರ ಕೋಟೆಯನ್ನು ಒಳ ಪ್ರವೇಶಿಸಲು ಸಾಧ್ಯವಾಗದಿದಲ್ಲಿ ನವನಂದರ ಕೋಟೆಯಿಂದ ಹೊರ ಬರುವ ಹಾಗೇ ಮಾಡಬೇಕೆಂದು ಉಪಾಯ ಹೂಡುತ್ತಾರೆ ಆ ಕೋಟೆಯ ಒಳಗಡೆ ನೀರು ಹೇಗೆ ಹೋಗುತ್ತದೆ ಆ ನೀರನ್ನು ಮುಚ್ಚಿದಾಗ ನೀರಿಲ್ಲದೆ ಕೋಟೆಯಿಂದ ನವನಂದರನ್ನು ಹೊರಗಡೆ ಬರುವ ಹಾಗೇ ಮಾಡಬೇಕೆಂದು ಉಪಾಯ ಹೂಡುತ್ತಾರೆ ಅದು ಸಾಧ್ಯವಾಗದಿದ್ದಾಗ ತನ್ನ ತವರು ಮನೆಯವಾರದ ನಲ್ಲೂರು ಪಾಳೇಗಾರರು ಪಡುವ ಕಷ್ಟವನ್ನು ಸಹಿಸಲಾರದೇ ಆ ಹೆಣ್ಣು ಮಗಳು ನವನಂದರ ಕೋಟೆಯ ರಹಸ್ಯವನ್ನು ಬರೆದು ಅನ್ನದಲ್ಲಿ ಬಚ್ಚಿಟ್ಟು ಅನ್ನವನ್ನು ತವರು ಮನೆಯವರಿಗೆ ತಲುಪಿಸುತ್ತಾಳೆ ಆಗ ಆ ರಹಸ್ಯವನ್ನು ಅರಿತ ನಲ್ಲೂರು ಕೋಟೆಯ ಪಾಳೇಗಾರರು ಆ ಕೋಟೆಗೆ ಹೋಗುವ ನೀರಿನ ಮಾರ್ಗವನ್ನು ಕಂಡು ಹಿಡಿಯಲು ಗಣಗಲು ಹೂವನ್ನು ಅ ಕೆರೆಗೆ ಬಿಟ್ಟಾಗ ಆ ಹೂಗಳು ಕೆರೆಯಲ್ಲಿ ತೇಲಿ ಹೋಗಿ ಆ ಕೋಟೆಗೆ ಹೋಗುವ ಜಲಮಾರ್ಗದಲ್ಲಿ ಅದು ಸುರಳಿ ಸುತ್ತುತ್ತ ಆ ಹೂವ ಮಾರ್ಗವನ್ನು ಸೂಚಿಸುತ್ತದೆ ಆಗ ನಲ್ಲೂರು ಪಾಳೇಗಾರರು ಆ ಕೋಟೆಗೆ ಹೋಗುವ ನೀರಿನ ಮಾರ್ಗದಲ್ಲಿ ದೊಡ್ಡ

ಬಂಡೆಯನ್ನು ಹಾಕುತ್ತಾರೆ ಆಗ ನವನಂದರ ಕೋಟೆಗೆ ಹೋಗುವ ನೀರು ನಿಂತಾಗ ಆಗ ನೀರಿಲ್ಲದೆ ಹೊರ ಬಂದಾಗ ಅವರನ್ನು ನಾಶಮಾಡುತ್ತಾರೆ ಈ ರೀತಿಯಾಗಿ ಅಲ್ಲಿ ನವನಂದರು ನಾಶವಾದರೆಂದು  ಇಲ್ಲಿನ ಸ್ಥಳೀಯರು ಈ ಕಥೆಯನ್ನು ಹೇಳುತ್ತಾರೆ ಆ ನೀರು ಹೋಗದಿರಲು ಹಾಕಿದ ಕಲ್ಲನ್ನು ಗಜ ಗುಂಡ್ಲು ಎನ್ನುವ ಹೆಸರಿನಿಂದ ಈಗಲೂ ಚಾಲ್ತಿಯಲ್ಲಿದೆ.

ಇದಕ್ಕೆ ಸಂಬಂಧಿಸಿದಂತೆ ಕಾವಲು ಗುಡ್ಡದ ಮುಂಭಾಗ ಇರುವ ಪುರಾತನ ಕಾಡು ಮಲ್ಲೇಶ್ವರ ದೇವಾಲಯ ಮತ್ತು ವೀರಭದ್ರೇಶ್ವರ ದೇವಾಲಯಗಳ ಮುಂದೆ ಇರುವ ಶಾಸನಗಳು ಮತ್ತು ಮಾಸ್ತಿ ಕಲ್ಲುಗಳು ವೀರಗಲ್ಲುಗಳು ನೋಡಬಹುದು, ಪ್ರಸ್ತುತ ಸಂದರ್ಭದಲ್ಲಿ ಕಾವಲು ಗುಡ್ಡಕ್ಕೆ ಸಂಬಂಧಿಸಿದಂತೆ ಇನ್ನೂ ಒಂದು ಕಥೆಯನ್ನು ಸ್ಥಳೀಯರು ಹೇಳುವುದುಂಟು ಆಗಾದ ಪ್ರಮಾಣದ ಚಿನ್ನಾಭರಣಗಳು ಈ ಗುಡ್ಡದ ಒಳಗಡೆ ಇದ್ದು ಆ ಚಿನ್ನಾಭರಣಗಳನ್ನು ಕಾಯುವುದಕ್ಕೆ ಏಳು ಎಡೆಯ ಸರ್ಪ, ಒಂದು ಕೋಣ, ಒಬ್ಬ ಅಜ್ಜಿ, ಇದ್ದಾರೆ. ನಿಧಿಯನ್ನು ತೆಗೆಯುವುದಕ್ಕೆ ಹೋದಲ್ಲಿ ಸಾವು ಕಟ್ಟಿಟ್ಟ ಬುತ್ತಿ ಎಂದು ಸ್ಥಳಿಯರು ಹೇಳುತ್ತಾರೆ, ನಮಗೆ ವಕ್ತೃಗಳಿಂದ' ತಾತನವರು ಇಂತಹ ಪ್ರಸಂಗಗಳನ್ನು ಕಂಡು ಹೇಳಿದ್ದಾರೆ, ಆ ಕಥೆ ಏನೆಂದರೆ ಬ್ರಿಟಿಷರು ಕುದುರೆಗಳಲ್ಲಿ ಈ ಗುಡ್ಡಕ್ಕೆ ಬರುತ್ತಾರೆ,

ಆಗ ಬ್ರಿಟಿಷರು ಚಿನ್ನಾಭರಣಗಳು ಇರುವ ಸ್ಥಳದಲ್ಲಿ ಅಗೆಯಲು ಯತ್ನಿಸಿದಾಗ ಅಲ್ಲಿ ಬ್ರಿಟಿಷರು ಒಂದಿಬ್ಬರು ರಕ್ತವನ್ನು ಕಾರಿಕೊಂಡು ಅಲ್ಲಿಯೇ ಸತ್ತರು ಇನ್ನೂಳಿದವರು ಇದನ್ನು ನೋಡಿ ಕುದುರೆಗಳಲ್ಲಿ ಪಾಲಾಯನಗೊಂಡರು ಎಂದು ಈ ಕಥೆಯನ್ನು ರೋಮಾಂಚನಕಾರಿಯಾಗಿ ಹೇಳುತ್ತಾರೆ, ಇನ್ನೂ ಕೆಲವರು ಈ ಚಿನ್ನಾಭರಣಗಳನ್ನು ತೆಗೆಯಲು ಹೋಗಿ ಅವರ ಸಂಸಾರವೇ ನಾಶವಾಯಿತೆಂದು ಈ ಘಟನೆಯ ಬಗ್ಗೆ ಹೇಳುತ್ತಾರೆ, ಈ ಕಾವಲು ಗುಡ್ಡದಲ್ಲಿ ಅಲ್ಲಲ್ಲಿ ಸುರಂಗ ಮಾರ್ಗಗಳು ನಂತರ ಚಿನ್ನಾಭರಣಗಳಿಗಾಗಿ ತೋಡಿರುವ ಗುಂಡಿಗಳು ಇಂದಿಗೂ ಕೂಡ ಕಾಣ ಸಿಗುತ್ತದೆ ಮತ್ತು ನವನಂದರ ಆಳ್ವಿಕೆಯ ಅನೇಕ ಅವಶೇಷಗಳು ಮತ್ತು ನಂದಗುಡಿಯ ವ್ಯಾಪಾರ ಕೇಂದ್ರದ ಸ್ಥಳ ಮತ್ತು ಶಿಥಿಲಾವಸ್ಥೆಯಲ್ಲಿರುವ ನಾಲ್ಕು ಕಲ್ಯಾಣಿಗಳನ್ನು ಕಾಣಬಹುದು.

## ರಾಗಿ ಗುಡ್ಡದ ಐತಿಹ್ಯ

ನಂದಗುಡಿ ಗ್ರಾಮದ ಪೂರ್ವ ದಿಕ್ಕಿನಲ್ಲಿರುವ ಜಂಬು ಮಣ್ಣಿನ ಗುಡ್ಡದ ಬಗ್ಗೆ ಒಂದು ಐತಿಹ್ಯ ಚಾಲ್ತಿಯಲ್ಲಿದೆ, ಇಲ್ಲಿನ ರೈತನೊಬ್ಬ ತನ್ನ ಭೂಮಿಯಲ್ಲಿ ಬೆಳೆದ ರಾಗಿ ಬೆಳೆಯನ್ನು ತೆಗೆದು ಒಂದು ಕಡೆ ರಾಗಿ ಮತ್ತೊಂದು ಕಡೆ ಹುಲ್ಲನ್ನು ಬೃಹತ್ ಪ್ರಮಾಣದಲ್ಲಿ ರಾಶಿ

ಮಾಡಿದನು. ಇದನ್ನು ನೋಡಿದ ಅವನ ಹೆಂಡತಿ ಇಂಥ ದೊಡ್ಡ ರಾಶಿಯ ರಾಗಿಯನ್ನು ನಾನು ಬೀಸ ಬೇಕಾಗುತ್ತದೆ ಎಂದು ವ್ಯಥೆ ಪಟ್ಟು ಆ ರಾಗಿ ರಾಶಿ ಮಣ್ಣಾಗಿ ಹೋಗಲಿ ಎಂದು ಶಪಿಸಿದಾಗ ತಕ್ಷಣ ಆ ರಾಶಿಗಳು ಮಣ್ಣಿನ ಗುಡ್ಡೆಗಳಾಗಿ ಮಾರ್ಪಟವಂತೆ ನೋಡಲಿಕ್ಕೆ ರಾಗಿಯ ಬಣ್ಣದಂತೆ ಇದ್ದು ಈಗಲೂ ಸಹ ಈ ಗುಡ್ಡದಲ್ಲಿ ಗಿಡಗಳು ಹುಲ್ಲು ಯಾವುದು ಸಹ ಬೆಳೆಯುವುದಿಲ್ಲ ಮತ್ತು ಈ ಗುಡ್ಡವನ್ನು ಹತ್ತಲು ಸಹ ಸುಲಭವಲ್ಲ. ಈ ಗುಡ್ಡದಲ್ಲಿ ಹಿಂದಿನ ಕಾಲದಿಂದ ಈ ಕಾಲದವರೆಗೂ ಗಿಡ ಗಂಟೆಗಳೂ ಏನೂ ಸಹ ಬೆಳೆದಿಲ್ಲ, ಎಂದು ಹಿರಿಯರು ಹೇಳುತ್ತಾರೆ, ಅದು ಸತ್ಯವಾದುದ್ದು, ರಾಗಿ ರಾಶಿ ಹಾಕಿದ ನಂತರ ಪೂಜೆ ಮಾಡುವ ಸಂದರ್ಭದಲ್ಲಿ ಆ ರಾಗಿ ಗುಡ್ಡದಲ್ಲಿರುವ ಪರಕೆ, ಮೊರ, ಒನಕೆ, ಎಲ್ಲವೂ ಅದೇ ಆಕಾರದಲ್ಲಿ ಮಣ್ಣಾಗಿರುವುದನ್ನು ಕಾಣಬಹುದು, ಈ ಗುಡ್ಡದ ಸುತ್ತ ಇರುವ ಗುಡ್ಡಗಳು ಸಹ ಹುಲ್ಲಿನ ಮೆದೆಗಳು ಎಂದು ಹಿರಿಯರು ಹೇಳುತ್ತಾರೆ, ಅವೂ ಸಹ ಮಣ್ಣಾಗಿದ್ದು, ಹುಲ್ಲಿನ ಮೆದೆಯ ಆಕಾರದಲ್ಲಿ ಇದರ ಸುತ್ತ ಇರುವ ಆಕಾರವನ್ನು ನಾವೂ ಕಾಣಬಹುದು, ಈ ರಾಗಿ ಗುಡ್ಡದ ಐತಿಹ್ಯವು ಸ್ಥಳ ಮತ್ತು ಘಟನಾ ಪ್ರದಾನ ಐತಿಹ್ಯವಾಗಿ ಗುರುತಿಸತಕ್ಕದ್ದು, ಈ ಗುಡ್ಡ ಈಗಲೂ ತೆಲುಗಿನಲ್ಲಿ ರಾಗಲುರಾಶಿ ಎಂತಲೇ ಇಲ್ಲಿ ಪ್ರಸಿದ್ದಿಯನ್ನು ಪಡೆದಿದೆ.

## ಶ್ರೀರಾಮನ ಐತಿಹ್ಯ ಸಾಸಲು ದೊಡ್ಡಬಳ್ಳಾಪುರ

ಸಾಸಲು ಗ್ರಾಮದ ಸುತ್ತ ಮುತ್ತ ಅನೇಕ ಐತಿಹ್ಯಗಳನ್ನು ಜನ ಜೀವನದ ನಿಜ ಸಂಗತಿಗಳೆಂದು ತಿಳಿದುಕೊಂಡು ಅನೇಕ ಘಟನೆಗಳನ್ನು ಕಾಣಬಹುದು ಸಾಸಲು ಹೋಬಳಿಯಲ್ಲಿ ಶ್ರೀರಾಮನಹಳ್ಳಿ ಮತ್ತು ಉಪವಾಸಪುರವೆಂಬ ಎರಡು ಗ್ರಾಮಗಳಿವೆ. ಈ ಐತಿಹ್ಯಗಳ ಬಗ್ಗೆ ಗ್ರಾಮಸ್ಥರೇ ಪುರಾಣದ ಕಡೆ ಗಮನ ಸೆಳೆಯುವಂತೆ ಮಾಡುತ್ತಾರೆ. ಸಾಸಲು ಗ್ರಾಮದ ಕಾಡಿನ ನಡುವೆ ಇರುವ ಇಪ್ಪತ್ತು ಗ್ರಾಮಗಳ ಪೈಕಿ ಇರುವ ಸಣ್ಣ ಹಳ್ಳಿ ಉಪವಾಸಪುರ ಈ ಗ್ರಾಮದ ಜನರು ಈಗಲೂ ಅನಾಗರೀಕತೆಯ ಅಂಚಿನಲ್ಲಿ ಬದುಕುತ್ತಿದ್ದಾರೆ.

ಈ ಉಪವಾಸಪುರ ಎಂಬ ಸ್ಥಳ ನಾಮದ ಐತಿಹ್ಯವು ನಮಗೆ ಹೇಳುವ ದಂತ ಕಥೆ ಏನೆಂದರೆ ರಾಮನು ವನವಾಸಕ್ಕೆ ಬಂದಾಗ ಈ ಕಾಡಿನಲ್ಲಿ ಒಂದು ದಿನವಿದ್ದರು ಆಗ ರಾಮ ಲಕ್ಷ್ಮಣ, ಮತ್ತು ಸೀತೆಗೆ ಆ ದಿನವೆಲ್ಲಾ ಆ ಕಾಡಿನಲ್ಲಿ ಊಟಕ್ಕೆ ಏನು ಸಿಗದೆ ಇದ್ದಾಗ ಉಪವಾಸವಿರಬೇಕಾದ ಪರಿಸ್ಥಿತಿ ಎದುರಾಗಿ ಆ ಕಾಡಿನಲ್ಲಿಯೇ ಮಲಗಿ ಬೆಳಗ್ಗೆ ಈ ಸ್ಥಳಕ್ಕೆ

ಉಪವಾಸಪುರವೆಂದು ಕರೆದು ಅಲ್ಲಿಂದ ಮುಂದೆ ಹೋಗುತ್ತಾರೆ, ಎಂದು ಈ ಸ್ಥಳದ ಬಗ್ಗೆ ಜನರು ಹೇಳುತ್ತಾರೆ,

ಹಾಗೆಯೇ ಉಪವಾಸಪುರದಿಂದ ಮುಂದೆ ಕಾಡಿನ ಅಂಚಿನಲ್ಲಿ ಇನ್ನೊಂದು ಹಳ್ಳಿ ಇದ್ದು ಅದು ಶ್ರೀರಾಮನಹಳ್ಳಿಯಾಗಿದೆ ಏಕೆಂದರೆ ಆ ಜನರು ಉಪವಾಸಪುರದಿಂದ ಹಸಿದು ಬಂದ ರಾಮ, ಸೀತೆ, ಲಕ್ಷ್ಮಣರಿಗೆ ಊಟ ಹಾಕಿದರಂತೆ ಅದರಂತೆ ರಾಮ ಸೀತೆ ಲಕ್ಷ್ಮಣರು ಒಂದು ರಾತ್ರಿ ಆ ಹಳ್ಳಿಗರ ನಡುವೆ ಇದ್ದು ತನ್ನ ಹೆಸರನ್ನು ಆ ಹಳ್ಳಿಗೆ ಇಟ್ಟು ಹೋದರಂತೆ. ಈ ಕಥೆಯು ಸಾಸಲು ಗ್ರಾಮದ ಸುತ್ತಮುತ್ತ ಹಳ್ಳಿಗಳಲ್ಲಿ ಹೆಚ್ಚು ಜನಪ್ರಿಯವಾಗಿದ್ದು ಈಗಲೂ ಇಲ್ಲಿನ ಜನ ಉಪವಾಸಪುರದವರನ್ನು ದರಿದ್ರದ ಜನ ಎಂತಲೂ ಹಿಯಾಳಿಸುವ ಪರಿಪಾಠವನ್ನು ಸಾಸಲು ಹೋಬಳಿಯ ಸುತ್ತ ಮುತ್ತ ಕಾಣಸಿಗುತ್ತದೆ. ಈ ಕಥೆಯನ್ನು ಬಿಟ್ಟು ಬೇರೆ ಯಾವುದನ್ನು ಈ ಜನರು ನಂಬುವುದಿಲ್ಲ,

ಈ ದೃಷ್ಟಿಯಿಂದ ಪುರಾಣ ಐತಿಹ್ಯ ಹಾಗೂ ದಂತಕಥೆಗಳು ಪರಸ್ಪರ ಸಂಬಂಧವಿದ್ದು ಐತಿಹ್ಯಗಳು ಜನ ಜನಿತವಾಗಿದೆ ಇತಿಹಾಸದ ಘಟನೆ ಎಂಬಂತೆ ಐತಿಹ್ಯ ತನ್ನದೇ ಆದ ಸ್ಥಾನವನ್ನು ಇಲ್ಲಿ ಉಳಿಸಿಕೊಂಡಿದೆ. ಆರಂಭದಲ್ಲಿ ಐತಿಹ್ಯಗಳು ಸರಳವಾಗಿದ್ದುಕಾಲಕಳೆದಂತೆ ಪೀಳಿಗೆಗೆ ವರ್ಣಾತ್ಮಕವಾಗಿ ಉತ್ಪ್ರೇಕ್ಷಿತ ವಿವರಣೆಗಳ ಹಂತವನ್ನು ತಲುಪುತ್ತಿದೆ.

## ಶಿವಗಂಗೆಯ ವಿಶೇಷತೆ

ಶಿವಗಂಗೆ ಬೆಟ್ಟದ ವಿಶೇಷವೆಂದರೆ ಪೂರ್ವಕ್ಕೆ ವೃಷಭಾಕೃತಿ, ದಕ್ಷಿಣಕ್ಕೆ ಲಿಂಗಾಕೃತಿ,ಪಶ್ಚಿಮಕ್ಕೆ ಗಣಪತಿ, ಉತ್ತರಕ್ಕೆ ಸರ್ಪದ ಆಕೃತಿಯಂತೆ ಕಾಣುತ್ತದೆ. ವಿಷ್ಣುವರ್ಧನನ ರಾಣಿ ಶಾಂತಲಾ ದೇವಿಯು ಶಿವಗಂಗೆಯಲ್ಲಿ ಸಲ್ಲೇಖನ ವ್ರತ ಕೈಗೊಂಡು ಮುಕ್ತಿ ಪಡೆದ ಸಂಗತಿ ಕ್ರಿ.ಶ.೧೧೩೧ ರ ಶ್ರಾವಣ ಬೆಳಗೊಳದ ಶಾಸನದಲ್ಲಿ ಉಲ್ಲೇಖವಾಗಿದೆ. ಇನ್ನೊಂದು ಮಾಹಿತಿಯ ಪ್ರಕಾರ ಶಾಂತಲೆಯು ಬೆಟ್ಟದ ಮೇಲಿಂದ ಬಿದ್ದು ಆತ್ಮಹತ್ಯೆಯು ಮಾಡಿಕೊಂಡಳೆಂದು ಹೇಳಲಾಗುತ್ತಿದೆ ಶಾಂತಲೆ ಬಿದ್ದ ಬೆಟ್ಟದ ಒಂದು ಸ್ಥಳಕ್ಕೆ ಬೆಟ್ಟದ ಒಂದು ಸ್ಥಳಕ್ಕೆ ಶಾಂತಲಾ ಡ್ರಾಪ್ ಎಂದು ಕರೆಯುವರು. ಕಣಾದ ಎಂಬ ಋಷಿ ಏಕಪಾದದಲ್ಲಿ ನಿಂತು ನೀರಿಗಾಗಿ ತಪಸ್ಸು ಮಾಡಿದ ಅವನ ತಪೋಶಕ್ತಿಯಿಂದ ಶಿವನ ಜಟೆಯಲ್ಲಿದ್ದ ನೀರು ಭೂಮಿಗೆ ಹರಿದು ಬಂತು. ಅದನ್ನು ಕಂಡ ಮುನಿಗಳು "ಶಿವಗಂಗಾ" ಎಂದರು ಅದೇ ಶಿವಗಂಗೆ ಕ್ಷೇತ್ರ ಆಗಿದೆ ಎಂದು ಸ್ಥಳ ಪುರಾಣ ಹೇಳುತ್ತದೆ.

## ಶಿವಗಂಗೆಯ ಇತಿಹಾಸ

೯ ಮತ್ತು ೧೦ ಶತಮಾನದಲ್ಲಿ ಶಿವಗಂಗೆ ಚೋಳರ ವಶದಲ್ಲಿತ್ತಾದರು ಇಲ್ಲಿ ಚೋಳರ ಯಾವುದೇ ದೇವಸ್ಥಾನ ಶಾಸನಗಳಿಲ್ಲ, ಆದರೆ ೧೧ ಮತ್ತು ೧೨ ನೇ ಶತಮಾನದಲ್ಲಿ ಹೊಯ್ಸಳರ ಆಳ್ವಿಕೆಯಲ್ಲಿ ಒಳಪಟ್ಟಾಗ ವಿಷ್ಣುವರ್ಧನನು ಇಲ್ಲಿಗೆ ಹಲವು ಬಾರಿ ಬೇಟಿ ನೀಡಿದ್ದಾನೆ ಎಂದು ಶಾಸನಗಳಿಂದ ತಿಳಿದು ಬರುತ್ತದೆ. ವಿಷ್ಣುವರ್ಧನನ ಪಟ್ಟದರಿಸಿ ಶಾಂತಲೆ ಬೆಟ್ಟದ ಮೇಲಿಂದ ಕೆಳಕ್ಕೆ ಬಿದ್ದು ದೇಹತ್ಯಾಗ ಮಾಡದ್ದು ಇದೆ ಶಿವಗಂಗೆ ಬೆಟ್ಟದಲ್ಲಿ ಆ ಸ್ಥಳವನ್ನು ಈಗ ಶಾಂತಲಾ ಡ್ರಾಪ್ ಎಂದು ಹೆಸರಿಸಿ ಕರೆಯಲಾಗುತ್ತಿದೆ.

ವಿಷ್ಣುವರ್ಧನನ ಪಟ್ಟದರಸಿ ಶಾಂತಲೆಯು ಕ್ರಿ.ಶ.೧೧೩೧ ರಲ್ಲಿ ಮರಣ ಹೊಂದಿದ್ದ, ಈ ಶಾಂತಲೆಯ ಸ್ಥಾನಮಾನ ಅವಳ ನಂತರ ಬಮ್ಮಲದೇವೆಗೆ ದೊರೆಯಿತು. ಈ ಬಮ್ಮಲದೇವಿ ರಾಣಿ ಕಲ್ಕಣಿನಾಡಿಗೆ ಸೇರಿದ ನಾಗಮಂಗಲದ ಶಂಕರನಾರಾಯಣ ದೇವಾಲಯವನ್ನು ಜೀರ್ಣೋದ್ದಾರಗೊಳಿಸಿದಳೆಂದು ನಾಗಮಂಗದಲ ಶಂಕರನಾರಾಯಣ ದೇವಸ್ಥಾನದ ಶಾಸನದಿಂದ ತಿಳಿಯುತ್ತದೆ.

ಹೊಯ್ಸಳರ ನಂತರ ೧೬ನೇ ಶತಮಾನದಲ್ಲಿ ವಿಜಯನಗರದ ಆಳ್ವಿಕೆಗೆ ಒಳಪಟ್ಟಿತ್ತು ಈ ಶಿವಗಂಗೆಯ ಉಸ್ತುವಾರಿಯನ್ನು ವಿಜಯನಗರದ ಸಾಮಂತರಾಜ ಶಿವಪ್ಪ ನಾಯಕನಿಗೆ ವಹಿಸಿದ್ದರು ಆಗ ಇದು ಶಿವಪ್ಪನಾಯಕ ಕೋಟೆ ಎಂದಾಗಿತ್ತು, ಆನಂತರ ಮಾಗಡಿ ಕೆಂಪೇಗೌಡರಿಗೆ ನೀಡಲಾಯಿತು, ಮಾಗಡಿ ಕೆಂಪೇಗೌಡರು ಈ ಶಿವಗಂಗೆ ಕ್ಷೇತ್ರದ ಮೇಲೆ ವಿಶೇಷವಾದ ಒಲವು ಹೊಂದಿದ್ದರಂದು ಅಲ್ಲಿನ ಶಾಸನಗಳು ಮತ್ತು ಶಿಲ್ಪ ಕಲೆಗಳು ವಿವರಿಸುತ್ತವೆ.

ಬೆಂಗಳೂರು ನಿರ್ಮಾತೃ ಕೆಂಪೇಗೌಡ ಶಾಲಿವಾಹನ ಶಕ(ಕ್ರಿ.ಶ) ೧೫೫೦ ರಲ್ಲಿ ಶಿವಗಂಗೆಯನ್ನು ತನ್ನ ಸುಪರ್ದಿಗೆ ತೆಗೆದುಕೊಂಡ ಮೇಲೆ ಈ ಕ್ಷೇತ್ರವನ್ನು ಧಾರ್ಮಿಕ ಕ್ಷೇತ್ರವನ್ನಾಗಿ ಅಭಿವೃದ್ಧಿಪಡಿಸಿ ಕಡಿದಾದ ಎತ್ತರವಾದ ಬೆಟ್ಟಕ್ಕೆ ಸಲೀಸಾಗಿ ಹತ್ತಲು ಕಲ್ಲಿನ ಮೆಟ್ಟಿಲುಗಳನ್ನು ನಿರ್ಮಿಸಲಾಯಿತು. ದೇವಾಲಯದ ಹಜಾರಗಳನ್ನು ನಿರ್ಮಿಸಿದ್ದಾರೆ.

ಆ ಪ್ರದೇಶದಲ್ಲಿ ಬೀಳುವ ಮಳೆ ನೀರನ್ನು ಸಂಗ್ರಹಿಸಿ ಮರಬಳಕೆ ಮಾಡುವ ತಂತ್ರಜ್ಞಾನದ ವ್ಯವಸ್ಥೆಯೂ ಆಯಿತು. ಅದು ಪವಿತ್ರ ಶೈವ ಕ್ಷೇತ್ರವಾಗುವಂತೆ ಶ್ರಮಿಸಿದ್ದು ಕೆಂಪೇಗೌಡರು ಅದು ಈಗ ಧಾರ್ಮಿಕ, ಐತಿಹಾಸಿಕ, ಸಾಂಸ್ಕೃತಿಕ ಸಂಗಮವಾಗಿ ಹೆಸರಾಗಿದೆ.

ವಿಜಯನಗರದ ಅರಸರಿಂದ ಶಿವಗಂಗೆ ಮ್ಯಸೂರು ಅರಸರ ವಶವಾದ ನಂತರ ಚಿಕ್ಕದೇವರಾಯನ ಕಾಲದಲ್ಲಿ ಕಳಲೆಯ ನಂಜರಾಜನೆಂಬ ಒಬ್ಬ ದಳವಾಯಿ ಕವಿಯೂ ಸಹ

ಆಗಿದ್ದನು ಕ್ರಿ.ಶ.೧೭೪೦ ರಲ್ಲಿ ಅನೇಕ ಕನ್ನಡ ಕೃತಿಗಳನ್ನು ಬರೆದಿದ್ದಾನೆ. ಇವುಗಳಲ್ಲಿ ಹಲವು ಸ್ಥಳ ಪುರಾಣಗಳ ಮಹಾತ್ಮೆಗಳನ್ನು ಬರೆದು ತಿಳಿಸಿದ್ದಾನೆ ಗರಳಪುರಿ, ಕಾಶಿ, ಭದ್ರಗಿರಿ, ಕಕ್ಕುದ್ಗಿರಿ(ದಕ್ಷಿಣ ಕಾಶಿ ಶಿವಗಂಗೆ) ಮೊದಲಾದ ಪುಣ್ಯಸ್ಥಳಗಳ ಮಹಿಮೆಯನ್ನು ಪ್ರಶಂಸಿಸುವ ಕಾವ್ಯಗಳು ಈ ಸೇನಾನಿಯ ಹೆಸರಿನಲ್ಲಿ ಪ್ರಸಿದ್ದವಾಗಿವೆ. ಈತನ ಕಾವ್ಯದಲ್ಲಿ ಶಿವಗಂಗೆ ಕ್ಷೇತ್ರವನ್ನು ಕಕ್ಕುದ್ಗಿರಿ ಎಂದು ಹೆಸರಿಸಿದ್ದಾನೆ.

ಹಲವು ಅಚ್ಚರಿಯ ಸಂಗತಿಗಳನ್ನು ಈ ಬೆಟ್ಟ ಹೊಂದಿದೆ. ಅದರಲ್ಲಿ ಒಂದು ಬೆಟ್ಟದ ತುದಿಯಲ್ಲಿರುವ ಬೆಳ್ಳಿ ಗಂಟೆ. ಈ ಗಂಟೆ ಸಮರ್ಪಿಸಿದವರು ಕೆಂಪೇಗೌಡ ಚಿನ್ನದ ಗಂಟೆಯು ಬೆಟ್ಟದ ಕಡಿದಾದ ಬೃಹತ್ ಬಂಡೆಯ ಕಲ್ಲಿಗೆ ಅಳವಡಿಸಲಾಗಿತ್ತು. ಆದರೆ ಹೀಗೆ ಸುಮಾರು ೩೦ ವರ್ಷದ ಹಿಂದೆ ಕಳ್ಳರು ಕದ್ದಿದ್ದಾರೆ.

೧೬ ನೇ ಶತಮಾನದ ಗಂಗಾಧರೇಶ್ವರ ದೇವಾಲಯದ ನವರಂಗ ಸಿಂಹದ್ವಾರ ನಿರ್ಮಿಸಲಾಯಿತು. ಇದೇ ಕಾರಣಕ್ಕೆ ಈ ಬಾಗಿಲುವಾಡದ ಕೆಳಗಡೆ ಕೆಂಪೇಗೌಡ, ಆತನ ಪತ್ನಿ, ಪುತ್ರ ಪುತ್ರಿಯರ ಉಬ್ಬು ಶಿಲೆಗಳಿವೆ. ಶಿವಗಂಗೆ ಬೆಟ್ಟದ ಬುಡದಲ್ಲಿ ರಾಯಗೋಪುರ (ಕೆಂಪೇಗೌಡ ಗೋಪುರ) ಮತ್ತು ಬೆಟ್ಟದ ಮೇಲೆ "ಕೆಂಪೇಗೌಡರ ಹಜಾರ" ನಿರ್ಮಾಣವಾಗಿದೆ.

ಶಿವಗಂಗೆಯಲ್ಲಿ ಎರಡು ಜಾತ್ರೆಗಳು ನಡೆಯುತ್ತವೆ. ಗಂಗಾಧರೇಶ್ವರನ ಜಾತ್ರೆ ಇದನ್ನು "ಗಂಗಪ್ಪನಧಾರೆ" ಎಂದು ಕರೆಯುತ್ತಾರೆ ಇದು ಧನಗಳ ಜಾತ್ರೆಯಾಗಿದ್ದು ಪ್ರತಿ ವರ್ಷ ಜನವರಿಯಲ್ಲಿ ಸಂಕ್ರಾತಿಯ ದಿನದಂದು ನಡೆಯುತ್ತದೆ ಏಕೆಂದರೆ ಗಿರಿಯ ತುದಿಯಲ್ಲಿರುವ ತೀರ್ಥಕಂಬದಲ್ಲಿ ಸಂಕ್ರಾಂತಿಯ ಕಾಲದಲ್ಲಿ ಗಂಗಾಧರೇಶ್ವರನ ಕಲ್ಯಾಣಕ್ಕೆ ಗಂಗೋಧಕ ಬರುವುದೆಂದು ಇಲ್ಲಿನ ಜನರ ನಂಬಿಕೆ ಸಂಕ್ರಾಂತಿಯ ದಿನ ಈ ತೀರ್ಥ ಕಂಬಕ್ಕೆ ಕೈಲಾಸ ದೀವಟಿಗೆಯನ್ನು ಹಚ್ಚಿ ಜಾತ್ರೆಗೆ ಚಾಲನೆಯನ್ನು ನೀಡುವ ಸಂಪ್ರದಾಯವನ್ನು ಇಲ್ಲಿನ ಜನ ಸಾಂಸ್ಕೃತಿಕ ಪರಂಪರೆಯನ್ನು ಜಾತ್ರೆಗಳ ಮೂಲಕ ಇಂದಿಗೂ ಉಳಿಸಿಕೊಂಡು ಬರುತ್ತಿದ್ದಾರೆ. ಈ ಜಾತ್ರೆಯಲ್ಲಿ ಅಡಿ ಹೆಚ್ಚು ದನ–ಕರುಗಳ ವಹಿವಾಟು ನಡೆಸುತ್ತಾರೆ, ಮತ್ತು ಅತ್ಯುತ್ತಮ ದ'ನಗಳಿಗೆ ಬಹುಮಾನಗಳ ವಿತರಣೆಯನ್ನು ಇತ್ತೀಚಿನ ಜಾತ್ರೆಗಳ ಸಂದರ್ಭದಲ್ಲಿ ನಡೆಯುತ್ತಿದೆ ಆನಂತರದಲ್ಲಿ ಇಲ್ಲಿ ವಸಂತರಾಯನ ಜಾತ್ರೆ ಮತ್ತು ಹೊನ್ನಾದೇವಿಯ ಜಾತ್ರೆ ಪ್ರತಿ ಚೈತ್ರ ಬಹುಳ ಕಾಲದಲ್ಲಿ ನಡೆಸಿಕೊಂಡು ಬರುತ್ತಿದ್ದಾರೆ.

ಈ ಸಂದರ್ಭದಲ್ಲಿ ಹೊನ್ನಾದೇವಿಗೆ ಇಲ್ಲಿ ಬೆನ್ನು ಪೂಜೆಯನ್ನು ನಡೆಸುತ್ತಾರೆ ಏಕೆಂದರೆ ಹೊನ್ನಾದೇವಿಗೆ ವಸಂತರಾಯನು ಕೊಟ್ಟ ಶಾಪದಿಂದ ಹೊನ್ನಾದೇವಿಗೆ ಬೆನ್ನು

ಪೂಜೆ ಮಾಡುತ್ತೇವೆ. ದೇವಿಯ ಮುಖಕ್ಕೆ ಪೂಜೆ ಸಲ್ಲಿಸದರೆ ಈ ಭಾಗದ ಜನಕ್ಕೆ ಕೇಡು ಉಂಟಾಗುತ್ತದೆ ಆದ್ದರಿಂದ ಈಗಲೂ ಹೊನ್ನಾದೇವಿಗೆ ಬೆನ್ನು ಪೂಜೆ ಮಾಡುತ್ತೇವೆ ಎಂದು ಅರ್ಚಕರು ಹೇಳುತ್ತಾರೆ. ಇಲ್ಲಿನ ಜನ ವಸಂತೋತ್ಸವನ್ನೇ ವಸಂತರಾಯನ ತೇರು ಎಂದು ಭಾವಿಸುತ್ತಾರೆ ಗವಿಯಲ್ಲಿನ ಹೊನ್ನಾದೇವಿಯ ವಿಗ್ರಹದ ಶೀರೋ ಭಾಗದಲ್ಲಿನ ಶ್ರೀ ಚಕ್ರಕ್ಕೆ ಮಾಡುವ ಪೂಜೆಯನ್ನು ಬೆನ್ನು ಪೂಜೆ ಎಂದು ಜನ ಸಾಮಾನ್ಯರು ತಪ್ಪು ಕಲ್ಪಿಸಿಕೊಂಡು ಇದಕ್ಕೆ ಕಥೆಯೊಂದನ್ನು ಕಟ್ಟಿದ್ದಾರೆ.

ನೆಲಮಂಗಲ ತಾಲ್ಲೂಕಿನ ಪ್ರಮುಖ ಐತಿಹ್ಯವಾದ ಶಿವಗಂಗೆಯನ್ನು ನನ್ನ ಅಧ್ಯಯನದ ವ್ಯಾಪ್ತಿಯಲ್ಲಿ ಇದ್ದು, ಇದು ಒಂದು ಪ್ರಮುಖವಾದ ಐತಿಹ್ಯವಾಗಿದೆ, ಈ ಐತಿಹ್ಯವು ಸಾಂಸ್ಕೃತಿಕವಾಗಿ ಧಾರ್ಮಿಕವಾಗಿ ಮತ್ತು ಚಾರಿತ್ರಿಕವಾಗಿ ಮಹತ್ವವನ್ನು ಪಡೆದುಕೊಂಡಿದ್ದು, ಇಲ್ಲಿ ಜಾನಪದೀಯವಾಗಿ ಅನೇಕ ಪುರಾಣ ಕಥೆಗಳು ನಮಗೆ ಸಿಗುತ್ತದೆ. ಶಿವಗಂಗೆಯು ನೆಲಮಂಗಲ ತಾಲ್ಲೂಕಿನ ಒಂದು ಊರು ಮತ್ತು ಪವಿತ್ರವಾದ ಗಿರಿಕ್ಷೇತ್ರವಾಗಿದೆ. ಈ ಊರಿನ ಹೊಂದಿಕೊಂಡಿರುವಂತೆ ಶಿವಗಂಗೆ ಬೆಟ್ಟ ಸುಮಾರು ೧.೩೮೯.೫೮ ಕಿಮೀ ಎತ್ತರವಿದೆ, ಇದನ್ನು ಕಕೋದ್ಗಿರಿಯೆಂದು ಕರೆಯುವುದುಂಟು, ಈ ಬೆಟ್ಟದ ಪೂರ್ವಕ್ಕೆ ಮಹಿಮೆರಂಗನಗುಡ್ಡ ಪಶ್ಚಿಮಕ್ಕೆ ರಾಗಿಬೆಟ್ಟ (ರಾಮದೇವರ ಬೆಟ್ಟ), ಉತ್ತರಕ್ಕೆ ನರಸಿಂಹನ ಬೆಟ್ಟ, ದಕ್ಷಿಣಕ್ಕೆ ಕಾಡುಕಲ್ಲಪ್ಪನ ಬೆಟ್ಟ ಇದೆ, ಈ ಶಿವಗಂಗೆ ಬೆಟ್ಟವನ್ನು ದಕ್ಷಿಣ ದಿಕ್ಕಿನಿಂದ ನೋಡಿದರೆ ವೃಷಭಾಕಾರವಾಗಿಯು, ಪಶ್ಚಿಮ ದಿಕ್ಕಿನಿಂದ ನೋಡಿದರೆ ಗಣೇಶಾಕಾರವಾಗಿಯೂ, ಮತ್ತು ಉತ್ತದ ದಿಕ್ಕಿನಿಂದ ನೋಡಿದರೆ ಸರ್ಪಕಾರವಾಗಿಯೂ ಕಾಡುತ್ತದೆ ಎಂದು ಹೇಳುತ್ತಾರೆ, ಈ ಕ್ಷೇತ್ರವನ್ನು ಕಕ್ಷಿಣ ಕಾಶಿಯೆಂದು ಕರೆಯಲಾಗುತ್ತದೆ. ಈ ಸ್ಥಳವನ್ನು ೧೨ನೇ ಶತಮಾನದಲ್ಲಿ ಶೀವಗಂಗೆ ಎಂಬ ಹೆಸರಿನಿಂದ ಕರೆಯಲಾಗಿದೆ.

ಹೊಯ್ಸಳ ದೊರೆ ವಿಷ್ಣುವರ್ಧನನ ಪಟ್ಟಮಹಿಷಿ ಶಾಂತಲದೇವಿ ೧೧೩೧ ರಲ್ಲಿ ಶಿವಗಂಗೆಯಲ್ಲಿ ನಾಟ್ಯದಲ್ಲಿ ತಲ್ಲೀನವಾಗಿ ಬೆಟ್ಟದ ಮೇಲಿನಿಂದ ಬಿದ್ದು ಸ್ವರ್ಗಸ್ಥಳಾದಳೆಂದು ತಿಳಿದು ಬರುತ್ತದೆ. ಈ ಕ್ಷೇತ್ರದಲ್ಲಿ ಹಲವು ಕಟ್ಟಡಗಳನ್ನು ನಿರ್ಮಾಣ ಮಾಡಿಸಿದ್ದು, ಮಾಗಡಿಯ ಕೆಂಪೇಗೌಡ ಎಂದು ತಿಳಿದು ಬರುತ್ತದೆ.

ಶಿವಗಂಗೆಯ ಬಗ್ಗೆ ಅನೇಕ ಜನಪದಿಯ ಪುರಾಣ ವ್ಯಕ್ತಿಗಳ ಬಗ್ಗೆ ಗುರುತಿಸಿದ್ದು, ಇವರ ಪ್ರಕಾರ ಶಿವಗಂಗೆಯೂ ನಂದಿಯ ಉಗ್ರ ತಪ್ಪಸ್ಸಿನ ಕ್ಷೇತ್ರ ಮಾಯೇ ಬಾಸುರಂಗನೆಯಿಂದ ಮೋಹಕ್ಕೊಳಗಾದ ನಂದಿ ಶಾಪ ಕಳೆದುಕೊಳ್ಳಲು ನೆಲಕ್ಕ ತಲೆಕೆಳಗಾಗಿ ನಿಂತು ತಪಗೈದು ಶಿವನನ್ನೊಲಿಸಕೊಂಡ ಕಾರಣ ಇದನ್ನು ಕಕೋದ್ಗಿರಿಯೆಂದು ವೃಷಭಾದ್ರಿ

ಭಸ್ಕರ ಕ್ಷೇತ್ರವೆನಿಸಿತು ಕಾಣದ ಋಷಿಯ ಕಠೋರ ತಪಸ್ಸಿನ ಆಚರಣೆ ಬಗ್ಗೆ ಋಷ್ಯಶೃಂಗ ಮುನಿ ಈ ಕಥೆಯನ್ನು ಇಲ್ಲಿ ಕೇಳಿದ್ದರಿಂದ ಇದು ರುಷ್ಯ ಶೃಂಗ ಪರ್ವತ ಎನಿಸಿತು, ಕಣಾದ ಮುನಿಯ ಕಠೋರ ತಪ್ಪದ ಜವಾಲೆ ಭೂಮಿಯಿಂದ ಸ್ವರ್ಗದವರೆಗೆ ತಾಗಿ ದೇವತೆಗಳು ಶಿವ ಮೊರೆ ಹೊಕ್ಕಾಗ ಬಾಗಿನಲ್ಲಿ ಬಂದು ಮುನಿಯನಿಷ್ಠೆ ನೋಡಿ ಅಚ್ಚರಿಯಿಂದ ಶಿವ ತಲೆ ತೂಗುತ್ತಿದ್ದ, ಆಗ ಅವನ ಜಟಾಜೂಟದಿಂದ ಧಾರೆಯಾಗಿ ಇಳಿಯುತ್ತಿದ್ದ ಗಂಗೆಯನ್ನು ನೋಡಿ "ಶಿವ–ಗಂಗಾ" ಎಂದು ಆನಂದದಿಂದ ಉದ್ಗರಿಸಿದ ಶಿವ ಅವನಿಚ್ಛೆಯಂತೆ ಆ ಕ್ಷೇತ್ರಕ್ಕೆ ಶಿವಗಂಗಾ ಕ್ಷೇತ್ರವಾಗಲೀ ಎಂದು ವರವಿತ್ತನೆಂದು ಇಲ್ಲಿನ ಜನರು ಶಿವಗಂಗೆಯ ಬಗ್ಗೆ ಹೇಳುತ್ತಾರೆ.

ಇಲ್ಲಿನ ಅಗಸ್ತ್ಯ ತೀರ್ಥದಲ್ಲಿ ಅಗಸ್ತ್ಯರು ತಪಸ್ಸು ಮಾಡಿದರು ಎಂದು ಪ್ರತೀತಿ, ಇಲ್ಲಿ ಅಗಸ್ತ್ಯರು ಲಿಂಗವಿದ್ದು ಈ ತೀರ್ಥದ ಸುತ್ತಲೂ ೧೦೮ ಲಿಂಗಗಳಿವೆ, ಅಗಸ್ತ್ಯನಿಗೆ ಗಿರಿಜಾಕಲ್ಯಾಣ ಮಾಡಲು ಗಂಗೆಯ ಅವಶ್ಯಕತೆ ಇದ್ದುದರಿಂದ ಅಲ್ಲಿ ಶಿವ ಉದ್ಭವ ಗಂಗೆಯನ್ನು ಕರುಣಿಸಿದ ಹಾಗಾಗಿ "ಶಿವಗಂಗೆ" ಎಂದೆನಿಸಿತು, ಎಂದು ಇನ್ನು ಕೆಲವರು ಜನ ಸಾಮಾನ್ಯರು ಈ ಐತಿಹ್ಯದ ಬಗ್ಗೆ ಮಾಹಿತಿಯನ್ನು ನೀಡಿದರು, ಇದಲ್ಲದೆ ಶಿವಗಂಗೆಯನ್ನು ಕೃತಯುಗದಲ್ಲಿ ಮಂದಾಕಿನ ಬೆಟ್ಟ, ತ್ರೇತಾಯುಗದಲ್ಲಿ ಏಕಶೃಂಗಬೆಟ್ಟ, ದ್ವಾಪರಯುಗದಲ್ಲಿ ಪುಂಗವಾದ್ರಿ ಬೆಟ್ಟ, ಕಲಿಯುಗದಲ್ಲಿ ಕಕೋದ್ಗಿರಿಯೆಂದು ಕರೆಯುತ್ತಿದ್ದರು, ಎಂದು ಶಿವಗಂಗೆಯ ಬಗ್ಗೆ ಹೇಳುತ್ತಾರೆ, ಶಿವಗಂಗೆಯನ್ನು ಕಕೋದ್ಗಿರಿಯೆಂದು ಎಲ್ಲಾ ಪುರಾಣ ಸಾಹಿತ್ಯದಲ್ಲಿ ಸಾಮಾನ್ಯವಾಗಿ ಉಕ್ತಗೊಂಡಿದೆ ಹಾಗಾಗಿ ಹೆಚ್ಚು ಪ್ರತಿನಿಧಿಕವೆನಿಸಿದೆ,

ಬೆಟ್ಟ ಸ್ವರೂಪಕ್ಕೆ ಅನುಗುಣವಾಗಿ ಪ್ರಾಕೃತಿಕವಾಗಿ ಬಂದ ಹೆಸರಿರಬೇಕು, ಇಲ್ಲಿ ಮೆಟ್ಟಿಲುಗಳ ಸಂಖ್ಯೆ ಹಾಗೂ ಕಾಶಿಗಿರುವ ದೂರಕ್ಕೆ ಸಂಬಂಧ ಕಲ್ಪಿಸಿ ದಕ್ಷಿಣಕಾಶಿ ಎಂದು ಈ ಗಿರಿಗೆ ಹೆಸರಿದೆ ಅಲ್ಲದೆ ದಕ್ಷಿಣ ಕೈಲಾಸ ಅಭಿನವ ಕೈಲಾಸ ಎಂಬ ಖ್ಯಾತಿಯಿದೆ.

ಈ ಬೆಟ್ಟದ ಸುತ್ತ ಐದು ಕಾಲು ನಡಿಗೆ ದಾರಿಗಳಿದ್ದು ೬೪ ಸಾವಿರ ತೀರ್ಥಗಳಿವೆ, ಎಂದು ಹೇಳುತ್ತಾರೆ, ಈ ಕ್ಷೇತ್ರವನ್ನು ಅಷ್ಠಾಷಷ್ಟಿ ಸಹಸ್ರ ಪುಷ್ಕರಿಣಿ ಕ್ಷೇತ್ರ ಎಂದು ಕರೆಯುತ್ತಾರೆ, ಬಹುತೇಕ ಪೌರಾಣಿಕ ನೆಲೆಯನ್ನು ಹೊಂದಿರುವ ಶಿವಗಂಗೆಯಲ್ಲಿ ಬೆಟ್ಟಕ್ಕೆ ಹೋಗುವ ಮಹಾದ್ವಾರದಲ್ಲಿ ಕಮಲ ತೀರ್ಥವಿದೆ, ಈ ತೀರ್ಥದ ನಾಲ್ಕು ಕಡೆಗೈ ಪ್ರವೇಶ ದ್ವಾರಗಳು ಇದ್ದು ಸೋಪಾನದ ಸುತ್ತಲು ರಾಮಾಯಣ, ಮಹಾಭಾರತ, ಭಾಗವತದ ಚಿತ್ರಗಳು ಕೆತ್ತಲ್ಪಟ್ಟಿವೆ.

ಮಹಾದ್ವಾರದ ಎಡಭಾಗದಲ್ಲಿ ವಿಘ್ನೇಶ್ವರನ ವಿಗ್ರಹವಿದೆ, ಇದರ ಪಶ್ಚಿಮಕ್ಕೆ ವೀರಭದ್ರ ದೇವಾಲಯ ಸ್ವಲ್ಪ ಮುಂದೆ ಬಲಭಾಗದಲ್ಲಿ ಷಣ್ಮುಖಸ್ವಾಮಿ ದೇವಾಲಯವಿದೆ, ಎರಡನೇಯ ಮಹಾದ್ವಾರದ ಪ್ರವೇಶದ ಹತ್ತಿರವೇ ಪಾತಾಳಗಂಗೆಗೆ ಮೆಟ್ಟಿಲುಗಳು ಇವೆ, ಇದರ ಪಕ್ಕದಲ್ಲೇ ವೀರಭದ್ರನ ಮೂರ್ತಿ ಇದೆ, ಇದೇ ಪ್ರಕಾರದ ಆಗ್ನೇಯ ದಿಕ್ಕಿನಿಂದ ಮುಂದುವರಿದರೆ ಪುರಾತನ ಹೊನ್ನಮ್ಮಗವಿ ಮಠವಿದೆ, ಇದರ ನೈಋತ್ಯಕ್ಕೆ ಶಂಕರಾಚಾರ್ಯರ ತೀರ್ಥವಿದೆ, ಇದನ್ನು ಶಂಭು ತೀರ್ಥವೆಂದು ಕರೆಯುತ್ತಾರೆ, ಇದರ ಹತ್ತಿರ ಇರುವ ಗುಹೆಯನ್ನು ಶಂಕರರ ಗುಹೆಯೆನ್ನುತ್ತಾರೆ.

ಮೂರನೇಯ ಮಹಾದ್ವಾರದ ಬಳಿ ಹೊನ್ನಾದೇವಿ (ಸ್ವರ್ಣಾಂಬೆ) ಗುಹಾಂತರ ದೇವಾಲಯವಿದೆ, ಈ ದೇವಾಲಯ ೪೦ ಅಡಿ ಚಚ್ಚೌಕವಾಗಿದ್ದು ಇಲ್ಲಿನ ಹೊನ್ನಾದೇವಿಯ ಮೂರ್ತಿ ಸುಮಾರು ೫ ಅಡಿ ಎತ್ತರವಾಗಿದ್ದು, ರಕ್ತ ವೀಜಾಸುರನನ್ನು ಮರ್ದಿಸುವ ಭಂಗಿಯಲ್ಲಿದ್ದು ಅಷ್ಟಬಾಹುಗಳನ್ನು ಹೊಂದಿದೆ. ಈ ಗುಹೆಯ ಪೂರ್ವಭಿಮುಖವಾಗಿ ಮತ್ತೊಂದು ಶಿಲಾ ಭೈರವಿ ವಿಗ್ರಹವಿದೆ, ಇದು ಹೊಯ್ಸಳರ ಕಾಲದ್ದು, ಹೊನ್ನಾದೇವಿಯ ದೇವಾಲಯವನ್ನು ಬಿಟ್ಟು ಕಡಿದಾದ ಮೆಟ್ಟಿಲುಗಳನ್ನು ಹತ್ತಿ ಮುಂದೆ ಹೋದರೆ ಸಿಕ್ಕುವುದು ಪ್ರಸನ್ನ ಗಂಗಾಧರೇಶ್ವರ ಗುಹಾಂತರ ದೇವಾಲಯ, ಈ ದೇವಾಲಯ ದೊಡ್ಡ ಪ್ರಕಾರವನ್ನು ಹೊಂದಿದು ನಂದಿಮಂಟಪ್ಪ, ನಾಲ್ಕು ಸುಂದರವಾದ ಘಂಟೆಯಾಕಾರದ ಹೊಯ್ಸಳ ಸ್ಥಂಭಗಳನ್ನು ಒಳಗೊಂಡಿದೆ ಇಲ್ಲಿ ಶಾಸನಗಳು ಶಿವಗಂಗನಾಥ ದೇವರಿಗೆ ೧೧೯೬ ರಲ್ಲಿ ದತ್ತಿ ಬಿಟ್ಟ ವಿಷಯವನ್ನು ತಿಳಿಸುತ್ತದೆ.

ಇಲ್ಲಿನ ಬೃಹದಾಕಾರದ ಕಂಚಿನ ಗಂಟೆಯನ್ನು ಓಂಕಾರ ಘಂಟೆಯೆಂದು ಕರೆಯುತ್ತಾರೆ, ಶಾಸನದ ಪ್ರಕಾರ ಇದು ಒಂದನೇಯ ಕೆಂಪೇಗೌಡನ ಕಾಣಿಕೆಯೆಂದು ತಿಳಿದು ಬರುತ್ತದೆ. ದಕ್ಷಿಣಾಭಿಮುಖವಾಗಿರುವ ನವರಂಗದಲ್ಲಿ ದ್ವಾರ ಪಾಲಕರನ್ನು ಒಳಗೊಂಡಿದೆ, ಬಾಗಿಲು ಪವಾಡದಲ್ಲಿ ಗಜಲಕ್ಷ್ಮೀಯ ವಿಗ್ರವಿದೆ, ಗುಹೆಯಲ್ಲಿರುವ ಕೆಲವು ವಿಗ್ರಹಗಳು ಒಂದನೇಯ ಕೆಂಪೇಗೌಡ ಮತ್ತು ಆತನ ಕುಟುಂಬದವರು ಎನ್ನಲಾಗುತ್ತಿದೆ. ಕಲ್ಲಿನ ಮತ್ತು ಪಂಚಲೋಹದ ಕೆಲವು ವಿಗ್ರಹಗಳೂ ಇಲ್ಲಿವೆ, ಗರ್ಭಗುಡಿಯಲ್ಲಿ ಸಣ್ಣ ಸುಕನಾಸಿಯರನ್ನು ಹೊಂದಿದೆ, ಒಳಗೆ ಮೂರು ಅಡಿ ಎತ್ತರದ ಲಿಂಗವಿದೆ, ಇದು ಬಹುಶಃ ಹೊಯ್ಸಳರ ಕಾಲದ್ದಾಗಿದೆ ಪೂರ್ವಾಭಿಮುಖವಾಗಿರುವ ಇಲ್ಲಿನ ಕೊಠಡಿಯೊಂದನ್ನು ಕೆಂಪೇಗೌಡ ಖಜಾನೆಯೆಂದು ಹೇಳುವರು.

ಒನಕೆ ಗುಂಡಿಯ ನಂತರ ಕಡಿದಾದ ಮೆಟ್ಟಲುಗಳನ್ನು ಏರಿ ಮುಂದಕ್ಕೆ ಹೋದರೆ ಕೋಡುಗಲ್ಲು ಬಸವನ ವಿಗ್ರಹವಿದೆ, ಇಲ್ಲಿ ಇರುವ ಶಾಸನದ ಪ್ರಕಾರ ೧೩೮೮ ರಲ್ಲಿ ಈ ವಿಗ್ರಹವನ್ನು ವೀರಭದ್ರನಗುಡಿ ಇದೆ, ಇದಕ್ಕೆ ಉತ್ತರಾಭಿಮುಖವಾಗಿ ಗಿರಿಯ ತುದಿಯಲ್ಲಿರುವ ತೀರ್ಥಕಂಬದಲ್ಲಿ ಮಕರ ಸಂಕ್ರಾಂತಿಯ ಕಾಲದಲ್ಲಿ ಗಂಗಾಧರೇಶ್ವರನ ಕಲ್ಯಾಣಕ್ಕೆ ಗಂಗೋದಕ ಬರುವುದೆಂದು ಸ್ಥಳ ಪ್ರತೀತ ಉರಿಗಂಘದ ಮಾರ್ಗಶಿರ ಮಾಸದ ಪೂರ್ಣಿಮೆಯ ದಿನ ಕೈಲಾಸ ದೀವಟಿಗೆಯನು ಹಚ್ಚುತ್ತಾರೆ, ತೀರ್ಥಕಂಬದ ಅಷ್ಟಾಕೃತಿಯಲ್ಲಿದೆ, ಕಂಭದ ತಳಭಾಗದ ಶಾಸನಗಳ ಪ್ರಕಾರ ಹೊಯ್ಸಳ ಬಂದನೇಯ ನರಸಿಂಹನ ಆಳ್ವಿಕೆಯಲ್ಲಿ ಇದನ್ನು ಕೂಸು ಬಸವಣ್ಣ ಎಂಬುವನು ನಿಲ್ಲಿಸಿದನೆಂದು ತಿಳಿದು ಬರುತ್ತದೆ.

ಶಾಂತಲದೇವಿಯ ಜ್ಞಾಪಕಾರ್ಥವಾಗಿ ಕಟ್ಟಿಸಿದ ಶಾಂತೇಶ್ವರ ದೇವಾಲಯ ಮಹಾದ್ವಾರದ ಹತ್ತಿರ ಇದೆ, ಶಾರದಾ ದೇವಾಲಯದಲ್ಲಿರುವ ಶಾರದಾಮೂರ್ತಿ ಅಮೃತ ಶಿಲೆಯಲ್ಲಿ ಕೆತ್ತಲ್ಪಟ್ಟಿದೆ. ಇದರ ಪ್ರತಿಷ್ಠಾಪನೆ ೧೯೧೦ ರಲ್ಲಿ ಆಯಿತೆಂದು ಹೇಳುವರು, ಈ ಕ್ಷೇತ್ರದ ಕಣ್ವ ತೀರ್ಥವನ್ನು ೧೬೫೨ ಕ್ಕು ಶಿವಾಜಿಯ ತಂದೆ ಶಹಾಜಿಯ ಆಳ್ವಿಕೆಯಲ್ಲಿ ಕಟ್ಟಿಸಿದುದೆಂದು ಇಲ್ಲಿನ ಶಾಸನದಿಂದ ತಿಳಿದು ಬರುತ್ತದೆ, ಕಳಲೆಯ ನಂಜರಾಜ ೧೮ನೇ ಶತಮಾನದಲ್ಲಿ ಕಕೋದ್ಗಿರಿ ಮಹಾತ್ಮ ಎಂಬ ಗ್ರಂಥವನ್ನು ರಚಿಸಿದ್ದಾನೆ.

ಇತಿಹಾಸ ಪ್ರಸಿದ್ಧವಾದ ಧಾರ್ಮಿಕ ಹಾಗೂ ಸಾಂಸ್ಕೃತಿಕ ಕೇಂದ್ರವಾದ ಶಿವಗಂಗೆಯು ತನ್ನದೇ ಆದ ಪರಿಸರ ತನ್ನದೇ ಆದ ಚರಿತ್ರೆಯನ್ನು ಹೊಂದಿದೆ, ಶಿವಗಂಗೆ ಹಾಗೂ ಸಿದ್ದರ ಬೆಟ್ಟ ಈ ಮೂರು ಕ್ಷೇತ್ರಗಳಿಗೆ ಪರಸ್ಪರ ಸಂಬಂಧ ಸಂಪರ್ಕಗಳಿದ್ದು ಅವುಗಳ ಸುತ್ತ–ಮುತ್ತ ನಡೆದ ಧರ್ಮ ಜಾಗೃತಿಯ ಕೆಲಸ ಉಲ್ಲೇಖ ಅರ್ಹವಾಗಿದೆ.

ಶಿವಗಂಗೆಯಲ್ಲಿ ದೊರೆಯುವ ಐತಿಹ್ಯಗಳಿಂದ ಇತಿಹಾಸ ಕುರುಹು ಅದರ ಪ್ರಾಚೀನತೆಯು ಎರಡು ಸಾವಿರ ವರ್ಷಗಳಷ್ಟು ಹಿಂದಕ್ಕೆ ಹೋಗುತ್ತದೆ.

ಶಿವಗಂಗೆಯ ಧಾರ್ಮಿಕ ಪರಂಪರೆ ಮುಖ್ಯವಾಗಿ ಶಿವಶಕ್ತಿಯರ ಸಂವೇದನೆಯಾಗಿದ್ದು ಜೊತೆಗೆ ವೈಷ್ಣವ ಜೈನ ಹಾಗೂ ಬೌದ್ಧ ಧರ್ಮದ ಕುರುಹುಗಳು ಸಹ ಇದ್ದು ಶಕ್ತಿ ವಿಶಿಷ್ಠಾದ್ವೈತ ಹಾಗೂ ಅದ್ವೈತ ಸಿದ್ದಾಂತಗಳು ಸಹಯೋಗ ಸಮನ್ವಯವನ್ನು ಪಡೆದು ಇಲ್ಲಿನ ಎಲ್ಲಾ ಧರ್ಮಗಳು ಚರಿತ್ರೆಯ ಕಾಲದಲ್ಲಿ ಚಂದ್ರಗುಪ್ತ, ಅಶೋಕ ಹಾಗೂ ವಿಕ್ರಮಾದಿತ್ಯರು ಇಲ್ಲಿಗೆ ಯಾತ್ರೆ ಬಂದಿದ್ದಾರೆಂದು ಪ್ರತೀತಿ ಇದೆ.

ಬೌದ್ಧ, ಜೈನ ಕಾಳಮುಖ, ನಾಥಪಂಥ, ಶಾಕ್ತಶೈವ, ವೀರಶೈವ ಹಾಗೂ ಅದ್ವೈತ ಸಿದ್ಧಾಂತಗಳೂ ಚಾಲ್ತಿಯಲ್ಲಿದ್ದವು ತಾರಾ ಭಗವತಿ ಮತ್ತು ಚಂದ್ರಕಲಾಪರಮೇಶ್ವರಿ ಯಕ್ಷಿಯ

ಆರಾಧನೆ ನಡೆಯುತ್ತಿತ್ತು, ಸ್ರಂಭಗಳನ್ನಿಟ್ಟು ಪಾದಗಳನ್ನು ಕೆತ್ತುವುದು ಆಗಿನ ಬೌದ್ಧಕಾಲದ ಪದ್ಧತಿ ಇತ್ತು ಎಂದು ಹೇಳುತ್ತಾರೆ.

ಅದೇ ರೀತಿಯಾಗಿ ಹೊಯ್ಸಳ ರಾಜನಾದ ವಿಷ್ಣುವರ್ದನನ ಹೆಂಡತಿ ರಾಣಿ ಶಾಂತಲೆ ಕ್ರಿ.ಶ.೧೧೩೧ ರಲ್ಲಿ ಆತ್ಮಾರ್ಪಣೆ ಮಾಡಿಕೊಂಡಿದ್ದು ಶಾಸನದಲ್ಲಿ ತಿಳಿದು ಬರುತ್ತದೆ, ಆದಾಗಿ ಜೈನರ ಪ್ರಭಾವವೂ ಜಿನಲಯಕ್ಕೆ ಶಾಸನೋಕ್ತ ದಾನವೂ ಇಲ್ಲಿ ನಡೆದು ಹೋಗಿದೆ, ಇಲ್ಲಿ ಸಲ್ಲೇಖನಯುಕ್ತವಾಗಿ ಶಾಂತಲೆ ಪ್ರಾಣ ತ್ಯಜಿಸಿದ ಅಂದರೆ ಶಿವಗಂಗೆ ಬೆಟ್ಟದ ಮೇಲಿಂದ ಬಿದ್ದು ಸತ್ತಳೆಂದು ಪ್ರತೀತ ಇದೆ, ಈ ವಿಷಯವನ್ನು ಶ್ರವಣ ಬೆಳಗೊಳದ ಸವತಗಂಧವಾಣಿ ಬಸದಿಯ ಶಾಸನವು ಹೇಳುತ್ತದೆ.

ಅದರಂತೆ "ಶಿವಗಂಗಾ ಕ್ಷೇತ್ರ ತೀರ್ಥದೊಳ್ ಮುಡುಪಿ" ಎಂದಿದೆ ರಾಣಿ ಶಾಂತಳೆಯ ಅತ್ಮಹತ್ಯೆಯ ವಿಷಯವನ್ನು ತಿಳಿಸುತ್ತದೆ.

## ಜಡಿಗೇನಹಳ್ಳಿಯ ಐತಿಹ್ಯ

ಜಡಿಗೇನಹಳ್ಳಿಗೆ ಈ ಹೆಸರು ಬರಲು ಕಾರಣ ಈ ಹಿಂದೆ ಇಲ್ಲಿ ಒಬ್ಬ ಮುನಿ ಕಾಡಿನಲ್ಲಿ ತಪಸ್ಸು ಮಾಡುತ್ತಿದ್ದನು. ಆಗ ಯಾರೋ ದಾರಿಹೋಕರು ಇದು ಯಾವ ಹಳ್ಳಿಯೆಂದು ಕೇಳಿದಾಗ 'ಜಡೆಮುನಿ' ಹಳ್ಳಿ ಎಂದು ಹೇಳಿದನು. ಅದು ಕಾಲಕ್ರಮೇಣ ಜಡಿಗೇನಹಳ್ಳಿ ಎಂದಾಯಿತು. 'ಜಡೆಮುನಿ ಕರ್ನಾಟಕದ ಜನಪದ ಜೀವನ'ದ ಕುತೂಹಲಕಾರಿ ಕಲ್ಪನೆಗಳಲ್ಲಿ ಹಾಗೂ ಅತಿಮಾನುಷ ಶಕ್ತಿಗಳಲ್ಲಿ ಜನಪದಕ್ಕಿರುವ ನಂಬಿಕೆಯ ಹಿನ್ನೆಲೆಯಲ್ಲಿ ಹುಟ್ಟಿಕೊಂಡ ಐತಿಹ್ಯಗಳಲ್ಲಿ ಒಂದು, ಜಡೆಮುನಿ ಜನ ಸಾಮಾನ್ಯರನ್ನು ಅಂಜಿಸಿರುವ ಅಗೋಚರ ಶಕ್ತಿ ವಿಶೇಷಗಳಲ್ಲಿ ಒಂದಾದರೂ ಅದು ಸಾಮಾನ್ಯ ದೆವ್ವ ಹಾಗೂ ಕೊಳ್ಳಿ ದೆವ್ವಗಳಿಗಿಂತ ಭಿನ್ನವಾದುದು. ಇವೆರಡಕ್ಕಿಂತ ಉನ್ನತ ಸ್ಥಾನ ಅದಕ್ಕೆ. ಅತೀತ ಶಕ್ತಿಯಿಂದ ಪಡೆದ ದೈವಸ್ವರೂಪಿ ಶಕ್ತಿಯೊಂದು ಜ್ವಾಲೆಯ ರೂಪದಲ್ಲಿ ಆಗಾಗ ಕಾಣಿಸಿಕೊಂಡು ಜನರಿಗೆ ತಲ್ಲಣ ಉಂಟು ಮಾಡುವುದು, ಅದಕ್ಕೆ ನೆಲದಲ್ಲಿ ಎಳೆದಾಡುವಷ್ಟು ಉದ್ದನೆಯ ಜಡೆ ಮತ್ತು ಕಾಂತಿಯುಕ್ತವಾದ ಮೈ, ಅಮಾವಾಸ್ಯೆ, ಹುಣ್ಣಿಮೆಯ ರಾತ್ರಿಯಲ್ಲಿ ಅದು ಕೆಲವರ ಕಣ್ಣಿಗೆ ಗೋಚರಿಸುವುದುಂಟು.

ಅಂಥ ರಾತ್ರಿಗಳಲ್ಲಿ ಒಂದು ನೆಲೆಯಿಂದ ಹೊರಟು ದೇವಾಲಯಗಳಿರುವ ಸ್ಥಳಗಳಲ್ಲಿ ಸಂಚರಿಸಿ ಬೆಳಗಾಗುವುದರಲ್ಲಿ ತಮ್ಮ ಮೂಲ ನೆಲೆಯನ್ನು ಸೇರಿಕೊಳ್ಳಬೇಕು. ಇಂಥ ಸಂಚಾರದ ಪ್ರದೇಶವನ್ನು ಮುನಿ ಸಂಚಾರದ ಪ್ರದೇಶ ಎಂದು ನಿರ್ದಿಷ್ಟವಾಗಿ ಜನ

ಗುರುತಿಸುತ್ತಾರೆ. ಮುನಿ ವಾಸಿಸುವುದು ಸಾಮಾನ್ಯವಾಗಿ ಆಲದ ಮರಗಳಲ್ಲಿ ರಾತ್ರಿ ಆಳದ ಮರದಿಂದ ವಾದ್ಯ ಮೇಳಗಳೊಡನೆ ಹೊರಟು 'ಕೊಳದಲ್ಲಿ ಅಥವಾ ತೊರೆಯಲ್ಲಿ ಮಿಂದು ದೇವಾಲಯಗಳಿಗೆ ಹೋಗಿ ಬರುವುದು ಮುನಿಯ ಪದ್ಧತಿ. ಮುನಿಯ ಪರಿವಾರದವರೂ ಇಂಥ ಅಗೋಚರ ಶಕ್ತಿಗಳೇ ಈ ಮುನಿಯನ್ನು ಪರಿವಾರ ಪಲ್ಲಕ್ಕಿಯಲ್ಲಿ ಹೊತ್ತು ಸಾಗುವುದೂ ಉಂಟು. ಅದನ್ನು ಕಣ್ಣಾರೆ ಕಂಡಂತೆ ಬಣ್ಣಿಸುವವರೂ ಉಂಟು. ಮುನಿಯನ್ನು ಮನುಷ್ಯರು ನೋಡಬಹುದು. ಆದರೆ ಮುನಿಯ ದೃಷ್ಟಿ ಮನುಷ್ಯರ ಮೇಲೆ ಬಿದ್ದರೆ ಮರಣ ಸಂಭವಿಸುತ್ತದೆ ಎಂಬ ನಂಬಿಕೆ ಕೆಲವರಲ್ಲಿದೆ.

ಆದರೆ ಮುನಿಯೊಡನೆ ಮಾತನಾಡಿದವರೂ ಉಂಟು. ಯಾವುದೋ ಗಂಟನ್ನು ಮರೆತು ಬಂದು ತರಲು ಹೋದಾಗ ಮುನಿಯ ದೃಷ್ಟಿಗೆ ಬಿದ್ದು, ಮುನಿ ಅಂಥ ಅಸಹಾಯಕರನ್ನು ಕ್ಷಮಿಸಿದ ಘಟನೆಯನ್ನು ಯಾರಿಗೂ ಹೇಳದಂತೆ ಎಚ್ಚರಿಸಿ ಕಳಿಸಿದುಂಟು. ಆದರೆ ಅದನ್ನು ಹೇಳಿಕೊಂಡು ಪ್ರಾಣ ಬಿಟ್ಟವರೂ ಇದ್ದಾರೆಂಬುದು ಅನೇಕ ಕಥೆಗಳಲ್ಲಿ ಒಂದು. ಹೀಗೆ ಜನಪದ ಜೀವನದಲ್ಲಿ ಜಡೆಮುನಿ ಕಲ್ಪನೆ ವಿಚಿತ್ರವಾದುದು ಮುನಿ ಶಬ್ದ 'ಯತಿ'ಯೊಬ್ಬನನ್ನು ನಿರ್ದೇಶಿಸುತ್ತದೆ. ಈ ಕಲ್ಪನೆಯೂ ಋಷಿಯನ್ನೇ ನೆನಪಿಗೆ ತರುತ್ತದೆ ಅಂಥದೇ ದೈವಿಕ ಆವರಣ ಮುನಿಯ ಸುತ್ತ ಕಲ್ಪಿತವಾಗಿದೆ. ಬೆಳೆ ಬಂದ ಕಾಲದಲ್ಲಿ ಬೆಳೆದ ಹೊಲದಲ್ಲಿ ಮುನಿಯಪ್ಪನನ್ನು ಪೂಜಿಸುವ ಸಂದರ್ಭವೂ ಉಂಟು. ಅನೇಕ ಕಡೆಗಳಲ್ಲಿ ಮುನಿಯಪ್ಪ, ಮುನೇಶ್ವರ ಮುಂತಾದ ಹೆಸರಿನ ದೈವಗಳಿಗೆ ಗುಡಿಗಳನ್ನು ಕಟ್ಟಿ ಆರಾದಿಸುವುದೂ ಉಂಟು. ಆದರೆ ಈ ಮುನೇಶ್ವರನಿಗೂ ಜಡೆಮುನಿಗೂ ಇರುವ ಸಂಬಂಧ ಮಾತ್ರ ಅಸ್ಪಷ್ಟ.'

## ನಲ್ಲೂರು ಕೋಟೆಯ ಐತಿಹ್ಯ-ನಲ್ಲೂರು ಪಟ್ಟಣ ಶ್ರೀ ಚನ್ನಕೇಶವ ದೇವಾಲಯ

ದೇವನಹಳ್ಳಿಯಿಂದ ಸೂಲಿಬೆಲೆ ಮಾರ್ಗದಲ್ಲಿ ಸುಮಾರು ೧೦ ಕಿ.ಮಿ. ಅಂತರದಲ್ಲಿ ಸಿಗುವ ನಲ್ಲೂರು ಗ್ರಾಮದ ಹುಣಸೇ ತೋಪು ೫೪ ಕೆರೆಗಳ ವಿಸ್ತೀರ್ಣದಲ್ಲಿ ವ್ಯಾಪಿಸಿದ್ದು ಈ ಪಾರಂಪರಿಕ ವೃಕ್ಷ ಸಮೂಹ "ದೇವಬನ" ಎಂದೇ ಜನಮಾನಸದಲ್ಲಿ ಈಗಲೂ ಉಳಿದುಕೊಂಡಿದೆ. ಈ ನಂಬಿಕೆಗೆ ಪೂರಕವಾಗಿಯೇ ಶ್ರೀ ಗಂಗಾದೇವಿ ಮತ್ತು ಶ್ರೀ ಚನ್ನಕೇಶವ ದೇವಾಲಯಗಳನ್ನು ಇಲ್ಲಿ ನಿರ್ಮಿಸಲಾಗಿದ್ದು, ಈ ಪಾರಂಪರಿಕ ಕ್ಷೇತ್ರ ಪುರಾತನ ಕಾಲದಿಂದಲೂ ಶ್ರದ್ಧಾ ಭಕ್ತಿಯ ನೆಲೆಯಾಗಿ ಜನಧಾರಣೆ ಪಡೆಯಲು ಕಾರಣವಿಗಿದ್ದಿತು. ಕಾಲಾನಂತರ ನಿರ್ವಹಣೆಯ ಲೋಪದಿಂದಾಗಿ ಶಿಥಿಲಾವಸ್ಥೆಗೆ ಒಳಗಾಗಿದ್ದ ಈ

ದೇವಾಲಯಗಳ ಪೈಕಿ ಶ್ರೀ ಗಂಗಾದೇವಿ ದೇವಾಲಯವನ್ನು ಇತ್ತೀಚೆಗಷ್ಟೆ (ದಿ:೩೦.೫.೨೦೦೪) ಜೀರ್ಣೋದ್ಧಾರಗೊಳಿಸಲಾಗಿದ್ದು, ಆದರೆ ಶಿಲ್ಪಿಗಳ ಕಲಾನೈಪುಣ್ಯತೆಯಿಂದಾಗಿ ಅದ್ಭೂತವಾಗಿ ಸಿಂಗರಿಸಿಕೊಂಡು ಒಂದು ಕಾಲದಲ್ಲಿ ಭಕ್ತ ಕಣ್ಣನ ತಣಿಸುತ್ತಿದ್ದ ಶ್ರೀ ಚನ್ನಕೇಶವ ದೇವಾಲಯ ಮಾತ್ರ ಈಗಲೂ ಹಾಳು ಸುರಿಯುತ್ತಿದ್ದು ನಮ್ಮ ವ್ಯವಸ್ಥೆಯ ದಿವ್ಯ ನಿರ್ಲಕ್ಷದ ಮೂಕ ಸಾಕ್ಷಿಯಾಗಿ ಉಳಿದುಕೊಂಡಿದೆ. ದುರಂತವೆಂದರೆ, ನಿಧಿಗಳ್ಳರ ಆಸೆ ಬುರುಕತನದಿಂದಾಗಿ ಚನ್ನಕೇಶವ ಮೂರ್ತಿಯೇ ಮಂಗಮಾಯವಾಗಿದ್ದು, ಜೊತೆಗೆ ದೇವಾಲಯದ ಛಾವಣಿ ಮತ್ತು ಮುಂಭಾಗದ ಗೋಡೆ ಕೂಡ ಕುಸಿದು ಬಿದ್ದಿದೆ.

ಆಯತಾಕಾರದಲ್ಲಿ ನಿರ್ಮಿಸಲಾಗಿದ್ದು, ನೋಡಲು ಕಿರಿದಾಗಿದ್ದರೂ ಶ್ರೀ ಚನ್ನಕೇಶವ ದೇವಾಲಯದ ನಿರ್ಮಾಣ ಕೈಂಕರ್ಯದಲ್ಲಿ ಶಿಲ್ಪಿಗಳು ಹೆಚ್ಚು ಶ್ರದ್ಧೆ ಮತ್ತು ನೈಪುಣ್ಯತೆಯನ್ನು ಮೆರೆದಿರುವುದು ಮೊದಲ ನೋಡದಲ್ಲೇ ಗಮನ ಸೆಳೆಯುತ್ತದೆ. ನಾಜೂಕಾಗಿ ಕಡೆದು ಹಾಸಿರುವ 2 ಅಡಿ ಎತ್ತರದ ಮೇಲೆ ದೇವಾಲಯವನ್ನು ನಿರ್ಮಿಸಲಾಗಿದ್ದು, ಹೊರಭಿತ್ತಿಯಲ್ಲಿ ರೂಪಿಸಲಾಗಿರುವ ಅರೆಗಂಬಗಳು ಮತ್ತು ಅವುಗಳ ಮೊನೆಗೆ ಜೋಡಿ ಬೋದಿಗೆಗಳ ಜೋಡಣೆ ದೇವಾಲಯದ ಸೊಬಗನ್ನು ಇಮ್ಮಡಿ ಗೊಳಿಸಲು ಕಾರಣವಾಗಿದೆ. ಅಲ್ಲದೆ ಈ ದೇವಳದ ಹೊರಭಿತ್ತಿಯ ಇಕ್ಕೆಲಗಳಲ್ಲಿ ತಲಾ ಎರಡು ಮತ್ತು ಹಿಂಭಾಗದಲ್ಲಿ ಒಂದು ಸೇರಿದಂತೆ, ಐದು ದೇವಕೋಷ್ಟಕಗಳನ್ನು ನಿರ್ಮಿಸಲಾಗಿದೆ.

ಈ ದೇವಾಲಯದ ಮತ್ತೊಂದು ವಿಶೇಷ ಆಕರ್ಷಣಯೆಂದರೆ ಹೊರಭಿತ್ತಿಯ ಮೇಲೆ ಕಡೆದು ಮೂಡಿಸಿರುವ ಉಬ್ಬುಶಿಲ್ಪ ಪುಟಿಪುಗಳು, ದೇವನಹಳ್ಳಿಯ ಕೋಟೆ ವೇಣುಗೋಪಾಲಸ್ವಾಮಿ ಮತ್ತು ಆವತಿಯ ತಿಮ್ಮರಾಯಸ್ವಾಮಿ ದೇವಾಲಯಗಳ ಹೊರಭಿತ್ತಿಗಳ ಮೇಲೆ ಮೂಡಿಸಿರುವ ರಾಮಾಯಣ ಮತ್ತು ಬಾಲಕೃಷ್ಣನ ವಿವಿಧ ಲೀಲೆಗಳಂತೆ ಇಲ್ಲಿಯೂ ನಂದಗೋಪನ ವಿವಿಧ ಲೀಲೆಗಳು ನಮ್ಮ ಕಣ್ಮನಗಳನ್ನು ತುಂಬಿಕೊಂಡು ಮುದ ನೀಡುತ್ತದೆ. ಗೋಪಿಕೆಯರ ಓಕುಳಿಯೂಟ, ಮುರಳೀಕೃಷ್ಣನ ನಾಟ್ಯಭಂಗಿ, ಗೋಪಿಕೆಯರ ವಸ್ತ್ರಾಪಹರಣ, ಕಾಳಿಂಗ ಮರ್ಧನ, ಧೇನುಕಾಸುರ ಸಂಹಾರ, ಯಶೋಧೆ ಕೃಷ್ಣನನ್ನು ಒರಳು ಕಲ್ಲಿಗೆ ಕಟ್ಟಿ ಹಾಕಿರುವುದು, ನವನೀತ ಸವಿಯುತ್ತಿರುವುದು, ಸಂತಸದಿಂದ ನಾಟ್ಯ ಪರವಶನಾಗಿರುವುದು ಮುಂತಾದ ಉಬ್ಬು ಶಿಲ್ಪಗಳು ಭಾಗವತ ಕಥನವನ್ನು ನೆನಪಿಸುವ ಮೂಲಕ ಗಮನ ಸೆಳೆಯುತ್ತವೆ. ಈ ಉಬ್ಬು ಶಿಲ್ಪಗಳ ಪರಿಪೂರ್ಣತೆ ಮತ್ತು ಅಲಂಕಾರ ನೋಡುಗರನ್ನು ಮಂತ್ರ ಮುಗ್ಧಗೊಳಿಸುತ್ತವೆ.

## ದೇವಾಲಯದ ನಿರ್ಮಾಣ

ನಲ್ಲೂರು ನಾಡಲ್ಲಿ ಹಿಂದೆ ಹಲವಾರು ಪಾಳೇಗಾರರು ಆಡಳಿತ ನಡೆಸಿರುವುದು ಚರಿತ್ರೆಯ ಪುಟಗಳಲ್ಲಿ ದಾಖಲಾಗಿರುವ ಸಂಗತಿ. ಈ ಪರಂಪರೆಯ ಕೊನೆಯ ಪಾಳೆಯಗಾರ ಚೌಡರಾಯನ ಕಾಲದಲ್ಲಿ ದೇವನಹಳ್ಳಿ ಪ್ರಾಂತದ ಪಾಳೇಗಾರನ ಜೊತೆ ಮನಸ್ಥಾಪವಾಗಿ ದೇವನಹಳ್ಳಿ ಕೆರೆಯಿಂದ ಸರಬರಾಜು ಆಗುತ್ತಿದ್ದ ಕುಡಿಯುವ ನೀರನ್ನು ಸ್ಥಗಿತಗೊಳಿಸಿದ್ದರಿಂದ ನಲ್ಲೂರು ಪಾಳೆಗಾರಿಕೆಯ ಅವನತಿಗೆ ಕಾರಣವಾಯಿತು ಎಂಬ ಪ್ರತೀತಿ. ನಲ್ಲೂರು ಪಟ್ಟಣದ ಮಧ್ಯಭಾಗದಲ್ಲಿ (ಈಗ ಹುಣಸೇ ತೋಪು ಇರುವ ಕಡೆ) ಶ್ರೀ ಚನ್ನರಾಯಸ್ವಾಮಿ, ಶ್ರೀ ಗೋಪಾಲಕೃಷ್ಣ ಮತ್ತು ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯಗಳನ್ನು ಕ್ರಿ.ಶ.೧೩೮೬ರಲ್ಲಿ ಸಣ್ಣನಾಯಕರ ಮಗ ಚಿಕ್ಕಂಕಯ್ಯ ನಾಯಕ ಕಟ್ಟಿಸಲಾಗಿದ್ದು ತದನಂತರ ಕ್ರಿ.ಶ.೧೪೦೧ ರಲ್ಲಿ ಮಾರಪ್ಪನಾಯಕ ದೇವಾಲಯದ ಸುತ್ತಲು ಸುಂದರವಾದ ಭಿತ್ತಿ ನಿರ್ಮಾಣಕ್ಕೆ ಕಾರಣನಾದ ಎಂಬ ಪ್ರತೀತಿ ಚಾಲ್ತಿಯಲ್ಲಿದೆ. ಈ ಬಗ್ಗೆ ಶಿಲಾಶಾಸನವೊಂದರಲ್ಲಿ ವಿವರಿಸಲಾಗಿದೆ ಎಂದು ಶ್ರೀ ಶ್ರೀ ಶ್ರೀ ಕೃಷ್ಣಾನಂದ ಸ್ವಾಮೀಜಿ ಅಭಿಪ್ರಾಯ ಪಡುತ್ತಾರೆ. ಮತ್ತೊಂದು ಆಧಾರದ ರೀತ್ಯ ಈ ಗುಡಿ ಚೋಳರ ಕಾಲದಲ್ಲಿ ನಿರ್ಮಾಣ ಮಾಡಲಾಗಿದೆ ಎಂದು ಅಭಿಪ್ರಾಯ ವ್ಯಕ್ತಪಡಿಸಲಾಗಿದ್ದು,

ಆದರೆ ಶೈವಭಕ್ತರಾದ ಚೋಳರು ಬೆಂಗಳೂರು ಜಿಲ್ಲೆಯ ಪಶ್ಚಿಮ ಭಾಗದ ತಾಲ್ಲೂಕುಗಳಲ್ಲಿ ಮಾತ್ರ ಆಡಳಿತ ನಡೆಸಿದ್ದು ಕರ್ನಾಟಕದಲ್ಲಿ ಅವರ ಆಳ್ವಿಕೆಯು ಕ್ರಿ.ಶ.೯೮೫ ರಿಂದ ಕ್ರಿ.ಶ.೧೧೭೩ ರವರೆಗೆ ಮಾತ್ರ ನಡೆದಿದ್ದಿತು ಹೀಗಾಗಿ ಅವರ ಆಳ್ವಿಕೆ ಕಾಲದಲ್ಲಿ ಈ ವೈಷ್ಣವ ದೇವಾಲಯ ನಿರ್ಮಾಣವಾಗಿರುವ ಸಾಧ್ಯತೆ ತೀರ ಕಡಿಮೆ. ಇದರ ರಚನಾ ಶೈಲಿ ಮತ್ತು ಗಾತ್ರವನ್ನು ಗಮನಿಸಿದಾಗ ಈ ಭಾಗದಲ್ಲಿ ಆಡಳಿತ ನಡೆಸಿದ ಪಾಳೆಯಗಾರರೇ ಇದರ ನಿರ್ಮಾಪಕರ್ತರು ಎಂದು ನಿರ್ಧರಿಸಬಹುದಾಗಿರುತ್ತದೆ. ಈ ಬಗ್ಗೆ ಲಭ್ಯ ಶಾಸನಗಳ ಪಾಠವನ್ನು ಪರಿಶೀಲಿಸಿ ಖಚಿತ ನಿಲುವನ್ನು ತಾಳುವುದು ಮುಖ್ಯ.

ಇಂಥ ಸುಂದರ ದೇವಾಲಯವೊಂದು ಪಾರಂಪರಿಕ ಹುಣಸೇ ತೋಪಿನ ಒಡಲಲ್ಲಿ ಹಾಳು ಸುರಿಯುತ್ತ ನಿಂತಿರುವುದು ನಮ್ಮ ಪರಂಪರೆಯತ್ತ ನಾವು ತಳೆದಿರುವ ಧಿವ್ಯ ನಿರ್ಲಕ್ಷತೆಗೆ ಮೂಕ ಸಾಕ್ಷಿಯಾಗಿದೆ.

ಇಂಥ ಸುಂದರ ದೇವಾಲಯವೊಂದು ಪಾರಂಪರಿಕ ಹುಣಸೇ ತೋಪಿನ ಒಡಲಲ್ಲಿ ಹಾಳು ಸುರಿಯುತ್ತ ನಿಂತಿರುವುದು ನಮ್ಮ ಪರಂಪರೆಯತ್ತ ನಾವು ತಳೆದಿರುವ ದಿವ್ಯ ನಿರ್ಲಕ್ಷತೆಗೆ ಮೂಕ ಸಾಕ್ಷಿಯಾಗಿದೆ.

## ೫.೧ ಬಲಿ ಐತಿಹ್ಯಗಳು

ಸಾಮಾಜದ ಒಳತಿಗಾಗಿ ಕೆಲವು ಬಲಿದಾನ ಮುಂತಾದ ಸಂಕೀರ್ಣ ಸ್ವಭಾವಗಳು ಸೇರಿ ಕಥನಗೀತೆಯಾಗಿ ಹರಿಯುತ್ತದೆ. ಇಲ್ಲಿನ ಕತೆ ನೇರವಾದ ಉದ್ದೇಶ ಸಾಧನೆಗೆ ಅರ್ಪಿಸಿದರೂ ಬಲಿಯಾದರು ಅದರಲ್ಲೂ ಸಮಷ್ಟಿಯ ಹಿತ ಅಡಗಿದೆ ಎಂಬುದು ಸಮಾಜ ಅಂಶವಾಗಿರುತ್ತದೆ. ಬಲಿ ಐತಿಹ್ಯಗಳಲ್ಲಿ ಅಮಾನಿಕೆರೆ, ಮತ್ತು ಚಿಕ್ಕನಹಳ್ಳಿಯ ಕಲ್ಯಾಣಿಯನ್ನು ಬಲಿ ಐತಿಹ್ಯಗಳಲ್ಲಿ ವಿಶ್ಲೇಷಿಸಿಲಾಗಿದೆ.

## ಚಿಕ್ಕನಹಳ್ಳಿಯ ಬಲಿ ಐತಿಹ್ಯ

ಬೆಂಗಳೂರು ಗ್ರಾಮಾಂತರ ಜಿಲ್ಲೆ ದೇವನಹಳ್ಳಿ ತಾಲ್ಲೂಕಿನ ವಿಜಯಪುರದಿಂದ ಎರಡು ಕಿ.ಮೀ ದೂರದ ಚಿಕ್ಕನಹಳ್ಳಿ ಗ್ರಾಮ ಹಲವು ಕುತೂಹಲಗಳ ಐತಿಹಾಸಿಕ ತಾಣ, ಊರಿನ ಮುಂಭಾಗದಲ್ಲಿ ತನ್ನ ರೆಂಬೆ–ಕೊಂಬೆಗಳನ್ನು ಚಾಚಿಕೊಂಡು ಅನೇಕ ಪ್ರಾಣಿ, ಪಕ್ಷಿಗಳಿಗೆ ದಣಿದು ಬಂದ ದಾರಿ ಜನರಿಗೆ ಮತ್ತು ಗ್ರಾಮಸ್ಥರಿಗೆ ಆಶ್ರಯ ತಾಣವಾಗಿ ಮುಗಿಲೆತ್ತರಕ್ಕೆ ಬೆಳೆದು ನಿಂತ ಬೃಹತ್ತಾದ ಆಲದ ಮರವಿದೆ. ಬಹುಶಃ ಇದು ತಾಲ್ಲೂಕಿನಲ್ಲೇ ಅತ್ಯಂತ ವಿಶಾಲವಾದ ಆಲದಮರ.

ಈ ಅಪರೂಪದ ಆಲದ ಮರದ ಪಕ್ಕದಲ್ಲೇ ಅತಿ ಪುರಾತನ ಕಾಲದ ಒಂದು ಛತ್ರ ಮತ್ತು ವಿಶಾಲವಾದ ಒಂದು ಕಲ್ಯಾಣಿ ಇದೆ. ಇವುಗಳ ನಿರ್ಮಾಣದ ಬಗ್ಗೆಯಾಗಲಿ, ಹಿನ್ನಲೆ ಬಗ್ಗೆಯಾಗಲಿ ಖಚಿತವಾದ ಪುರಾವೆಗಳಿಲ್ಲ. ಆದರೆ ಜನರ ಮಧ್ಯೆ ಒಂದು ದಂತ ಕಥೆ ಪ್ರಚಲಿತದಲ್ಲಿರುತ್ತದೆ. ಬಹುಶಃ ಇದು ಆವತಿ ಪ್ರಭುಗಳ ಕಾಲದಲ್ಲಿ ನಿರ್ಮಿಸಿದ್ದಿರಬಹುದು, ವಿಜಯಪುರ ಆಗ ವಡಗೇನಹಳ್ಳಿಯೆಂದೆ ಹೆಸರು ಪಡೆದಿತ್ತು.

ವಡಗೇನಹಳ್ಳಿಯ ಮುನಿಶಾಮಪ್ಪನೆಂಬ ಪಟೇಲ ಇದರ ನಿರ್ಮಾತೃ ಎಂಬ ಮಾತಿದೆ. ಈ ಛತ್ರ ಮತ್ತು ಕಲ್ಯಾಣಿ ನಿರ್ಮಾಣದ ಉದ್ದೇಶ ಸ್ಪಷ್ಟವಾಗಿಲ್ಲ, ಆದರೆ ಲಕ್ಷ್ಮೀಧರಮಾತ್ಮನ "ಕೆರೆಯಂಕಟ್ಟಿಸು, ಬಾವಿಯಂ ಈ ಅಪರೂಪದ ಆಲದ ಮರದ ಪಕ್ಕದಲ್ಲೇ ಅತಿ ಪುರಾತನ ಕಾಲದ ಒಂದು ಛತ್ರ ಮತ್ತು ವಿಶಾಲವಾದ ಒಂದು ಕಲ್ಯಾಣಿ ಇದೆ. ಇವುಗಳ ನಿರ್ಮಾಣದ ಬಗ್ಗೆಯಾಗಲಿ. ಹಿನ್ನೆಲೆ ಬಗ್ಗೆಯಾಗಲಿ ಖಚಿತವಾದ ಪುರಾವೆಗಳಿಲ್ಲ. ಆದರೆ ಜನರ ಮಧ್ಯೆ ಒಂದು ದಂತ ಕಥೆ ಪ್ರಚಲಿತದಲ್ಲಿರುತ್ತದೆ. ಬಹುಶಃ ಇದು ಆವತಿ ಪ್ರಭುಗಳ ಕಾಲದಲ್ಲಿ ನಿರ್ಮಿಸಿದ್ದಿರಬಹುದು, ವಿಜಯಪುರ ಆಗ ವಡಗೇನಹಳ್ಳಿಯೆಂದೇ ಹೆಸರು ಪಡೆದಿತ್ತು. ವಡಗೇನಹಳ್ಳಿಯ ಮುನಿಶಾಮಪ್ಪನೆಂಬ ಪಟೇಲ ಇದರ ನಿರ್ಮಾತೃ ಎಂಬ ಮಾತಿದೆ. ಈ

ಛತ್ರ ಮತ್ತು ಕಲ್ಯಾಣಿ ನಿರ್ಮಾಣದ ಉದ್ದೇಶ ಸ್ಪಷ್ಟವಾಗಿಲ್ಲ, ಆದರೆ ಲಕ್ಷ್ಮೀಪರಮಾತ್ಮನ "ಕೆರೆಯಂಕಟ್ಟಿಸು, ಬಾವಿಯಂ ಸವೆಸು, ದೇವಾಗರಮಂ ಮಾಡಿಸು" ಎಂಬ ಲೋಕ ರೂಢಿಯಂತೆ ಇವು ಲೋಕ ಕಲ್ಯಾಣಾರ್ಥವಾಗಿ ನಿರ್ಮಾಣವಾಗಿರಬೇಕು.

ಗ್ರಾಮಸ್ಥರ ನಂಬಿಕೆಯ ಒಂದು ದಂತ ಕಥೆ ಹೀಗೆದೆ. ಛತ್ರ ನಿರ್ಮಿಸಿದ ಬಳಿಕ ಕಲ್ಯಾಣಿಯನ್ನು ಕಟ್ಟಿಸಬೇಕು. ಈ ಕಲ್ಯಾಣಿಯನ್ನು ಕಟ್ಟುವಾಗ ನೂರಾರು ಜನ ಬಡ, ಕೂಲಿ ಕಾರ್ಮಿಕರು ಕೆಲಸ ಮಾಡುವಲ್ಲಿ ತಲ್ಲಿನರಾಗಿದ್ದರು. ಕಲ್ಯಾಣಿಯ ನಿರ್ಮಾಣ ಇನ್ನೇನು ಮುಕ್ತಾಯ ಹಂತದಲ್ಲಿತ್ತು. ಕೆಲಸ ಮಾಡಿದ ಆಳುಗಳಿಗೆಲ್ಲಾ ಹಣದ ರೂಪದಲ್ಲಿ ಕೂಲಿ ಕೊಡುತ್ತಿದ್ದರು ಆ ಬಡ ಕೂಲಿ ಕಾರ್ಮಿಕರಲ್ಲಿ ಹೆಣ್ಣಾಳು-ಗಂಡಾಳುಗಳಿಬ್ಬರು ಇದ್ದರು. ಅವರಲ್ಲಿ ಒಬ್ಬ ಗರ್ಭಿಣಿ ಸ್ತ್ರೀ ಕೂಡ ಇದ್ದಳು. ತನ್ನ ಗಂಡ ಮಕ್ಕಳ ತುತ್ತಿನ ಚೀಲ ತುಂಬಿಸುವುದಕ್ಕಾಗಿ ಹಗಲಿರುಳು ದಾಹ-ದಣಿವುಗಳನ್ನು ಲೆಕ್ಕಿಸದೆ ದುಡಿದಳು, ಬೆವರಿಳಿಸಿ, ಮೈ ಮುರಿದು ಕೆಲಸ ಮಾಡಿದಳು, ಆದರೆ ಕೂಲಿ ನೀಡುವ ಧಣಿ ನಿರ್ಧಯಿ, ಕಲ್ಲು ಹೃದಯದವನು, ಬಡವರ, ಮಹಿಳೆಯರ ಬಾಧೆ ಬೇನೆಗಳನ್ನು ಅರಿಯವದನು, ತಾನು ಲೋಕದಲ್ಲಿ ಹೆಸರುಗಳಿಸಬೇಕೆಂಬ ಸ್ವಾರ್ಥ ಮನೋಭಾವವನ್ನಷ್ಟೇ ಹೊಂದಿದ್ದ ಈತ ಇಂತಹ ಎಷ್ಟೋ ಬಸಿರು ಹೊತ್ತ ಹೆಣ್ಣು ಮಕ್ಕಳ ಶ್ರಮವನ್ನು ಲೆಕ್ಕಿಸದೇ ಹೋದ, ಕೂಲಿ ಕೊಡುವಾಗ ಈಕೆಯ ಶ್ರಮವನ್ನು ನಿರ್ಲಕ್ಷಿಸಿ ಅವಳ ಸೇವೆಯನ್ನು ತಿರಸ್ಕರಿಸಿದ "ನೀನು ತುಂಬು ಗರ್ಭಿಣಿ, ನೀನೇನು ಕೆಲಸ ಮಾಡಿದೆ. ನಡೆದಾಡಲು ಸಾಧ್ಯವಾಗದ ನೀನು ಎಷ್ಟು ಕೆಲಸ ನಿರ್ವಹಿಸಿದ್ದೀಯ? ನೀನು ದಿನಗೂಲಿ ತೆಗೆದುಕೊಳ್ಳಲು ಯೋಗ್ಯಳಲ್ಲ. ಕಾಸಿಗಾಗಿ ಕಾಡದೆ ಇಲ್ಲಿಂದ ತೊಲಗಿ ಹೋಗು" ಎಂದು ಕೂಲಿ ಹಣ ನೀಡಲು ನಿರಾಕರಿಸಿಬಿಟ್ಟ.

ಈ ನಿಷ್ಕರುಣಿಯಾದ ಧಣಿಗಳ ಮಾತಿನಿಂದ ಮನನೊಂದ ಆ ಹೆಣ್ಣು ಮಗಳು ನೊಂದು ನೀರಾದಳು, ಬೆಂದು-ಬೆಂಡಾದಳು, ಶ್ರಮಕ್ಕೆ ತಕ್ಕ ಪ್ರತಿಫಲ ಆಕೆಗೆ ದೊರೆಯಲಿಲ್ಲ. ಇತ್ತ ಕಡು ಬಡತನ, ಆತ್ತ ಏನೂ ಮಾಡಲಾಗದ ಅಸಹಾಯಕ ಪರಿಸ್ಥಿತಿ. ಕಣ್ಣೀರಧಾರೆ ಕೋಡಿಯಾಗಿ ಹರಿಯಿತು. ಕಾಕತಾಳಿಯವೆಂಬಂತೆ ಧಾರಕಾರ ಮಳೆ ಸುರಿದು ಕಲ್ಯಾಣಿ ಭರ್ತಿಯಾಯಿತು. ಮನಸ್ಸು ರೋಸಿ ಹೋಯಿತು. ಮನೆಗೆ ಹಿಂದಿರುಗಲಾಗದೇ ತುಂಬಿ ತುಳುಕುತ್ತಿರುವ ಕಲ್ಯಾಣಿ ದಂಡೆಯ ಮೇಲೆ ನಿಂತು "ಇನ್ನು ಮುಂದೆ ಎಷ್ಟೇ ಮಳೆ ಸುರಿದರೂ ಈ ಕಲ್ಯಾಣಿಗೆ ನೀರು ಹರಿಯದಿರಲಿ, ಬಂದ ನೀರು ಮೂರೇ ದಿನದಲ್ಲಿ ಇಂಗಿ ಹೋಗಲಿ" ಎಂದು ಹಿಡಿ ಶಾಪ ಹಾಕಿ, ತಾನೂ ಆ ಕಲ್ಯಾಣಿಗೆ ಹಾರಿ ಪ್ರಾಣ ಬಿಟ್ಟು ಹುತಾತ್ಮಳಾದಳು. ಈಗಲೂ ಸಹ ಈ ಕಲ್ಯಾಣಿಯಲ್ಲಿ ನೀರು ಇರುವುದಿಲ್ಲ ಎಷ್ಟೇ ಮಳೆ ಬಿದ್ದರೂ ಈ ಕಲ್ಯಾಣಿ

ಮೂರೇ ದಿನದಲ್ಲಿ ನೀರು ಹಿಂಗಿ ಹೋಗುತ್ತದೆ ಎಂದು ಈ ಕಲ್ಯಾಣಿಯ ಬಗ್ಗೆ ಚಿಕ್ಕನ್ನಹಳ್ಳಿಯ ಹಿರಿಯರು ಮಾಹಿತಿ ತಿಳಿಸಿದ್ದಾರೆ.

# ಅಧ್ಯಾಯ-೬

## ವ್ಯಕ್ತಿ ಪ್ರಧಾನ ಐತಿಹ್ಯಗಳು

ವ್ಯಕ್ತಿ ಪ್ರಧಾನ ಐತಿಹ್ಯಗಳಲ್ಲಿ ಅಸಾಮಾನ್ಯವಾದ ಅಥವಾ ವಿಶಿಷ್ಟವಾದ ವ್ಯಕ್ತಿಯೊಬ್ಬನ ಸಾಧನೆಯ ನಿರೂಪಣೆಯಿರುತ್ತದೆ ಐತಿಹ್ಯದ ಉಳಿದೆಲ್ಲ ವಿವರಗಳು ಈ ವ್ಯಕ್ತಿಯ ಸಾಧನೆಗೆ ಪೋಷಕವಾಗಿಯೇ ಬರುತ್ತದೆ. ವ್ಯಕ್ತಿ ಒಂದು ನಿರ್ದಿಷ್ಟ ಸ್ಥಳಕ್ಕೆ ಬದ್ದವಾಗಿದ್ದರೂ ಅಲ್ಲಿ ಸ್ಥಳದ ಮಹತ್ವವನ್ನು ಮೀರಿ ವ್ಯಕ್ತಿತ್ವ ಕೆಲಸ ಮಾಡುತ್ತಿರುತ್ತದೆ ? ಅಲ್ಲದೇ ವ್ಯಕ್ತಿಯಿಂದಾಗಿಯೇ ಆ ಸ್ಥಳಕ್ಕೆ ಆ ಹೆಸರು ಬಂದಿರಲೂಬಹುದು, ಇಂಥ ಐತಿಹ್ಯಗಳಲ್ಲಿ ಬರುವ ವ್ಯಕ್ತಿಗಳನ್ನು ಮತ್ತೇ ಎರಡು ರೀತಿಯಿಂದ ವಿಭಜಿಸಿಕೊಳ್ಳಬಹುದು ಅವುಗಳೆಂದರೆ ಪೌರಣಿಕ ವ್ಯಕ್ತಿಗಳು, ಐತಿಹಾಸಿಕ ವ್ಯಕ್ತಿಗಳು, ಪೌರಾಣಿಕ ವ್ಯಕ್ತಿಗಳಲ್ಲಿ ಭೀಮ, ರಾಮ, ಸೀತೆ, ಪರಶುರಾಮ, ಕೃಷ್ಣ ಮೊದಲಾದವರು ಗುರುತಿಸಿದರೆ ಐತಿಹಾಸಿಕ ವ್ಯಕ್ತಿಗಳಲ್ಲಿ ಕುಮಾರರಾಮ, ವಿಕ್ರಮಾದಿತ್ಯ, ಒನಕೆ ಓಬವ್ವ, ಕೈವಾರ ತಾತಯ್ಯ, ವೀರಬ್ರಹ್ಮಯ್ಯ, ಶಿರಡಿಸಾಯಿಬಾಬಾ, ಮೊದಲಾದವರು ಸೇರ್ಪಡೆಗೊಳ್ಳುತ್ತಾರೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿನ ವ್ಯಕ್ತಿ ಪ್ರಧಾನ ಐತಿಹ್ಯಗಳಲ್ಲಿ ಐತಿಹಾಸಿಕ ವ್ಯಕ್ತಿಗಳಾಗಿ, ಸುಗುಟೂರು ಪಾಳೇಗಾರ ತಮ್ಮೇಗೌಡನ ಐತಿಹ್ಯ, ದಯ್ಯಾಲು ಬಚ್ಚೇಗೌಡನ ಐತಿಹ್ಯ, ವೀರಕೆಂಪಮ್ಮನ ಐತಿಹ್ಯ ಇನ್ನೂ ಮುಂತಾದವರನ್ನು ನೋಡಬಹುದು.

**ಪುರಾಣ ಹಿನ್ನೆಲೆ ಇರುವ ವ್ಯಕ್ತಿಗಳಾದ :–** ಸಾಸಲು ಚಿನ್ನಮ್ಮ ಗುಂಡಬ್ರಾಹ್ಮಣನ ಐತಿಹ್ಯ, ದೊಂಬ್ರಮ್ಮ, ಅಡ್ಡಗಿಡ್ಡಪ್ಪನ ಐತಿಹ್ಯಗಳನ್ನು ಗುರ್ತಿಸಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಯಾವುದೇ ಒಂದು ಐತಿಹ್ಯದ ಹಿನ್ನೆಲೆಯಲ್ಲಿ ಘಟನೆ ಇದ್ದೇ ಇರುತ್ತದೆ. ಘಟನೆಗೆ ವ್ಯಕ್ತಿ ಸಂಬಂದ ಇದ್ದೇ ಇರುತ್ತದೆ. ಒಂದು ನಿರ್ಧಿಷ್ಟ ಐತಿಹ್ಯದಲ್ಲಿ ವ್ಯಕ್ತಿ ಹೇಗೆ ಕೆಲಸ ಮಾಡುತ್ತಾನೆ. ವ್ಯಕ್ತಿಗಳ ಐತಿಹ್ಯಗಳ ಸನ್ನಿವೇಶ ಮತ್ತು ಸಂದರ್ಭಕ್ಕೆ ಅನುಗುಣವಾಗಿ ಹೊಂದಿರುತ್ತವೆ. ಯಾವ ಐತಿಹ್ಯದಲ್ಲಿ ವ್ಯಕ್ತಿಯ ಪಾತ್ರ ಪ್ರಧಾನವಾಗಿ ಪಾತ್ರ ವಹಿಸುತ್ತದೆಯೋ ಅಂತಹವರನ್ನು ವ್ಯಕ್ತಿ ಪ್ರಧಾನ ಐತಿಹ್ಯ ಅಥವಾ ವ್ಯಕ್ತಿ ಕೇಂದ್ರಿತ ಐತಿಹ್ಯವೆಂದು ಕರೆಯುತ್ತಾರೆ. ಸಾಮಾನ್ಯವಾಗಿ ಕೆಲವೇ ಕೆಲವು ವ್ಯಕ್ತಿಗಳ ಹೆಸರಿನಲ್ಲಿ ಸ್ಥಳನಾಮಗಳು ಹುಟ್ಟಿಕೊಳ್ಳುತ್ತವೆ. ಯಾರು ಅಸಾಮಾನ್ಯ ಸಾಧನೆ ಮಾಡಿರುತ್ತಾರೋ ಆಚಾರ ವಿಚಾರ ಸಮಾಜಸೇವೆ, ಶೌರ್ಯ, ಸಾಹಸ ಪ್ರದರ್ಶನ ಹೊಂದಿರುತ್ತಾರೋ ಅಂತಹವರ ಹೆಸರಿನಲ್ಲಿ ಇಂತಹ ಐತಿಹ್ಯಗಳು ಹುಟ್ಟಿಕೊಳ್ಳುತ್ತವೆ.

## ನೆಲಮಂಗಲದ ಗುಂಡ ಮತ್ತು ಬ್ರಹ್ಮಯ್ಯನ ಐತಿಹ್ಯ

ಗುಂಡ ಬ್ರಹ್ಮಯ್ಯನ ಕುರಿತ ಇಲ್ಲಿನ ಜನರು ಒಂದು ಕಥೆಯನ್ನು ಹೇಳುತ್ತಾರೆ ಅದರಂತೆ ಈ ಕಥೆಯಲ್ಲಿ ಗುಂಡ ಮತ್ತು ಬ್ರಹ್ಮಯ್ಯರು ಶಿವಭಕ್ತರು ಇವರು ತಮ್ಮಲ್ಲಿ ರಕ್ಷಣೆ ಬೇಡಿ ಬಂದವರನ್ನು ಪೋಷಿಸುವುದಾಗಿ ಶಿವನಲ್ಲಿ ಸಂಕಲ್ಪಿಸಿಕೊಳ್ಳುತ್ತಾರೆ. ಅದರಂತೆ ಇವರು ರಕ್ಷಣೆ ಕೋರಿ ಬಂದವರನ್ನು ಪೋಷಣೆ ಮಾಡುತ್ತ ತಮ್ಮ ನಿಷ್ಠೆಯನ್ನು ತೋರಿಸುತ್ತಿರುವಾಗ, ದಿನ ಕಳೆದಂತೆ ಇವರ ನಿಷ್ಠೆಯನ್ನು ಪರೀಕ್ಷಿಸಲು ಶಿವನೇ ವೇಷ ಮರೆಸಿಕೊಂಡು ಬರುತ್ತಾನೆ ಶಿವನು ಮೊದಲು ಓರಂಗಲ್ಲಿನ ಅರಮನೆಯಲ್ಲಿ ಕಳ್ಳತನ ಮಾಡಿ ಕಳ್ಳತನ ಮಾಡಿದ ವಸ್ತುಗಳನ್ನು ದಾರಿಯ ಉದ್ದಕ್ಕೂ ಬೀಳಿಸಿಕೊಂಡು ಬರುತ್ತಾನೆ. ಅವರಿಗೆ ಕಳ್ಳನ ಕುರುಹು ಸಿಗಲೆಂದು ಬಂದ ಶಿವನು ಗುಂಡ ಮತ್ತು ಬ್ರಹ್ಮಯ್ಯನ ಬಳಿ ಆಶ್ರಯ ಪಡೆದಿರುವಾಗ ಓರಂಗಲ್ಲಿನ ಸೈನಿಕರು ಆ ಕುರುಹುಗಳನ್ನು ಹುಡುಕಿಕೊಂಡು ಬಂದು ಆ ಕಳ್ಳನು ಗುಂಡ ಬ್ರಹ್ಮಯ್ಯನವರ ಹತ್ತಿರ ಆಶ್ರಯ ಪಡೆದಿರುವುದು ಗೊತ್ತಾಗಿ ಸೈನಿಕರು ಆ ಕಳ್ಳನನ್ನು ನಮಗೆ ಒಪ್ಪಿಸಿ ಎಂದು ಹೇಳಿದಾಗ ಇದನ್ನು ನಿರಾಕರಿಸುತ್ತಾರೆ. ಸೈನಿಕರು ಅವನು ಶಿಕ್ಷೆಗೆ ಅರ್ಹನು ಕಳುಹಿಸಿ ಇದಕ್ಕೆ ವಿರೋಧ ವ್ಯಕ್ತ ಪಡಿಸಿದರೆ ಆ ಶಿಕ್ಷೆಗೆ ನೀವೂ ಅರ್ಹರಾಗುತ್ತೀರ ಎಂದು ಹೇಳಿದರು.

ಅವರು ತಮ್ಮ ರಕ್ಷಣೆ ಕೋರಿ ಬಂದವರನ್ನು ಪೋಷಿಸುವುದಾಗಿ ತಾವು ಸಂಕಲ್ಪಿಸಿಕೊಂಡಿದ್ದು ಆ ಶಿಕ್ಷೆ ನಮಗೆ ವಿಧಿಸಿ ಎಂದಾಗ ಅವರನ್ನು ನಾನಾ ರೀತಿಯಲ್ಲಿ ಶಿಕ್ಷಿಸಿದರು ಆವರು ತಮ್ಮ ಸಂಕಲ್ಪದಂತೆ ಕಳ್ಳ ವೇಷದಾರಿಯಾದ ಶಿವನನ್ನು ಒಪ್ಪಿಸಲಿಲ್ಲ. ಇವರ ಭಕ್ತಿಗೆ ಮೆಚ್ಚಿ ತನ್ನ ಇಷ್ಟ ಲಿಂಗವನ್ನು ಶಿವನು ಇವರಿಗೆ ಕೊಟ್ಟು ಬೇಡಿ ಬಂದವರಿಗೆ ಅವರ ಇಷ್ಟವನ್ನು ಈಡೇರಿಸಿ ಎಂದು ಹೇಳಿ ಶಿವನು ಅದೃಶ್ಯವಾಗುತ್ತಾನೆ ಎಂದು ಈ ಶಿಲ್ಪಗಳ ಬಗ್ಗೆ ಇಲ್ಲಿನ ಜನ ಸಾಮಾನ್ಯರು ಕಥೆಯೊಂದನ್ನು ಹೇಳುತ್ತಾರೆ.

ಈ ಶಿಲ್ಪಗಳಲ್ಲಿ ಎಡಗೈಯಲ್ಲಿ ಇಷ್ಟಲಿಂಗ ಮತ್ತು ಬಲಗೈಯಲ್ಲಿ ಕಠಾರಿ ಹಿಡಿದಿರುತ್ತಾರೆ ಇದೊಂದು ವ್ಯಕ್ತಿ ಆಧಾರಿತ ಐತಿಹ್ಯವಾಗಿದೆ.

### ಸಾಸಲು ಚಿನ್ನಮ್ಮನ ಐತಿಹ್ಯ

ಸಾಸಲು ಗ್ರಾಮದಲ್ಲಿ ಪ್ರಮುಖವಾದ ಜನಪದಿಯ ಐತಿಹ್ಯವಾದ ಸಾಸಲು ಚಿನ್ನಮ್ಮನ ಐತಿಹ್ಯವಿದೆ, ಸಾಸಲು ಗ್ರಾಮದಲ್ಲಿ ಚಿನ್ನಮ್ಮನ ಕಥೆಯನ್ನು ಹರಿಕಥೆಯಂತೆ ಹೇಳುತ್ತಾರೆ. ಕರ್ನಾಟಕ ಮತ್ತು ಆಂದ್ರಪ್ರದೇಶದ ಕದರಿಯ ಒಂದು ಕುಟುಂಬದವರು ಮಾತ್ರ ಈ

ಕಥೆಯನ್ನು ಹೇಳುತ್ತಾರೆ. ಹಿಂದೆ ಸಾಸಲು ಗ್ರಾಮಕ್ಕೆ ಈ ಜನರು ಬೇಸಿಗೆಯಲ್ಲಿ ಬೇಟೆಯನ್ನಾಡಲು ಬಂದಾಗ ಇಲ್ಲಿನ ಜನ ಸಾಸಲು ಚಿನ್ನಮ್ಮನ ಕಥೆಯನ್ನು ಹೇಳುತ್ತಿದ್ದರು. ನಗರೀಕರಣದ ಪರಿಣಾಮ ಮನರಂಜನೆಯ ಸಾಧನಗಳ ಪ್ರಭಾವ ಮತ್ತಿತ್ತರ ಕಾರಣಗಳಿಂದ ಈಗ ಈ ಕಥೆಯನ್ನು ಕರ್ನಾಟಕ ಮತ್ತು ಆಂದ್ರಪ್ರದೇಶದಲ್ಲಿ ಕೋಲಾರ ಜಿಲ್ಲೆ, ಚಿತ್ತೂರು, ಪುಂಗನೂರು, ಮದನಪಲ್ಲಿ, ಮುಂತಾದ ಕಡೆ ಸಾಸಲು ಚಿನ್ನಮ್ಮನ ನಾಟಕ ಹೆಚ್ಚು ಪಸಿದ್ದಯಾಗಿದೆ,

ಕಥೆಯ ಮುಖ್ಯಾಂಶ ಹೀಗಿದೆ ಸಾಸಲು ಗ್ರಾಮದ ಗೊಲ್ಲರ ಜನಾಂಗಕ್ಕೆ ಸೇರಿದ ಮೂನ್ನೂರು ವರ್ಷಗಳ ಹಿಂದೆ ಇದ್ದಂತಹ ಸಾಸಲು ರೆಡ್ಡಿ ಒಮ್ಮೆ ಕದಿರಿ ಪ್ರದೇಶಕ್ಕೆ ಎತ್ತುಗಳನ್ನು ತರಲು ಹೋಗಿದ್ದನಂತೆ. ಆಗ ಕದಿರಿ ಗ್ರಾಮದ ಮಾರ್ಗದಲ್ಲಿ ಒಂದು ಉತ್ಸವ ಬರುತ್ತಿತ್ತೆಂದು ಭಾಗಿ ನಮಸ್ಕರಿಸಿದ, ಆಗ ಅಲ್ಲಿದ್ದವರು ಚಪ್ಪಾಳೆ ಹಾಕಿ ನಗುತ್ತಾ ಈ ಸಾಸಲು ಗೌಡನನ್ನು ಗೇಲಿ ಮಾಡಿದರು, ಒಂದು ಹೆಣ್ಣುಮಗಳಿಗೆ ತಲೆ ಬಾಗುತ್ತಾನೆ, ಇವನು ದಡ್ಡ ಎನ್ನುತ್ತಾರೆ. ಆಗ ಆ ಹೆಣ್ಣು ಮಗಳು ಚಿನ್ನಮ್ಮ ಎನ್ನುವುದು ತಿಳಿಯುತ್ತೆ ಚಿನ್ನಮ್ಮನು ರಥದಲ್ಲಿ ಯಾಕೆ ಬರುತ್ತಿದ್ದಾಳೆಂದರೆ ಚನ್ನಮ್ಮ ಏಳು ಜನ ಅಣ್ಣಂದಿರಿಗೆ ಒಬ್ಬಳೇ ತಂಗಿ ಆ ತಂಗಿಯನ್ನು ಏಳು ಜನ ಅಣ್ಣಂದಿರು ಪ್ರೀತಿಯಿಂದ ಸಾಕಿ ಸಲ್ಲುಹುತ್ತಿದ್ದರು, ಜೋಳದ ಹೊಲದಲ್ಲಿ ಬೆಂಡುಗಳಿಂದ ಮಾಡಿದ ರಥವನ್ನು ನೋಡಿ ಅದರಲ್ಲಿ ಗಿಳಿಯನ್ನು ಕಟ್ಟಿ ನನ್ನನ್ನು ಅದರಲ್ಲಿ ಕೂರಿಸಿಕೊಂಡು ಕರೆದೊಯ್ಯಬೇಕೆಂದು ಹಠ ಮಾಡಿದಾಗ ಏಳು ಅಣ್ಣಂದಿರು ಉತ್ಸವದಂತೆ ಬೆಂಡಿನ ರಥದಲ್ಲಿ ಗಿಳಿಗಳನ್ನು ಕಟ್ಟಿ ಅದರಲ್ಲಿ ಚಿನ್ನಮ್ಮನನ್ನು ಕೂರಿಸಿ ಕರೆದುಕೊಂಡು ಬರುತ್ತಿದ್ದರು.

ಜನರ ಗೇಲಿ ಕೇಳಿದ ಸಾಸಲು ರೆಡ್ಡಿಗೆ ಅವಮಾನವಾಗಿ ಒಳ್ಳೆಯ ಮಾತುಗಳನ್ನು ಹಾಡುತ್ತಾ ಚಿನ್ನಮ್ಮನ ತಾಯಿ ತಂದೆಗಳಲ್ಲಿ ಸಂಬಂದ ಬೆಳಸಿ ತನ್ನ ಕಿರಿಯ ಮಗನಾದ ಎಂಗಲರೆಡ್ಡಿಗೆ ಮದುವೆ ಮಾಡಿಸಿಕೊಂಡು ಚಿನ್ನಮ್ಮನನ್ನು ಸಾಸಲು ಗ್ರಾಮಕ್ಕೆ ಕರೆದುಕೊಂಡು ಬಂದು, ತನಗಾದ ಅವಮಾನಕ್ಕೆ ಪ್ರತಿಕಾರವಾಗಿ ಆಕೆಗೆ ಕೊಡಬಾರದ ಕಷ್ಟಗಳನ್ನು ಕೊಡುತ್ತಾ ತನ್ನ ಸೇಡನ್ನು ತೀರಿಸಿಕೊಂಡನಂತೆ, ತೆಲುಗಿನ ಕಥೆಯಲ್ಲಿ ಕಷ್ಟದ ನಾನಾ ಬಗೆಗಳು ಬರುತ್ತವೆ ಸಾಸಲು ಗ್ರಾಮದ ಕಾಡಿನಿಂದ ಬಂದು ಗಾಡಿ ಸೌದೆ ಒಬ್ಬಳೇ ತರಬೇಕು, ದೊಡ್ಡ ರಾಗಿ ಕಲ್ಲಿನಿಂದ ಒಂದು ವಾಡೆ ರಾಗಿ ಬೀಸಬೇಕು ಹತ್ತಾರು ಧನ ಕರುಗಳನ್ನು ಕಾಡಿನಲ್ಲಿ ಒಬ್ಬಳೆ ಮೇಯಿಸಬೇಕು, ಮನೆ ಕೆಲಸ ಹೊಲದ ಕೆಲಸ ದಿನದ ತುಂಬಾ ಕಠಿಣ ಕೆಲಸಗಳನ್ನು ಕೊಡುತ್ತ ರಾತ್ರಿಯ ಊಟದಲ್ಲಿ ತಾವು ತಿಂದು ಮಿಕ್ಕ ಎಂಜಲನ್ನು, ಕೈ ತೊಳೆದ ಸಾರನ್ನು

ಆಕೆಗೆ ಹಾಕಿ ದನದ ಕೊಟ್ಟಿಗೆಯಲ್ಲಿ ಒಂದು ಸೀರೆಯನ್ನು ಕೊಡದೆ ಚಿಂದಿ ಬಟ್ಟೆಯಲ್ಲಿ ಅವಳು ಸೀರೆಯನ್ನು ನೇಯ್ದುಕೊಂಡು ತನ್ನ ಮಾನವನ್ನು ಕಾಪಾಡಿಕೊಳ್ಳುತ್ತಿದ್ದಳು ಚಿನ್ನಮ್ಮನನ್ನು ದಾಸಿಯಂತೆ ನಡೆಸಿಕೊಂಡರು.

ಈ ಕಥೆಯ ಮತ್ತೊಂದು ಮಗ್ಗುಲೆಂದರೆ ನರಳುತ್ತಿದ್ದ ಚಿನ್ನಮ್ಮನಿಗೆ ದೈವ ಪಿಂಡವೆಂದು ಕರೆಯುತ್ತಾರೆ ಕಾಡಿನಲ್ಲಿ ಒಂದು ಗಾಡಿ ಸೌದೆ ಕಡಿದರೆ ದೇವರಂತಿದ್ದ ಏಳು ಜನ ಅಣ್ಣಂದಿರು ಆವಳ ಸಹಾಯಕ್ಕೆ ಬರುತ್ತಿದ್ದರು, ವಿಷ್ಣುವಿನ ಅವತಾರವಾದ ಉಗ್ರ ನರಸಿಂಹನು ಕದಿರಿನರಸಿಂಹ, ಖಾದ್ರನರಸಿಂಹ, ದಾಳವಾಟ್‌ನರಸಿಂಹ, ಮಳ್ಳೇಟ್‌ನರಸಿಂಹ, ಮಾಕಳಿನರಸಿಂಹ, ಮಲ್ಲೇಶ್‌ನರಸಿಂಹ ಇವರು ಈಕೆಯ ಎಲ್ಲಾ ಕೆಲಸಗಳನ್ನು ಅದೃಶ್ಯ ರೂಪದಿಂದ ಮಾಡುತ್ತಿದ್ದರು. ಹೀಗಿರಲು ಒಮ್ಮೆ ಕದಿರಿ ಕ್ಷೇತ್ರಕ್ಕೆ ಚಿನ್ನಮ್ಮನ ಮನೆಯವರೆಲ್ಲ ಯಾತ್ರೆಗೆ ಹೊರಟು ಮನೆ ನೋಡಿಕೊಳ್ಳಲು ಚಿನ್ನಮ್ಮನನ್ನು ಬಿಟ್ಟರು ಮದುವೆಯಾದ ದಿನದಿಂದ ತೌರು ಮನೆಗೆ ಹೋಗದ ಚಿನ್ನಮ್ಮ, ಒಂದೇ ಸಮನೇ ಅಳುತ್ತಿದ್ದಳು ಅವಳ ವೇದನೆ ನೋಡದ ಅಣ್ಣಂದಿರು ಯಾತ್ರೆಯ ಮದ್ಯದಲ್ಲಿ ಗಾಡಿಗಳನ್ನು ಭೂಮಿಯಲ್ಲಿ ಹೂತು ಹೋಗುವಂತೆ ಮಾಡಿದರು. ಉಗ್ರನರಸಿಂಹ ಬ್ರಾಹ್ಮಣನ ವೇಷದಲ್ಲಿ ಬಂದು ನಿನ್ನ ಕಿರಿಯ ಸೊಸೆಯ ಕೈಯಲ್ಲಿ ಪೂಜೆ ಮಾಡಿಸಿದರೆ ಗಾಡಿ ನೀವು ಬದುಕುತ್ತೀರಿ ಎಂದು ಹೇಳಿದಾಗ ಗೌಡ ಮತ್ತೇ ಮನೆಗೆ ಬಂದು ಚಿನ್ನಮ್ಮನನ್ನು ಬಾರೆಂದು ಕರೆದಾಗ ಚಿನ್ನಮ್ಮ ನಾನು ಬರಬೇಕಾದರೇ ಕೆಲವು ಷರತ್ತುಗಳನ್ನು ಪೂರೈಸಬೇಕೆಂದು ನೀವು ನನಗೆ ಕಷ್ಟ ಕೊಟ್ಟಿದ್ದಕ್ಕಾಗಿ ನನಗೆ ನನ್ನ "ಚಿಲುಕಲಬಂಡಿ" ಅಂದರೆ ಬೆಂಡಿನ ಗಿಣಿಯ ಬಂಡಿಯನ್ನು ತನ್ನ ಅಣ್ಣನಿಂದ ತರಿಸಿದರೆ ಬರುತ್ತೇನೆ ಎಂದಳು. ಅದರಂತೆ ತರಿಸಿದಾಗ ತನ್ನ ಗಂಡನ ಆಸ್ತಿಯನ್ನು ಭಾಗಮಾಡಿ ಆ ಬಂಡಿಯಲ್ಲಿ ಹಾಕಿಕೊಂಡು ಹೋಗಿ ಅವರನ್ನು ಮತ್ತು ಅವರ ಗಾಡಿಯನ್ನು ಬದುಕಿಸಿದಳು. ನಂತರ ತನ್ನ ಅಣ್ಣನ ಜೊತೆ ಸಾಸಲು ಗ್ರಾಮದಿಂದ ಹೊರಟ ಚಿನ್ನಮ್ಮ ತನ್ನ ಗಂಡನ ಆಸ್ತಿಯ ವೆಚ್ಚದಲ್ಲಿ ಆಂದ್ರದ ಕದಿರಿ ಗ್ರಾಮದಲ್ಲಿ ದೇವಾಲಯ, ಕೆಲವು ವಿಶ್ರಾಂತಿ ಗೃಹ ಅರವಂಟಿಕೆ, ಅನ್ನಛತ್ರಗಳಿಗೆ ತನ್ನ ಹೆಸರಿಟ್ಟು, ಕದಿರಿ ಗ್ರಾಮದಲ್ಲಿ ತನ್ನಣ್ಣನ ದೇವಾಲಯದಲ್ಲಿ ಐಕ್ಯವಾದಳು, ಈಗಲೂ ಕದಿರಿಯ ಉಗ್ರನರಸಿಂಹ ದೇವಾಲಯದಲ್ಲಿ ಚಿನ್ನಮ್ಮನ ವಿಗ್ರಹವಿದೆ. ಈ ಕಡೆಯಲ್ಲಿ ನಾವು ಪುರಾಣದ ಅಂಶಗಳನ್ನುಅನೇಕ ಐತಿಹ್ಯಗಳನ್ನು ಸಾಸಲು ಗ್ರಾಮ ಹಾಗೂ ತಾನು ಹೊರಟ ಸಂದರ್ಭದಲ್ಲಿ ಗ್ರಾಮಗಳ ಭೌಗೋಳಿಕ ಭೂಪಟವನ್ನು ನೋಡಬಹುದು ಮತ್ತು ಚಿನ್ನಮ್ಮ ಹೇಗೆ ದೈವತ್ವದ ಮಟ್ಟಕ್ಕೇರಲು ಸಾದ್ಯವೆಂಬುದಕ್ಕೆ ಚಿನ್ನಮ್ಮನ ಕಥೆ ಒಂದು ಅತ್ಯುತ್ತಮ ಉದಾಹರಣೆ.

ಚಿನ್ನಮ್ಮ ಸಾಸಲು ಗ್ರಾಮ ಬಿಟ್ಟಾಗ ಇಟ್ಟ ಹೆಜ್ಜೆಯ ಗುರುತು ಈಗಲೂ ಆಂಜನೇಯಸ್ವಾಮಿ ದೇವಾಲಯದ ಮುಂದಿದೆ. ಈಕೆ ಬೀಸುತ್ತಿದ್ದ ರಾಕ್ಷಸ ಗಾತ್ರದ ರಾಗಿಯ ಕಲ್ಲು ಗೌಡರ ಮನೆಯ ಹತ್ತಿರ ನಮ್ಮ ಗಮನ ಸೆಳೆಯುತ್ತದೆ. ಆಕೆಯಿದ್ದ ದನದ ಕೊಟ್ಟಿಗೆ ಇಂದು ತಿಪ್ಪೆಗುಂಡಿಯಾಗಿದೆ ಜನರ ಮನಃ ಪಟಲದಲ್ಲಿ ಉಳಿದಿದೆ ಈಕೆಯ ಬೆವರಿನ ಕೊಳೆಯನ್ನು ಬಸವಣ್ಣನನ್ನಾಗಿ ಮಾಡಿಟ್ಟ ಬಸವಣ್ಣ ಹಾಗೂ ದೇವಾಲಯ ಇಂದು ಸಹ ಇದೆ ಆಕೆ ಒಂದೇ ರಾತ್ರಿಯಲ್ಲಿ ಕಟ್ಟಿಸಿದ ಸಾಸಲು ಕೆರೆ ಇಂದಿಗೂ ಇದ್ದು ಕೆರೆ ತುಂಬಿದಾಗ ಒಬ್ಬರನ್ನು ಬಲಿ ತೆಗೆದುಕೊಳ್ಳುವ ಘಟನೆ ಇಂದಿಗೂ ನಡೆಯುತ್ತಿದೆ ಇವೆಲ್ಲಕ್ಕೂ ಕಳಸವಿಟ್ಟಂತೆ ಚಿನ್ನಮ್ಮನ ವಿಗ್ರಹದ ಒಂದು ಏಕಶಿಲಾಸ್ಥಂಬ ಪೂಜೆ ಮಾಡಿಕೊಳ್ಳುತ್ತಾ ಇಂದಿಗೂ ಊರಿನ ಮದ್ಯದಲ್ಲಿ ನೆಲೆ ನಿಂತಿರುವುದನ್ನು ನೋಡಬಹುದು. ಹಾಗೆಯೇ ತನ್ನ ಅಣ್ಣ ಉಗ್ರಹನರಸಿಂಹನಿಗೆ ತುಪ್ಪದ ದೀಪವನ್ನು ಹಚ್ಚುತ್ತಿದ್ದ ಕದಿರೀಕಂಬ ಕಾಡಿನ ಗುಡ್ಡದ ಮೇಲೆ ಇಂದಿಗೂ ಇದೆ ರಥ ಹೋಗುವಾಗ ಸಾಸಲು ಪಕ್ಕದ ಉಜ್ಜನಿ ಬೆಟ್ಟದಲ್ಲಿ ಬಂಡಿ ಜಾಡು ಗೋಚರಿಸುತ್ತದೆ ಕಾಡಿನ ನಡುವೆ ಮತ್ತೊಂದು ಚಿನ್ನಮ್ಮನ ಪಾದ ಕಲ್ಲಿನ ಮೇಲಿದೆ.

ಈ ಮೇಲಿನ ಪುರಾಣ ಕಥೆಗಳು ಘಟನೆಗಳೂ ದಂತ ಕಥೆಗಳಾಗಿ ಐತಿಹ್ಯಗಳು ಸಾಸಲು ಗ್ರಾಮದ ಸುತ್ತಲೂ ಹರಡಿಕೊಂಡು ಒಂದು ಹೊಸ ಪ್ರಪಂಚವನ್ನೇ ನಿರ್ಮಾಣವಾಗುತ್ತದೆ, ಇಷ್ಟೇ ಅಲ್ಲದೇ ಇನ್ನೂ ಹಲವಾರು ಐತಿಹ್ಯಗಳು ಈ ಗ್ರಾಮದಲ್ಲಿದೆ ಅವುಗಳೆಂದರೆ ಹಿಂದಿನ ಕಾಲದ ವ್ಯಕ್ತಿಗಳ ತ್ಯಾಗ, ಶ್ರಮ, ಜೀವನ ಆರಂಭಿಸಿ ಅವರ ಕಾರ್ಯದ ಸ್ಥಾನಗಳಿಗೆ ಅವರವರ ಹೆಸರು ಇಡಲಾಗಿದೆ ಉದಾ: ಕದಿರಪ್ಪನ ಗುಡ್ಡ, ಮುತ್ತರಾಯಣ ಬೆಟ್ಟ, ಚಿನ್ನಮ್ಮನ ತೋಪು, ಚಿನ್ನಮ್ಮನ ಕೆರೆ, ಚಿನ್ನಮ್ಮನ ಬಾವಿಯ ಕೆರೆಯ ಪಕ್ಕದಲ್ಲಿ ಹಬ್ಬದ ದಿನ ಗ್ರಾಮದ ಮಹಿಳೆಯರೆಲ್ಲಾ ಒಟ್ಟಿಗೆ ಸ್ನಾನ ಮಾಡುವ ಪದ್ದತಿ ಮತ್ತು ಹಲವಾರು ಐತಿಹ್ಯಗಳನ್ನು ಕಾಣಬಹುದು.

## ವೀರ ಕೆಂಪಮ್ಮನ ಐತಿಹ್ಯ ಆವತಿ ದೇವನಹಳ್ಳಿ

ಈ ಐತಿಹ್ಯವು ದೇವನಹಳ್ಳಿ ತಾಲೂಕಿನ ಆವತಿಯಲ್ಲಿ ಸಿಗುವಂತಹ ಪ್ರಸಿದ್ದ ಐತಿಹ್ಯವಾಗಿದ್ದು ವೀರ ಕೆಂಪಮ್ಮ ರಣಬೈರೇಗೌಡನ ಏಕೈಕ ಮಗಳು. ಆವತಿಯ ನಡುಬೆಟ್ಟದ ಹುಟ್ಟು ಬಂಡೆಯ ಮೇಲೆ ಒಂದು ಅಡಿ ಉದ್ದದ ಸ್ತ್ರೀಯ ಉಬ್ಬು ಶಿಲ್ಪವನ್ನು ಕಡೆದಿದ್ದು ಇದನ್ನು “ವೀರಕೆಂಪಮ್ಮ ದೇವಿ” ಎಂದು ಪೂಜಿಸಲಾಗುತ್ತಿದೆ. ವಿರಾಗಿನಿಯಂತೆ ಕೊನೆಯವರೆಗೂ ಜೀವನ ಸವೆಸಿದ ದೊಡ್ಡಮ್ಮನ ವಿಗ್ರಹವೇ ಇದಾಗಿದ್ದು, ಮನೆತನದ ಮಾತೆ

ವೀರಕೆಂಪಮ್ಮನ ಅವತಾರವೇ ಆ ಹೆಣ್ಣು ಮಗಳು ಎಂದು ಒಕ್ಕಲಿಗರು ನಂಬಿ ಆರಾಧಿಸುತ್ತಿದ್ದಾರೆ. ಆದರೆ ಈ ಜಾಗ ನಿರ್ವಹಣೆಯಿಲ್ಲದೆ ಗಿಡ ಗಂಟೆಗಳಿಂದ ಕೂಡಿದ್ದು, ಈಗ ಶಿಥಲ ವ್ಯವಸ್ಥೆಗೆ ತಲುಪಿದೆ.

ಈ ಬೆಟ್ಟದ ಪಶ್ಚಿಮದ ಅಂಚಿನ ಬುಡದಲ್ಲಿ ಕನ್ನಿಕಲಮ್ಮ(ವೀರಕೆಂಪಮ್ಮ) ಎಂದು ಕರೆಯಲಾಗುವ ಹುಟ್ಟು ಬಂಡೆಯಿದ್ದು ಇಲ್ಲಿ ಹೆಂಗಳೆಯರು ಮಾತ್ರ (ಕನ್ಯೆಯರು) ವರ್ಷಕ್ಕೊಮ್ಮೆ ದೀಪಾರತಿಯನ್ನು ಬೆಳಗುತ್ತಾರೆ. ಇಲ್ಲಿ ದೊಡ್ಡಮ್ಮನ್ನೆ ಆವಿರ್ಭವಿಸಿದ್ದಾಳೆ ಎಂಬ ನಂಬಿಕೆ ಪ್ರಚಲಿತದಲ್ಲಿದ್ದು, ಈ ಬಂಡೆಯ ಮೇಲಿರುವ ಕಣ್ಣಿನಾಕಾರದ ಸಣ್ಣ ಕುಳಿಯಲ್ಲಿನೀರು ತುಂಬಿ ಭೂಮಿಗೆ ತಾಕಿದರೆ ಆ ದಿನ ಮಳೆ ತಪ್ಪದೆ ಸುರಿಯುತ್ತದೆ ಎಂಬ ನಂಬಿಕೆ ಜನರ ಮನಸ್ಸಿನಲ್ಲಿ ಅನುಭವಪೂರ್ವಕವಾಗಿ ತುಂಬಿಕೊಂಡಿದೆ. ಇಲ್ಲಿನ ಜನರಿಗೆ ವೀರಕೆಂಪಮ್ಮ ಮಹಿಮೆಯನ್ನು ಹೊಂದಿರುವಂತ ಹೆಣ್ಣು ಆಗಿದ್ದಾಳೆ.

## ಸುಗುಟೂರು ಪಾಳೇಗಾರನಾದ ತಮ್ಮೇಗೌಡನ ಐತಿಹ್ಯ

ಹೊಸಕೋಟೆಯನ್ನಾಳಿದ ಸುಗುಟೂರು ಪಾಳೆಗಾರನಾದ ತಮ್ಮೇಗೌಡನ ಈ ರೀತಿಯ ಐತಿಹ್ಯವಿದೆ. ತಮ್ಮೇಗೌಡ ಮೊದಲು ಒಬ್ಬ ಸಾಮಾನ್ಯ ಜೀತಗಾರನಾಗಿದ್ದು, ಒಂದು ದಿನ ಕೆಲಸಕ್ಕೆಂದು ಹೊಲಕ್ಕೆ ಹೋದವನು, ಮಧ್ಯಾಹ್ನದ ಊಟಕ್ಕೂ ಬಾರದಿರುವಾಗ ಅವನ ಒಡೆಯ ಜೀತಗಾರನನ್ನು ವಿಚಾರಿಸಲು ಹೊಲದ ಬಳಿ ಹೋಗುತ್ತಾನೆ. ಅಲ್ಲಿ ಅವನ ಆಶ್ಚರ್ಯಕರ ದೃಶ್ಯವನ್ನು ನೋಡುತ್ತಾನೆ. ಜೀತದಾಳು ಕೆಲಸ ಮಾಡಿ ಬಿಸಿಲಿನ ಬೇಗಯಲ್ಲಿ ಆಯಾಸಗೊಂಡು ಮರದ ಕೆಳಗೆ ಮಲಗಿ ನಿದ್ರೆ ಮಾಡಿದ್ದಾನೆ.

ಸಮಯ ಕಳೆದಂತೆ ಮರದ ನೆರಳು ದೂರ ಸರಿದು ಬಿಸಿಲು ಅವನ ಮುಖದ ಮೇಲೆ ಬೀಳುತ್ತಿರುವುದನ್ನು ನೋಡಿದ ನಾಗರಹಾವು ಹೆಡೆಬಿಚ್ಚಿ ಬಿಸಿಲು ಬೀಳದಂತೆ ನೆರಳನ್ನೊಡ್ಡುತ್ತಿರುತ್ತದೆ. ಇದನ್ನು ಗಮನಿಸಿದ ದಣಿ, ಇವನು ಅಸಾಮಾನ್ಯನೆಂದು ಬಗೆದು ನಿದ್ರೆಯಿಂದ ಎಚ್ಚೆತ್ತ ಮೇಲೆ ಮನೆಗೆ ಕರೆದುಕೊಂಡು ಹೋಗಿ ಸತ್ಕರಿಸುತ್ತಾನೆ. ಜ್ಯೋತಿಷಿಗಳ ಬಳಿ ಈ ಪ್ರಸಂಗವನ್ನು ತಿಳಿಸಿ ಭವಿಷ್ಯ ಕೇಳಲಾಗಿ ಮುಂದೊಮ್ಮೆ ಇವನು ಇಲ್ಲಿನ ಶ್ರೇಷ್ಠ ರಾಜನಾಗುತ್ತಾನೆಂದು ಭವಿಷ್ಯ ನುಡುಯುತ್ತಾನೆ, ಜ್ಯೋತಿಷಿಯ ಭವಿಷ್ಯದಂತೆ ತಮ್ಮೇಗೌಡ ಕೋಟೆ ಕಟ್ಟಿ ರಾಜ್ಯಭಾರ ಮಾಡಿದ ಎನ್ನುವರು. ಇದೊಂದು ದಂತಕಥೆ. ಹೊಸಕೋಟೆ ಅವಿಮುಕ್ತೇಶ್ವರ ದೇವಾಲಯದ ನವರಂಗ ಮತ್ತು ಕಲ್ಯಾಣ ಮಂಟಪದಲ್ಲಿನ ಕಂಭಗಳಲ್ಲಿ

ಗೊರಬನ್ನು ತಲೆಯ ಮೇಲೆ ಹಾಕಿಕೊಂಡು ಕೈಯಲ್ಲಿ ಕೋಲನ್ನು ಹಿಡಿದು ನಿಂತಿರುವ ಶಿಲ್ಪಗಳನ್ನು ತಮ್ಮೇಗೌಡನ ಶಿಲ್ಪವೆಂದು ಈಗಲೂ ಜನ ನಂಬಿದ್ದಾರೆ.

ತಮ್ಮೇಗೌಡ ಹೊಸಕೋಟೆ ದೊಡ್ಡಕರೆಯನ್ನು ಕಟ್ಟಿಸಿದನು ಎಂಬುದು ಇತಿಹಾಸವಾದರೆ, ಕಟ್ಟಿಸಿದ ಬಗ್ಗೆ ಒಂದು ಐತಿಹ್ಯವಿದೆ. ಇಂತಹ ದೊಡ್ಡಕರೆಯನ್ನು ಕಟ್ಟಿಸಿರಬೇಕಾದರೆ ಇದು ಅಸಾಮಾನ್ಯವಾದುದು. ಇಂಥ ಕೆರೆಯನ್ನು ಕಟ್ಟುವಾಗ ನೀರು ಅಪಾರ ಪ್ರಮಾಣದಲ್ಲಿ ಹರಿದು ಬಂದು ಕಟ್ಟೆ ಕಿತ್ತು ಹೋಗುತ್ತಿತ್ತು. ತಮ್ಮೇಗೌಡನಿಗೆ ಇದೊಂದು ದೊಡ್ಡ ಸಮಸ್ಯೆಯಾಗಿ ಕಾಡುತ್ತಿತ್ತು. ಒಮ್ಮೆ ಕನಸಿನಲ್ಲಿ ತಮ್ಮೇಗೌಡನಿಗೆ ತನ್ನ ಹಿರಿ ಸೊಸೆಯನ್ನು ಹಾರವಾಗಿ ಬಲಿಕೊಟ್ಟರೆ ನಿಲ್ಲುತ್ತೇನೆ ಎಂದು ಗಂಗಾದೇವಿ ತಿಳಿಸಿದಳು. ಅದರಂತೆ ತಮ್ಮೇಗೌಡ ತನ್ನ ಹಿರಿ ಸೊಸೆಯನ್ನು ಬಲಿಕೊಟ್ಟು ಕಟ್ಟೆ ಕಟ್ಟಿದ ಬಳಿಕ ಅದು ಕಿತ್ತು ಹೋಗಲಿಲ್ಲ ಎಂಬ ಕತೆ ಈ ಭಾಗದಲ್ಲಿ ಪ್ರಚಲಿತವಾಗಿದೆ.

ಈ ಕತೆಯನ್ನು "ಕೆರೆಗೆ ಹಾರ" ಜಾನಪದ ಗೀತೆಯೊಂದಿಗೆ ಹೋಲಿಸಬಹುದಾಗಿದೆ. ಕೆರೆಗೆ ಹಾರದಲ್ಲಿ ಕಾವ್ಯಾತ್ಮಕವಾದ, ವರ್ಣನೆ ಭಾವ ಸಂವೇದನೆ, ನಂಬಿಕೆ, ಮಾನವೀಯತೆ, ತ್ಯಾಗ ಬಲಿದಾನ ಮುಂತಾದ ಸಂಕೀರ್ಣ ಸ್ವಾಭಾವಗಳು ಸೇರಿ ಕಥನ ಗೀತೆಯಾಗಿ ಹರಿಯುತ್ತಿದೆ. ಇಲ್ಲಿನ ಕತೆ ನೇರವಾದ ಉದ್ದೇಶ ಸಾಧನೆಗೆ ಅರ್ಪಿಸಿದ ಬಲಿಯಾದರೂ ಅದರಲ್ಲೂ ಸಮಷ್ಟಿಯ ಹಿತ ಅಡಗಿದೆ ಎಂಬುದು ಸಮಾನ ಅಂಶವಾಗಿರುತ್ತದೆ.

ಕೆರೆಗೆ ಹಾರದಲ್ಲಿ ಹಿರಿ ಸೊಸೆಯನ್ನು ಹಾರವಾಗಿ ಅರ್ಪಿಸಲು ಒಲ್ಲದ ಮಲ್ಲನಗೌಡ ಕಿರು ಸೊಸೆಯನ್ನು ಕೊಡಲು ಒಪ್ಪುತ್ತಾನೆ. ಕಟ್ಟೆ ನಿಲ್ಲದೆ ಹೋದಾಗ ಮಲ್ಲನಗೌಡ ಹೊತ್ತಿಗೆ ತೆಗೆಸುತ್ತಾನೆ. ಆದರೆ ತಮ್ಮೇಗೌಡನಿಗೆ ಸ್ವತಃ ಗಂಗರಯೇ ಬಂದು ಕನಸಿನಲ್ಲಿ ಹೇಳುತ್ತಾಳೆ. ಭಾಗೀರಥಗಂಡದಂಡಿಗೆ ಸೇರಿರುತ್ತಾನೆ. ಆದರೆ ತಮ್ಮೇಗೌಡನ ಕತೆ ಹೆಸರುಗಳಪ್ರಸ್ತಾಪವೇ ಬರುವುದಿಲ್ಲ. ಹಿರಿ ಸೊಸೆಯನ್ನು ಬಲಿಕೊಟ್ಟು ಎಂದರೆ ಬರುತ್ತದೆ.

ಹೀಗೆ ಕೆರೆಗೆ ಹಾರ ಹೆಚ್ಚು ಸಂಕೀರ್ಣವಾಗಿದ್ದು ದೀರ್ಘವಾಗಿದ್ದರೆ ತಮ್ಮೇಗೌಡನ ಕತೆ ನೇರವಾಗಿದ್ದು ಸರಳವಾಗಿದೆ ಎರಡರ ಉದ್ದೇಶವೂ ಒಂದೇ ಆಗಿದೆ. ಅಂತ್ಯದಲ್ಲಿ ಕೆರೆಗೆ ಹಾರದಲ್ಲಿ ಗಂಡ ಮಾದೇವರಾಯ ದಂಡಿನಿಂದ ಬಂದು ಹೆಂಡತಿಗಾದ ಸ್ಥಿತಿಯಿಂದಾಗಿ ದುಃಖಿತನಾಗಿ ತಾನೂ ಪ್ರಾಣತ್ಯಾಗ ಮಾಡಿಕೊಳ್ಳುತ್ತಾನೆ. ತಂದೆ ತೀರ್ಮಾನವನ್ನು ಪ್ರಶ್ನಿಸುವುದಿಲ್ಲ. ತಮ್ಮೇಗೌಡನ ಕತೆಯಲ್ಲೂ ಗಂಡನಾದವನು ಪ್ರಶ್ನಿಸುತ್ತಾನೆ. ಆದರೆ ಪ್ರಾಣತ್ಯಾಗ ಮಾಡಿಕೊಳ್ಳುವ ಪ್ರಸಂಗವಿಲ್ಲ. ಈ ರೀತಿಯ ಕೆರೆಗೆ ಸಂಬಂಧಿಸಿದ ಐತಿಹ್ಯ, ಹಾಡು ಕಥೆಗಳು ಜಾನಪದದಲ್ಲಿ ಸಾಮಾನ್ಯವಾಗಿ ಕಂಡಬರುತ್ತವೆ. ಆದರೆ ಈ ಜಾನಪದದಲ್ಲಿ ಕೆರೆಗಳಿಗೆ

ಬಲಿಯಾಗುವವರು, ಹಾರವಾಗುವವರು, ಬಲಿದಾನಕ್ಕೆ ಒಳಗಾಗುವವರು ಹೆಂಗಸರೇ ಆಗಿರುತ್ತಾರೆ. ಅದರಲ್ಲೂ ಸೊಸೆಯಂದಿರಾಗಿರುತ್ತಾರೆ ಎಂಬುದು ಕುತೂಹಲಕರವಾದುದು, ಪುರುಷ ಪ್ರಧಾನದ ಸಮಾಜದ ಜಾನಪದದಲ್ಲೂ ಸಹ ತನ್ನ ಸ್ವಾರ್ಥಕ್ಕಾಗಿ, ಸಮುದಾಯದ ದೃಷ್ಟಿಯಲ್ಲಿ ಪ್ರತಿಷ್ಠಿತನಾಗುವುದಕ್ಕಾಗಿ, ತನ್ನ ಮನೆಗೆ ತವರಿನ ಸಂಬಂಧ ಕಳೆದುಕೊಂಡು ಬರುವ ಸೊಸೆಯಂದಿರನ್ನು ನಿರ್ದಾಕ್ಷಿಣ್ಯವಾಗಿ ಬಲಿಗರ್ಪಿಸಿ ಕೀರ್ತಿವಂತರಾಗಿರುವುದನ್ನು ಗಮನಿಸಬಹುದಾಗಿದೆ.

## ದಯಾಳು ಬಚ್ಚೇಗೌಡ (ದಯ್ಯಾಲು ಬಚ್ಚೇಗೌಡ)

ಬೊಮ್ಮವಾರದ ಸುಂದರೇಶ್ವರ ದೇವಾಲಯವನು ಒಂದೇ ರಾತ್ರಿಯಲ್ಲಿ ದೆವ್ವಗಳು ನಿರ್ಮಿಸಿದವು ಎಂಬುದು ಈ ಭಾಗದ ಜನರ ಬಲವಾದ ನಂಬಿಕೆ. ಈ ದೇವಾಲಯಕ್ಕೆ ಉಪಯೋಗಿಸಲಾಗಿರುವ ಕಲ್ಲುಗಳನ್ನು ಕುಡುಗೋಲುಗಳಿಂದ ದೆವ್ವಗಳ ಕೊಯ್ದು ತಂದವಂತೆ ಎಂದು ಜನಪದರು ನಂಬಿರುವರು,

ಈಗಿರುವ ದೇವಾಲಯದ ಮುಂಭಾಗದ ಪ್ರದೇಶದಲ್ಲಿ ಬಹಳ ಹಿಂದೆ ಹೊನ್ನೇನಹಳ್ಳಿ ಎಂಬ ಊರು ಇದ್ದಿತ್ತಂತೆ. ಒಮ್ಮೆ ಭಯಂಕರವಾದ ಪ್ಲೇಗ್ ಮಾರಿ ಊರನ್ನು ಆವರಿಸಿಕೊಂಡಾಗ ಈಗಿರುವ ಬೊಮ್ಮವಾರ ಜಾಗಕ್ಕೆ ಊರು ಸ್ಥಳಾಂತರವಾಯಿತು. ಹಳೇಊರು ಹೊನ್ನೇನಹಳ್ಳಿ ಹಾಳು ಬಿದ್ದು ಅಲ್ಲಿ ಗಿಡ ಗಂಟಿಗಳು ಬೆಳೆದುಕೊಂಡವು. ಆ ಗ್ರಾಮದ ಬಚ್ಚೇಗೌಡ ಎಂಬಾತ ದಿನಾ ಇಲ್ಲಿ ಮೇಕೆ ಮೇಯಿಸಲು ಹೊಗುತ್ತಿದ್ದನು. ಒಂದು ದಿನ ಸಂಜೆ ವಾಪಸ್ಸು ಬರುವಾಗ ಕೈಲಿದ್ದ ಮುಚ್ಚುಗತ್ತಿಯನ್ನು ಅಲ್ಲಿಯೇ ಮರೆತು ಬಂದಿದ್ದ, ಅದನ್ನು ವಾಪಸ್ಸು ತರಲು ಹೋದಾಗ ಕತ್ತಲಾವರಿಸಿದ್ದಿತ್ತು. ಅಚ್ಚರಿಯೆನೆಂದರೆ ಅವನ ಮಚ್ಚಿನ ಸುತ್ತ 'ಬಚ್ಚೇಗೌಡನ ಮಚ್ಚು' ಎಂದು ಹಾಡಿಕೊಂಡು ದೆವ್ವಗಳು ಕುಣಿಯುತ್ತಿದ್ದವು ಧೈರ್ಯವಂತನಾದ ಬಚ್ಚೇಗೌಡ ತಾನೂ ಅವುಗಳ ಮಧ್ಯೆ ಸೇರಿಸಿಕೊಂಡು ಕುಣಿಯುತ್ತಿರುವಾಗ ದೆವ್ವವೊಂದರ ರೋಮಗಳನ್ನ ಕತ್ತರಿಸಿಕೊಂಡು ತನ್ನ ತೊಡೆಯನ್ನು ಸೀಳಿಕೊಂಡು ಒಳಗಡೆ ಸೇರಿಕೊಂಡು ಬಿಟ್ಟ. ದೆವ್ವಗಳು ಆ ಕೃತ್ಯದಿಂದ ಹೆದರಿ ರೋಮಗಳನ್ನು ವಾಪಸ್ಸು ಕೊಡಲು ಕೇಳಿಕೊಂಡವು, ಆದರೆ ಬಚ್ಚೇಗೌಡನಾದರೂ ದೇವಾಲಯವೊಂದನ್ನು ಕಟ್ಟಿ ಕೊಟ್ಟರೆ ಮಾತ್ರ ವಾಪಸ್ಸು ಕೊಡುವುದಾಗಿ ಹೇಳಿದಾಗ ದೆವ್ವಗಳು ಒಂದೇ ದಿನದಲ್ಲಿ ದೇವಾಲಯವನ್ನು ಕಟ್ಟಿಕೊಡುವುದಾಗಿ ಭೂಮಿ ತಾಯಿಯ ಮೇಲೆ ಆಣೆ ಮಾಡಿದವು.

ಬಚ್ಚೇಗೌಡ ಒಪ್ಪಿಕೊಂಡು ಮನೆಗೆ ವಾಪಸ್ಸು ಬಂದು ತಂದೆಯ ಜೊತೆ ನಡೆದ ಕಥೆಯನ್ನೆಲ್ಲ ವಿವರಿಸಿದ.

ಅವನ ತಂದೆಯೆಂದರು ಈ ನಿನ್ನ ಅಚಾತುರ್ಯದಿಂದಾಗಿನಮ್ಮ ವಂಶ ನಿರ್ವಂಶವಾದೀತು ಎಂದು ಹೆದರಿ ಇಬ್ಬರು ದೆವ್ವಗಳಿದ್ದ ಜಾಗಕ್ಕೆ ಬಂದಾಗ ಕೋಳಿ ಕೂಗುವ ಜಾವವಾಗಿದ್ದಿತು. ಅದಾಗಲೇ ದೇವಾಲಯ ನಿರ್ಮಾಣ ಕಾರ್ಯ ಮುಗಿಯುತ್ತಾ ಬಂದಿದ್ದು, ಗರ್ಭಗುಡಿಯ ಛಾವಣಿಯ ಮೇಲೆ ಮೂರು ಚಪ್ಪಡಿಗಳನ್ನು ಮುಚ್ಚುವುದನ್ನು ಮಾತ್ರ ಬಾಕಿ ಉಳಿದಿದ್ದಿತಂತೆ, ನರಮಾನವರನ್ನು ಕಂಡು ದೆವ್ವಗಳು ತಮ್ಮ ನಿರ್ಮಾಣ ಕೆಲಸವನ್ನು ಅಷ್ಟಕ್ಕೆ ನಿಲ್ಲಿಸಿ ಬಿಟ್ಟವು. ಆ ಮೇಲೆ ರೋಮಗಳನ್ನು ವಾಪಸ್ಸು ಪಡದ ದೆವ್ವಗಳು ಮಾಯವಾದವಂತೆ ಈ ಕಾರಣದಿಂದಾಗಿಯೇ ಬಚ್ಚೇಗೌಡನ ವಂಶ ಮುಂದೆ ಬೆಳೆಯಲೆ ಇಲ್ಲ ಎಂಬ ಪ್ರತೀತಿ.

ಇದೊಂದು ಅಪ್ಪಟ್ಟ ದಂತ ಕಥೆ. ಅತೀತ ಶಕ್ತಿಯನ್ನು ನಂಬುವ ಮನುಷ್ಯರ ರೋಚಕ ಕಲ್ಪನೆಯೂ ಹೌದು. ದಯಾಳು ಬಚ್ಚೇಗೌಡ ಈ ದೇವಾಲಯವನ್ನು ನಿರ್ಮಿಸಿದೆನೆಂಬುದು ಚಾರಿತ್ರಿಕ ಸತ್ಯ. ಈ "ದಯಾಳು" ಪದವೇ ತೆಲಗಿನ 'ದಯ್ಯಾಲು' ಪದಕ್ಕೆ ಸಮೀಕರಣಗೊಂಡು ಬಹುಶಃ ಇಂಥ ರೋಚಕ ದಂತ ಕಥೆಯ ಹುಟ್ಟಿಗೆ ಕಾರಣವಾಗಿದೆ ಎಂಬ ತೀರ್ಮಾಣಕ್ಕೆ ಬರುವುದು ಕಷ್ಟವೇನಲ್ಲ.

ಒಟ್ಟಾರೆ ಇತಿಹಾಸ ದಂತಕಥೆಗಳ ಮೂಲಕ ಈ ಸಂದರೇಶ್ವರ ದೇವಾಲಯ ದೇವನಹಳ್ಳಿ ತಾಲ್ಲೂಕಿಗೆ ನಮ್ಮ ಪೂರ್ವಿಕರು ಕೂಡ ಮಾಡಿದ ಅತ್ಯುತ್ತಮ ಶಿಲ್ಪ ಕೊಡುಗೆ. ಅದನ್ನ ಜತನದಿಂದ ಕಾಪಾಡುವುದು ಈಗಿನ ಪೀಳಿಗೆಯ ಜವಾಬ್ದಾರಿ. ಸುಂದರ ಕಲ್ಯಾಣಿಯೊಂದು ದೇವಾಲಯದ ಮುಂಭಾಗದಲ್ಲಿದ್ದು ಗಿಡಗಂಟಿಗಳಿಂದ ಆವರಿಸಿಕೊಂಡು ಹಾಳು ಸುರಿಯುತ್ತಿದ್ದು. ಇದರ ಕಾಯಕಲ್ಪ ಮಾತ್ರ ತುರ್ತಾಗಿ ಆಗಬೇಕಾಗಿದೆ.

## ಯಲಿಯೂರು ವೀರಣ್ಣ ಸ್ವಾಮಿಯ ಐತಿಹ್ಯ

ದೇವನಹಳ್ಳಿ ತಾಲ್ಲೂಕಿನ ಯಲಿಯೂರು ಗ್ರಾಮದ ಸಾಂಸ್ಕೃತಿಕ ಕ್ಷೇತ್ರ ಜನಪದ ಸಂಸ್ಕೃತಿಯ ಕೇಂದ್ರವಾಗಿದ್ದು, ಇಲ್ಲಿನ ಗ್ರಾಮ ದೇವತೆ ಶ್ರೀ ವೀರಣ್ಣಸ್ವಾಮಿ ನೆಲೆಗಟ್ಟಿನ ಮೇಲೆ ನಡೆಯುವ ಜಾತ್ರೆಯು ವಿಶೇಷವಾಗಿ ಮಹತ್ವ ಪಡೆದುಕೊಂಡಿದೆ. ಗತಕಾಲದ ಇತಿಹಾಸದಲ್ಲಿ ಯಲಿಯೂರು ಗ್ರಾಮ ಕೋಲಾಟದಲ್ಲಿ ಪ್ರಭುತ್ವ ಸಾಧಿಸಿಕೊಂಡೇ ಬರುತ್ತಿದ್ದ ಸಂದರ್ಭದಲ್ಲಿ ಒಮ್ಮೆ ಚಿಂತಾಮಣಿ ಬಳಿ ಇರುವ ವಾನರಾಸಿ ಗ್ರಾಮದ ವೀರಣ್ಣಸ್ವಾಮಿ ಜಾತ್ರೆ ನಡೆಯುತ್ತಿದ್ದ ವೇಳೆ ಜಾತ್ರಾ ಮಹೋತ್ಸವದಲ್ಲಿ ಎಂದಿನಂತೆ ವಿವಿದೆಡೆಯ ಗ್ರಾಮಗಳಿಂದ ಕೋಲಾಟಕ್ಕೆ

ಆಹ್ವಾನವನ್ನು ಜಾತ್ರಾ ಮಂಡಳಿ ಆಹ್ವಾನಿಸಲಾಗಿ ಅದರಂತೆ ಯಲಿಯೂರು ಗ್ರಾಮದ ಕೋಲಾಟ ತಂಡ ಭಾಗವಹಿಸಿತ್ತು.

ಕೋಲಾಟ ತಂಡಗಳಲ್ಲಿ ಕಲೆ ಪ್ರದರ್ಶನಗೊಳ್ಳುತ್ತಿರುವ ಸಂದರ್ಭದಲ್ಲಿ ವಾನರಾಸಿ ದೇವಾಲಯದಲ್ಲಿ ಪ್ರತಿಷ್ಠಾಪಿಸಲಾಗಿದ್ದ ಶ್ರೀವೀರಣ್ಣಸ್ವಾಮಿ ಮೂರ್ತಿ ಕೋಲಾಟವಾಡುತ್ತಿದ್ದ ಯಲಿಯೂರು ಗ್ರಾಮದ ಮುಖಂಡರು, ಯಲಿಯೂರು ಗ್ರಾಮದ ತಂಡ ವಾಮಾಚಾರ ಮಾಡಿ ಸ್ವಾಮಿಯನ್ನು ತಮ್ಮದಾಗಿಸಿಕೊಂಡಿದ್ದಾರೆ ಎಂದು ದೂರಿದರು. ನಂತರ ಮೂರ್ತಿಯನ್ನು ಸ್ವಸ್ಥಾನಕ್ಕೆ ಪ್ರತಿಷ್ಠಾಪಿಸಿ ಕೋಲಾಟ ಪುನಃ ಆರಂಭಿಸಿದಾಗ ಮತ್ತೆ ಶ್ರೀ ವೀರಣ್ಣಸ್ವಾಮಿ ಮೂರ್ತಿ ಯಲಿಯೂರು ಗ್ರಾಮದ ತಂಡದ ಮಧ್ಯೆ ಬಂದು ನಿಂತಾಗ ನಂತರ ಮರು ಪ್ರತಿಷ್ಠಾಪಿಸಿದರು. ಮತ್ತೆ ಮತ್ತೆ ಇದೇ ಕಥೆ ಪುನರಾವರ್ತನೆಯಾದಾಗ ಸ್ವಸ್ಥಾನಕ್ಕೆ ಪ್ರತಿಷ್ಠಾಪಿಸಿ ಸರಪಳಿಯಿಂದ ಬಂಧಿಸುತ್ತಾರೆ.

ಅನಂತರ ಕೋಲಾಟ ಮತ್ತೆ ಆರಂಭವಾದಾಗ ಕೋಲಾಟದ ನೃತ್ಯವನ್ನು ಮೆಚ್ಚಿದ ಶ್ರೀ ವೀರಣ್ಣಸ್ವಾಮಿ ಶಿರಭಾಗ ಛೇದಿಸಿಕೊಂಡು ಯಲಿಯೂರು ತಂಡದ ಮಧ್ಯಭಾಗದಲ್ಲಿ ಬಿದ್ದ ಪರಿಣಾಮ ಮುಖಂಡರ ಒಪ್ಪಿಗೆ ಮೇರೆಗೆ ತಲೆಭಾಗವನ್ನು ತೆಗೆದುಕೊಂಡು ಬಂದು ಯಲಿಯೂರು ಗ್ರಾಮದಲ್ಲಿ ಒಂದು ಗುಡಿಸಿಲಿನಲ್ಲಿ ಪ್ರತಿಷ್ಠಾಪಿಸಿದರು.

ಅಂದಿನಿಂದ ಈ ಮೂರ್ತಿಗೆ ಗ್ರಾಮ ಮಟ್ಟದಲ್ಲಿ ವಾರ್ಷಿಕ ಜಾತ್ರೆ ಮತ್ತು ಹತ್ತು ಹನ್ನೆರಡು ವರ್ಷಗಳಿಗೊಮ್ಮೆ ಜಾತ್ರೆಯಲ್ಲಿ ಯಲಿಯೂರು ಗ್ರಾಮ ಪಂಚಾಯತಿಯ ಏಳೂರುಗಳಾದ ಚಿಕ್ಕತತ್ತಮಂಗಲ, ದೊಡ್ಡತತ್ತಮಂಗಲ, ತಮ್ಮೇನಹಳ್ಳಿ, ರಾಮನಹಳ್ಳಿ ಮತ್ತು ರಾಮನಹಳ್ಳಿ ಖಾನಿ, ಹಳಿಯೂರು ಗ್ರಾಮಗಳ ಗ್ರಾಮಸ್ಥರೆಲ್ಲ ಸೇರಿಕೊಂಡು ಜಾತ್ರೆ ಮಾಡುತ್ತಾರೆ. ಜಾತ್ರೆ ದಿನ ಮಧ್ಯಾಹ್ನ ಮೂರ್ತಿಯ ತಲೆ ಭಾಗವನ್ನು ವಂಶಸ್ಥರು ಅಲಂಕರಿಸಿ ತಲೆ ಮೇಲೆ ಹೊತ್ತು ಗ್ರಾಮದ ಬೀದಿಗಳಲ್ಲಿ ಮೆರವಣಿಗೆ ನಡೆಸುತ್ತಾರೆ. ಎಲ್ಲ ಮನೆಗಳಲ್ಲಿ ಪೂಜೆ ನಡೆದ ನಂತರ ಮಧ್ಯರಾತ್ರಿ ಪ್ರಾಣಿಬಲಿ ನಡೆಯುತ್ತದೆ. ನಂತರ ಬೆಳಗಿನ ಜಾವ ದೇವರ ಮೂರ್ತಿಯನ್ನು ಯಥಾ ಸ್ಥಿತಿಯಲ್ಲಿ ಪ್ರತಿಷ್ಠಾಪಿಸಲಾಗುತ್ತೆ. ಅಂದು ಕೋಲಾಟ ನೃತ್ಯ ಇರುತ್ತದೆ.

ಈ ದೇಗುಲ ೩೦೦ ವರ್ಷದ ಪುರಾತನ ದೇವಾಲಯವೆಂದು ಹೇಳಿದರೂ ಸದ್ಯಕ್ಕೆ ಖಚಿತ ಪುರಾವೆಗಳಿಲ್ಲ. ಅಮಾವಾಸ್ಯೆ ದಿವಸ ವೀರಣ್ಣಸ್ವಾಮಿ ದೇವರು ಬಿಳಿ ಕುದುರೆಯ ಮೇಲೆ ಬಿಳಿ ವಸ್ತ್ರಧರಿಸಿ ಗ್ರಾಮವನ್ನೊಮ್ಮೆ ಪ್ರದಕ್ಷಿಣೆ ಮಾಡುತ್ತಿರುತ್ತಾನೆ ಎಂಬುದು ಅಂದಿನ ಕಾಲದವರು ನೋಡಿರುವ ಸಂಗತಿಯಾಗಿದ್ದು ಇಂದಿನವರು ನಂಬುವಂತದ್ದಾಗಿದೆ.

**ಬೊಮ್ಮನಹಳ್ಳಿಯ ದೊಂಬ್ರಮ್ಮನ ಐತಿಹ್ಯ ದೇವನಹಳ್ಳಿ**

ಬೊಮ್ಮನಹಳ್ಳಿಯು ದೇವನಹಳ್ಳಿ ತಾಲ್ಲೂಕು ಕೇಂದ್ರದಿಂದ ಸುಮಾರು ೫ ಕಿ.ಮಿ ದೂರದಲ್ಲಿರುವ ಪುಟ್ಟ ಗ್ರಾಮ. ಸುಮಾರು ವರ್ಷಗಳ ಹಿಂದೆ ಬೊಮ್ಮನಹಳ್ಳಿ ಗ್ರಾಮದ ಕೂಗಳತೆಯಲ್ಲಿ ಮತ್ತೊಂದು ಗ್ರಾಮವಿತ್ತೆಂದು ಹಿರಿಯರು ಹೇಳುವುದುಂಟು. ಗತ ಕಾಲದಲ್ಲಿ ದೊಂಬರಾಟ ಆಡುವ ಜನ ತಮ್ಮ ಹೊಟ್ಟೆ ಪಾಡಿಗಾಗಿ ಊರೂರು ಅಲೆದುಕೊಂಡು ಈ ಊರಿಗೆ ಬಂದ ಅವರು ಇಲ್ಲಿ ಗುಡಿಸಲು ಹಾಕಿಕೊಂಡು ವಾಸವಾಗಿದ್ದರು. ಆಗ ಒಂದು ದಿನ ಅದೇ ಗ್ರಾಮದಲ್ಲಿ ದೊಂಬರಾಟವನ್ನು ಏರ್ಪಡಿಸಲಾಗಿದ್ದು, ಊರಿನ ಜನರೆಲ್ಲಾ ನೆರೆದಿದ್ದರು, ಅದರಲ್ಲಿ ಒಬ್ಬ ದೊಂಬರಾಟದ ಹುಡುಗಿ ಅತ್ಯಂತ ಸುರದ್ರೂಪಿಯಾಗಿರುತ್ತಾಳೆ. ಅವಳೇ ದೊಂಬರಾಟದ ಮುಖ್ಯ ಅಂಗ. ಅವಳು ದೊಂಬರಾಟ ಆಡುತ್ತಿದ್ದಾಗ ಪಕ್ಕದ ಊರಿನ ಬೂದಿಹಾಳದಲ್ಲಿ ಒಬ್ಬ ಮಾಂತ್ರಿಕನಿದ್ದು, ಅವನು ಮಹಡಿ ಮನೆಯಲ್ಲಿ ವಾಸವಾಗಿದ್ದನು, ಮಹಡಿ ಮನೆಯ ಮೇಲಿಂದಲೇ ದೊಂಬರಾಟವನ್ನು ವೀಕ್ಷಿಸುತ್ತಿದ್ದನು. ಅವಳ ಅಂದಕ್ಕೆ ಮನಸೋತು ಅವಳನ್ನು ಇಷ್ಟಪಡುವುದಾಗಿ ತಿಳಿಸುತ್ತಾನೆ. ಇದಕ್ಕೆ ಆಕೆ ಒಪ್ಪುವುದಿಲ್ಲ. ಆದ ಕಾರಣ ಆ ಮಾಂತ್ರಿಕನು ಕೋಪಗೊಂಡು, ಹಗ್ಗದ ಮೇಲೆ ಕೋಲುಹಿಡಿದು ದೊಂಬರಾಟ ಆಡುತ್ತಿದ್ದ ಹೆಂಗಸನ್ನು ಮಾಂತ್ರಿಕನು ತನ್ನ ಮಂತ್ರ ಶಕ್ತಿಯಿಂದ ಕೆಡಿಸುತ್ತಾನೆ. ಆಗ ಆಕೆ ಅಲ್ಲೆ ಕೆಳಗೆ ಬಿದ್ದು ಪ್ರಾಣ ಬಿಡುತ್ತಾಳೆ ಇದರಿಂದ ಕುಪಿತಗೊಂಡ ದೊಂಬರಾಟದ ಜನರು ಬೂದಿಹಾಳ ಗ್ರಾಮವನ್ನು ಬೆಂಕಿ ಹಚ್ಚಿ ಸುಟ್ಟರೆಂದು ಇದರಿಂದ ಈ ಗ್ರಾಮಕ್ಕೆ ಬೂದಿಹಳ್ಳ(ಬೂದಿಹಾಳ) ಎಂಬ ಹೆಸರು ಬಂದಿದೆ ಎಂಬುದು ಪ್ರತೀತಿ.

ದೊಂಬರಾಟದ ಹುಡುಗಿ ಬಿದ್ದ ಜಾಗದಲ್ಲೆ ಅವಳ ಶವವನ್ನು ಅಲ್ಲೇ ಮಣ್ಣು ಮಾಡಿ ಅಲ್ಲಿ ಒಂದು ಸಣ್ಣ ಕಲ್ಲನ್ನು ನೆಟ್ಟು ಅವರು ಆ ಗ್ರಾಮವನ್ನು ತೊರೆದು ಬೇರೊಂದೂರಿಗೆ ಹೊರಟು ಹೋಗುತ್ತಾರೆ. ಆನಂತರ ಆ ಕಲ್ಲು ಕಾಲ ಕ್ರಮೇಣ ಬೆಳೆಯುತ್ತಾ ಇದ್ದು ಈಗ ಎತ್ತರದ ಕಂಬಂದತೆ ಕಾಣುತ್ತಿದ್ದು, ಸುಮಾರು 20 ಅಡಿ ಎತ್ತರಕ್ಕೆ ಬೆಳೆದಿದೆ, ಹೊಟ್ಟೆಪಾಡಿಗಾಗಿ ಈ ಊರಿಗೆ ಬಂದಿದ್ದರೂ ಸಹ ಹಣದಾಸೆಗೆ ಯಾರಿಗೂ ಬಲಿಯಾಗಲಿಲ್ಲ. ಈಗಲೂ ಈ ಊರಿನವರು ಹಾಗೂ ಬೇರೆ ಬೇರೆ ಊರುಗಳಿಂದ ಭಕ್ತಾಧಿಗಳು ಬಂದು ಈ ಕಲ್ಲಿಗೆ ಪೂಜೆ ಸಲ್ಲಿಸುತ್ತಾರೆ. ಏಕೆಂದರೆ ಮಕ್ಕಳಾಗದಿದ್ದವರು ಹೊಟ್ಟೆ ನೋವು ಇರುವವರು, ಮದುವೆಯಾಗದವರು ಹೀಗೆ ಹಲವಾರು ತೊಂದರೆ ಇರುವವರು ಪೂಜೆ ಮಾಡಿದ್ರೆ ಅವರಿಗೆ ಒಳ್ಳೆಯದಾಗಿದೆಯೆಂದು ಸ್ಥಳೀಯರು ಹೇಳುತ್ತಾರೆ. ಮಕ್ಕಳಾಗದಿದ್ದವರಿಗೆ ಮಕ್ಕಳಾಗಿವೆಯಂತೆ! ಊರ ಜಾತ್ರೆ ಸಮಯದಲ್ಲಿ ಆ ಕಂಬಕ್ಕೆ ದೀಪೋತ್ಸವವನ್ನು ಮಾಡುತ್ತಾರೆ. ಜೋರಾಗಿ ಮಳೆ

ಬಂದು ಆ ಕಂಬಕ್ಕೆ ಸಿಡಿಲು ಬಡಿದಾಗ ಊರೆಲ್ಲಾ ಬೆಳಕಾಗುತ್ತೆ. ಕಂಬದ ತುದಿಕಲ್ಲು ಸಿಡಿಲಿಗೆ ಬಿದ್ದರೂ ಯಾರ ಕಣ್ಣಿಗೂ ಕಾಣಿಸುವುದಿಲ್ಲವಂತೆ. ಆ ಕಲ್ಲಿಗೆ ಸೋಮವಾರ, ಮಂಗಳವಾರ, ಶುಕ್ರವಾರ ಪೂಜೆ ಸಲ್ಲಿಸುತ್ತಾರೆ.

**ಸಾವಿರ ಕಣ್ಣಮ್ಮ:**

ದೊಡ್ಡಬಳ್ಳಾಪುರ ತಾಲ್ಲೂಕಿನ ಕಛೇರಿ ಪಾಳ್ಯದಲ್ಲಿರುವ ಈ ದೇವತೆ ತುಂಬಾ ಅಪರೂಪ ಮತ್ತು  ಅಕರ್ಷನೆಯಿಂದ ಕೂಡಿರುವ ದೇವತೆ, ಪಾಳ್ಯದ ಜನಕ್ಕೆ ಪಾಪವನ್ನು ಕಳೆಯುವ ದೇವತೆ ಮತ್ತು ಆರಾಧನಾ ಮೂರ್ತಿ, ಈ ದೇವತೆಯ ಪೂಜಾ ಕಾರ್ಯಗಳಿಗೆ ರಕ್ತದ ಹೊಳೆ ಹರಿದಿದೆ, ಈ ದೇವತೆಗೆ ಸುಮಾರು ೪೦೦ ವರ್ಷಗಳ ಇತಿಹಾಸವಿದೆಯೆಂದು ಪೂಜೆ ಮಾಡುವ ಪೂಜಾರಿ ಮುನಿಯಪ್ಪನವರು ಹೇಳುತ್ತಾರೆ.

ಈಕೆಗೆ ೯ ಮಂದಿ ಅಕ್ಕ ತಂಗಿಯರು ಮತ್ತು ಒಬ್ಬ ಸಹೋದರನಿದ್ದಾನಂತೆ ಅವರು ಮುತ್ಯಾಲಮ್ಮ, ಅಣ್ಣಮ್ಮ, ದೊಡ್ಡಮ್ಮ, ಕುಕ್ಕಲಮ್ಮ, ಸೊಲ್ಲಾಪುರದಮ್ಮ, ಗಂಗಮ್ಮ, ಎಲ್ಲಮ್ಮ, ಮಾರೆಮ್ಮ, ನೆಂದು ಹೇಳುತ್ತಾರೆ, ಬಹುಶಃ ಈ ಸೋದರ ವಾತ್ಸಲ್ಯದಿಂದ ಒಟ್ಟಾಗಿ ಹಬ್ಬವನ್ನು ಆಚರಣೆ ಮಾಡುವುದರಿಂದ ಹೆಚ್ಚು ಆಕರ್ಷಣೆ ಇರುತ್ತದೆ. ದೇವರುಗಳ ಮೂಲಕವಾದರೂ ಸೋದರ ಭಾವನೆಗಳನ್ನು ಕಂಡುಕೊಳ್ಳಬೇಕು ಎಂಬ ಕಾರಣವೂ ಇದ್ದಿರಬಹುದು.

ಇವರು ಹೇಳಿರುವ ಈ ಎಲ್ಲಾ ದೇವತೆಗಳು ಬಲಿದೇವತೆಗಳೇ ಆಗಿವೆ. ಇವೆಲ್ಲವೂ ಈ ಸುತ್ತಮುತ್ತಲ ಪ್ರದೇಶಗಳಲ್ಲೇ ಇವೆ, ಸೋದರನಾದ ಮುನೇಶ್ವರನು ಈ ದೇವಾಲಯದ ಸ್ವಲ್ಪ ಹತ್ತಿರದಲ್ಲೇ ಇದ್ದಾನೆ. ಸಾವಿರ ಕಣ್ಣನ್ನು ಈ ದೇವತೆಗೆ ಕರುಣಿಸಿರುವ ಕಾರಣವೇನಿರಬಹುದೆಂದು ವಿಚಾರಿಸಿದಾಗ, ಎರಡು ಅಥವಾ ಮೂರು ಕಣ್ಣುಗಳು ಇದ್ದರೆ ನಮ್ಮ ದೇವತೆಗೆ ಸಾಕಾಗುವುದಿಲ್ಲ. ಏಕೆಂದರೆ ನಾವು ಸಾವಿರಾರು ರೀತಿಯ ಬದುಕನ್ನು ಕಟ್ಟಿಕೊಂಡಿರುವವರು. ನಮ್ಮನ್ನು ನೋಡಿಕೊಳ್ಳಲು ಹೆಚ್ಚು ಕಣ್ಣುಗಳು ಬೇಕಾಗುತ್ತದೆ ಎನ್ನುತ್ತಾರೆ.

ಹೀಗಾಗಿ ಸಾವಿರ ಕಣ್ಣಮ್ಮನ ಜವಬ್ದಾರಿ ಹೆಚ್ಚು. ಈ ಕೇರಿಯ ಜನರಿಗೆ ಯಾವುದೇ ತೊಂದರೆ ಬಾರದ ಹಾಗೆ ಅಮ್ಮ ನೋಡಿಕೊಳ್ಳುತ್ತಾಳೆ. ಈ ಹುಲುಮಾನವರ ಕಿತಾಪತಿಗಳನ್ನು ನೋಡಿಕೊಳ್ಳಲು ಭಯಂಕರವಾದ ಉಗ್ರ ಸ್ವರೂಪವನ್ನು ತಾಳಿದ್ದಾಳೆ. ಈ ಪ್ರದೇಶದಲ್ಲಿ ಬೆವರಿನ ಮಕ್ಕಳೇ ಹೆಚ್ಚಿಗೆ ಇರುವುದರಿಂದ ಕೂಲಿ ನಾಲಿ ಮಾಡಿ ಜೀವನ ಸಾಗಿಸುತ್ತಾರೆ. ಕೂಲಿ ಸಿಗದೆ ಇದ್ದಾಗ ಕಳ್ಳತನಕ್ಕೂ ಸಿದ್ದವಿರುತ್ತಾರೆ. ಅಂತಹವರಿಗೆ ಪಾಠ ಕಲಿಸಲು ಸಾವಿರಕಣ್ಣಮ್ಮ ಕಾಯುತ್ತಿರುತ್ತಾಳೆ, ಹೀಗೆ ಕಳ್ಳತನ ಮಾಡಿ ಸಿಕ್ಕಿ ಹಾಕಿ ಕೊಂಡಿರುವವರಿಗೆ

ಮೂರ್ಛೆ ಹೋಗುವ ಶಿಕ್ಷೆಯನ್ನು ಕಣ್ಣಮ್ಮ ಕೊಟ್ಟಿದ್ದಾಳಂತೆ, ಮಕ್ಕಳಿಲ್ಲದವರಿಗೆ ಸಂತಾನ ಫಲವನ್ನು ಕೊಡುವ ಸಮೇತಾನ ಲಕ್ಷ್ಮೀ ಕೂಡ. ಈ ದೇವತೆಗೆ ಘಂಟಿ ಮಾಡಿಸಿಕೊಟ್ಟರೆ ಮಕ್ಕಳಾಗುತ್ತವಂತೆ.

ಮಹಾ ನವಮಹಿಯಲ್ಲಿ ದೇವಿಯನ್ನು ಹತ್ತು ದಿವಸ ಪಟ್ಟಕ್ಕೆ ಕುಳ್ಳಿರಿಸಿ ಪ್ರತಿದಿನವೂ ಭಯ ಭಕ್ತಿಯಿಂದ ಪೂಜಾ ವಿಧಾನಗಳನ್ನು ನೆರವೇರಿಸುತ್ತಾರೆ, ಶಿಷ್ಠದೇವತೆಗಳನ್ನು ಹೆಚ್ಚು ದಿನ ಪಟ್ಟಕ್ಕೆ ಕೂರಿಸುವುದಿಲ್ಲ, ದೇವಿಯ ಆಚರಣೆಯ ಮುಖಾಂತರವಾದರೂ ಒಂದಷ್ಟು ಸ್ವಚ್ಚತೆ ಮತ್ತು ಸತ್ಯತೆ ಕಾಪಾಡಿಕೊಳ್ಳುವ ಸದುದ್ದೇಶದಿಂದ ೧೦ ದಿನ ಪಟ್ಟಕ್ಕೆ ಕೂರಿಸುವ ಪದ್ದತಿ ಜಾರಿಗೆ ತಂದಿರಬೇಕು.

ಈ ದೇವಿಯ ಜಾತ್ರೆಯಲ್ಲಿ ಡೋಲು, ತಮಟೆ, ಡ್ರಮ್ ಡೋಲು ತಂದು ಬಾರಿಸುತ್ತಾರೆ, ಆ ಶಾಸ್ತ್ರೀಯ ಕುಣಿತ ತಮಟೆ ನಾದಕ್ಕೆ ತಕ್ಕಂತಿರುತ್ತೆ. ಮತ್ತೇರಿದವರಂತೂ ಆಯಾಸವಿಲ್ಲದೆ ಕುಣಿಯುತ್ತಾರೆ. ತಮ್ಮ ಎಲ್ಲಾ ಕಷ್ಟಗಳನ್ನು ಮರೆತು ಸುಖದ ಲೋಲುಪ್ತತೆಯಲ್ಲಿ ತೇಲಾಡುತ್ತಿರುತ್ತಾರೆ. ಹೆಣ್ಣು ಮಕ್ಕಳಂತೂ ನೆಂಟರಿಷ್ಟರುಗಳನ್ನು ಮಾತನಾಡಿಸುತ್ತಾ ಮಾತಿನಲ್ಲೇ ಮುಳುಗಿರುತ್ತಾರೆ.

ಸಾಮಾನ್ಯವಾಗಿ ಪ್ರಾಣಿ ಬಲಿಯನ್ನು ದೇವಾಲಯದ ಹೊರಗಡೆ ಕೂಡುವುದು ಆಚರಣೆಯಲ್ಲಿದೆ. ಆದರೆ ಇಲ್ಲಿ ದೇವತೆಯ ಗರ್ಭ ಗುಡಿಯಲ್ಲಿ ಬಲಿಗಾಗಿ ತಂದಿದ್ದ ಪ್ರಾಣಿಗಳನ್ನು ಬಲಿ ಕೊಡುತ್ತಾರೆ. ಆದರೆ ಈಗ ಭಕ್ತರ ಒಳ ಜಗಳಗಳಿಂದ ಈ ಎಲ್ಲಾ ಪೂಜಾ ವಿಧಾನಗಳು ನಿಂತು ಹೋಗಿವೆ. ಇಲ್ಲಿಯ ಮತ್ತೊಂದು ವಿಶೇಷವೆಂದರೆ ಸೇಂದಿಯನ್ನು ತೀರ್ಥವೆಂದು ಕೊಡುತ್ತಾರೆ, ಪೂಜಾರಿಯ ಮಡಿಯಲ್ಲಿ ಇಟ್ಟುಕೊಂಡಿದ್ದ 5 ಕೆ ಜಿ ಅಕ್ಕಿ ಮತ್ತು ಮೊಸರು 'ಎಡೆ' ಇಟ್ಟು ಆಹುತಿ ಕೊಡುತ್ತಾರೆ. ಇದನ್ನು 'ಗಾವು' ಎಂದು ಕರೆಯುತ್ತಾರೆ, ಭಯದಿಂದ ದೂರವಾಗಲು ಈ ಗಾವು ಆಚರಣೆಯಲ್ಲಿರಬಹುದು. ಹೀಗೆ ಶಿಷ್ಟ ದೇವತೆಗಳ ಆರಾಧನೆಗಿಂತ' ಕ್ಷುದ್ರ ದೇವತೆಗಳ ಪೂಜೆ ಅತ್ಯಂತ ಆಕರ್ಷಕ ಮತ್ತು ಅಂತಃಕರಣ ಕಲಕುವ ಪೂಜಾ ವಿಧಾನಗಳಾಗಿ ಕಂಡುಬರುತ್ತವೆ

## ಅಡ್ಡಗಿಡ್ಡಪ್ಪನ ಐತಿಹ್ಯ

ಈ ಐತಿಹ್ಯವು ಹೊಸಕೋಟೆ ತಾಲ್ಲೂಕಿನ ಜಡಿಗೇನಹಳ್ಳಿ ಗ್ರಾಮದಲ್ಲಿ ಇರುವಂತಹ ಐತಿಹ್ಯವಾಗಿದೆ, ಈ ಐತಿಹ್ಯವು ಕೆಳವರ್ಗದ ದಲಿತ ನಾಯಕನಾದ ಅಡ್ಡಗಿಡ್ಡಪ್ಪನ

